ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ-೩

# ಆಶೀರ್ವಾದ




ಸಂಪಾದಕರು

**ಹೆಚ್. ಗಂಗಾಧರನ್, ಎಂ.ಎ., ಬಿ.ಎಲ್.**

ಅಡ್ವೊಕೇಟ್, ಮೈಸೂರು





ಪ್ರಕಾಶಕರು

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ

**ಶ್ರೀ ಶಿವರಾತ್ರೀಶ್ವರ ಮಹಾ ವಿದ್ಯಾಪೀಠ**

ರಾಮಾನುಜಾ ರಸ್ತೆ, .ಮೈಸೂರು

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ–೩

# ಆಶೀರ್ವಾದ





ಸಂಪಾದಕರು

**ಹೆಚ್. ಗಂಗಾಧರರ್, ಎಂ.ಎ., ಬಿ.ಎಲ್.**

ಅಡ್ವೊಕೇಟ್, ಮೈಸೂರು



ಪ್ರಕಾಶಕರು

**ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ**

ಶ್ರೀ ಶಿವರಾತ್ರೀಶ್ವರ ವಿದ್ಯಾಪೀಠ

ರಾಮಾನುಜಾ ರಸ್ತೆ, ಮೈಸೂರು.

॥ ಶ್ರೀ ॥

# ಪ್ರಸ್ತಾವನೆ



ಮಠಗಳು ಮಾನವರ ಅಭ್ಯುದಯಕ್ಕಾಗಿ ಉದಿಸಿದ ಕಲ್ಯಾಣ ಕೇಂದ್ರಗಳು. ಮಹಾನುಭಾವರು ನಿಂದ ನೆಲೆ ಮಹಾಮಂದಿರವಾಗಿ ಸಹಸ್ರಾರು ಸಂತಪ್ತರು ಆಧ್ಯಾತ್ಮ ದಾಹದ ದಣಿವಾರಿಸಿಕೊಂಡು ತೃಪ್ತರಾದ ಕ್ಷೇತ್ರಗಳು. ಆಧ್ಯಾತ್ಮಿಕ ಮತ್ತು ಧಾರ್ಮಿಕ ಹಿನ್ನೆಲೆಯುಳ್ಳ ಎಲ್ಲ ಜನಾಂಗದಲ್ಲೂ ಎಲ್ಲ ರಾಷ್ಟ್ರಗಳಲ್ಲಿ ಮಠಗಳ ಸಂಪ್ರದಾಯ ವಿವಿಧ ರೂಪದಲ್ಲಿ ನೆಲೆಗೊಂಡಿದೆ.

ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿರುವಷ್ಟು ಮಠಗಳು ಮತ್ತೆಲ್ಲಿಯೂ ಇರಲಾರವು. ಇಲ್ಲಿ ಊರಿಗೊಂದು ಕೇರಿಗೊಂದು ಮಠಗಳಿರುವುದನ್ನು ಕಾಣುತ್ತೇವೆ. ಲಕ್ಷಾಂತರ ಮಠಗಳು ನಶಿಸಿಹೋಗಿರುವುದನ್ನು ಸಹಾ ನಾವು ಕಾಣಬಹುದಾಗಿದೆ. ಆದರೆ ಪ್ರಾರಂಭದಿಂದಲೂ ಉಚ್ಚ ಪರಂಪರೆಯನ್ನು, ಇತಿಹಾಸವನ್ನು ಬೆಳೆಸಿಕೊಂಡು ಬಂದ ಮಠಗಳು ವಿರಳ.

ಮೈಸೂರು ಜಿಲ್ಲೆಯ, ನಂಜನಗೂಡು ತಾಲ್ಲೂಕಿನ ಸುತ್ತೂರಿನಲ್ಲಿ ಜಗದ್ಗುರು ಶ್ರೀ ಶಿವರಾತ್ರೀಶ್ವರರ ಶ್ರೀ ವೀರಸಿಂಹಾಸನ ಪೀಠವು ಹತ್ತು ಶತಮಾನಗಳಿಗೆ ಮೀರಿದ ಉಜ್ವಲ ಇತಿಹಾಸದಿಂದ ಕೂಡಿರುವುದನ್ನು ಸಾಧ್ಯವಾದಷ್ಟು ಮಟ್ಟಿಗೆ ಸಂಶೋಧನಾತ್ಮಕ ಆಧಾರಗಳಿಂದ ಈ ಗ್ರಂಥದಲ್ಲಿ ಅಳವಡಿಸಲಾಗಿದೆ. ಚೋಳರು, ಗಂಗರು, ಕದಂಬರು, ವಿಜಯನಗರದ ಸಾಮ್ರಾಟರೂ, ಶ್ರೀ ಮಠದಲ್ಲಿ ತೋರ್ಪಡಿಸುತ್ತಿದ್ದ, ಗೌರವದ ಸಂಕೇತವನ್ನು ಸೂಚಿಸಲು ಶಾಸನಗಳನ್ನು ಸಹ ಇಲ್ಲಿ ಸಂಗ್ರಹಿಸಿ ಅನುಬಂಧದಲ್ಲಿ ಕೊಡಲಾಗಿದೆ. ಶ್ರೀ ಮಠದ ಬಗ್ಗೆ ನಾವು ಸಂಶೋಧನೆಯ ಪೂರ್ಣರೂಪವನ್ನು ನಿರೂಪಿಸಿಲ್ಲ. ಇತಿಹಾಸ ಸಂಶೋಧಕರ ನೆರವಿಗಾಗಿ ಅಲ್ಲಲ್ಲಿ ಚದುರಿದ್ದ ಅಂಶಗಳನ್ನು ಒಂದೆಡೆ ಸಂಗ್ರಹಿಸುವ ಕಾರ್ಯವಷ್ಟೇ ನಡೆದಿದೆ. ಆದುದರಿಂದ ಸಂಶೋಧನಾ ಪಂಡಿತರು ಪ್ರಯತ್ನ ಮಾಡಿದರೆ ಕನ್ನಡ ನಾಡಿನ ಇತಿಹಾಸದ ಮೇಲೆ ಹೊಸ ಬೆಳಕನ್ನು ಚಲ್ಲಬಹುದೆಂದು ಆಶಿಸಲಾಗಿದೆ.

ಬೃಹತ್ತರ ಇತಿಹಾಸದ ಹಿನ್ನೆಲೆಯುಳ್ಳ ಶ್ರೀ ಮಠವು ಪ್ರಸಿದ್ಧ ಕಪಿಲಾನದಿಯ ತೀರದಲ್ಲಿರುವುದರಿಂದಲೂ, ಇಲ್ಲಿರುವ ಪ್ರಾಚೀನ ಕಲಾಕೃತಿಗಳಿಂದಲೂ, ಇಲ್ಲಿ ಮಹಾ

ತಪಸ್ವಿಗಳು ನೆಲಸಿದ್ದರೆಂಬುದು ನಿರ್ವಿವಾದವಾದ ಸಂಗತಿಯಾಗಿದೆ. ಮಹಿಮಾ ಪುರುಷರ ಪುಣ್ಯಪ್ರಭಾವವಲ್ಲದೆ, ಯಾವ ಸಂಸ್ಥೆಯೂ, ನಾವು ಇಂದು ಕಾಣುವಂತಹ ವೈಭವಕ್ಕೂ, ಉಜ್ವಲಭವಿಷ್ಯಕ್ಕೂ, ಕಾರಣವಾಗಲಾರದು. ಕಾಲಪರಿವರ್ತನೆ ಯಾದಂತೆ ಜನರ ಮನೋಭಾವನೆಗಳು, ರೂಪಾಂತರಗೊಂಡು, ಮಠಗಳೂ, ಮಠಾ ಧಿಪತಿಗಳೂ, ಮಾನವರ ಧರ್ಮ ಜಾಗ್ರತಿಗೆ ಕಾರಣರಾಗಿದ್ದರು. ಅನ್ನ ಬಟ್ಟೆಗಳ ಸಮಸ್ಯೆ ಇಲ್ಲದಿದ್ದಾಗ, ಮಾನವರಿಗೆ ಆತ್ಮಸಾಕ್ಷಾತ್ಕಾರದ ಕೊರತೆ ಒಂದೇ ಇತ್ತು. ಆದರೆ ಇಂದಿನ ಪರಿಸ್ಥಿತಿಯಲ್ಲಿ ಕೊರತೆ ಇಲ್ಲದ ಅಂಶವೇ ಇಲ್ಲಾ. ಬದುಕಲು ಬೇಕಾದ ಎಲ್ಲ ಅಂಶಗಳಲ್ಲೂ ಅಭಾವ ತುಂಬಿರುವಾಗ ಬದುಕಿನ ಅಂತರಂಗವಾದ ಆಧ್ಯಾತ್ಮದ ಹಂಬಲು, ಮಾನವನಿಗೆಲ್ಲಿ ಬರುತ್ತದೆ. ಆದುದರಿಂದ ಸುಧಾರಕ ಸಂಸ್ಥೆಗಳು ಎಲ್ಲ ಕೊರತೆಯನ್ನು ನೀಗುವ ಸ್ವಯಂಸೇವಕ ಸಂಸ್ಥೆಗಳಾಗಿ ರೂಪಾಂತರ ಹೊಂದಬೇಕಾ ದುದು ಅನಿವಾರ್ಯ. ಅದನ್ನರಿಯದ ಸಂಸ್ಥೆಗಳು ಇದ್ದರೂ ಸಮಾಜಕ್ಕೆ ಅವು ನಿರು ಪಯುಕ್ತ. ಮತ್ತೂ ಅವು ರಾಷ್ಟ್ರದ ದೃಷ್ಟಿಯಿಂದ ಯಾವ ಮಾನ್ಯತೆಯನ್ನು ಹೊಂದ ಲಾರವಷ್ಟೇ. ಕಾಲ ಧರ್ಮಗಳನ್ನರಿತು ನಡೆದ ಮಹಾನುಭಾವರು ಸುತ್ತೂರು ವೀರ ಸಿಂಹಾಸನದ ಸೂತ್ರವನ್ನು ಹಿಡಿದು ಸಂಸ್ಥೆಯನ್ನು ಬೆಳೆಸಿದ್ದಾರೆ.

ಶ್ರೀಮಠವು ಸಹಸ್ರ ವರ್ಷಗಳ ಹಿಂದಿನದೆಂದು ಹಲವಾರು ನಿದರ್ಶನದಿಂದ ಮನವರಿಕೆಯಾಗಿದೆ. ಶ್ರೀ ಪಂಡಿತಾರಾಧ್ಯರಿಂದ ರಚಿತವಾದ ಗಣ ಸಹಸ್ರ ನಾಮದಲ್ಲಿ ಮಹಾನುಭಾವರಾದ ಶ್ರೀ ಶಿವರಾತ್ರೀಶ್ವರ ಗುರುಗಳ ಹೆಸರಿರುವದರಿಂದಲೂ; ಕ್ರಿ.ಶ. 1090 ಮತ್ತು 1032 ಶಾಸನಗಳಿಂದ ಉಕ್ತವಾಗುವ ಶ್ರೀಈಶಾನೇಶ್ವರ ಒಡೆ ಯರವರು ಚೋಳರ ಕಂಚಿಯ ರಾಜೇಂದ್ರ ಚೋಳನ ಗುರುಗಳಾಗಿದ್ದುದರಿಂದಲೂ ಶ್ರೀ ಶಿವರಾತ್ರೀಶ್ವರರು ಈಶಾನೇಶ್ವರ ಒಡೆಯರವರ ಹಿಂದಿನ ಗುರುಗಳಾದುದರಿಂದಲೂ ಶ್ರೀ ಮಠವು ಸಹಸ್ರವರ್ಷಕ್ಕೆ ಹಿಂದಿನದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುತ್ತಾರೆ. ಸಂಸ್ಥೆಗಳು ಕೇವಲ ಪ್ರಾಚೀನತೆಯ ಕಾಲಮಾನದಿಂದಾಗಲೀ, ಐಶ್ವರ್ಯದ ಬಾಹುಳ್ಯ ದಿಂದಾಗಲೀ ಮಹತ್ವ ಪಡೆಯಲಾರವು. ಆ ಮಠಗಳಿಂದ ಸಮಾಜದ ಮೇಲೆ ಯಾವ ಪರಿಣಾಮವಾಗಿದೆಯೆನ್ನುವುದೇ ಮುಖ್ಯವಿಚಾರರ್ಹಸಂಗತಿ. ಆದುದರಿಂದ ಐತಿಹಾಸಿಕ ಗೊಂದಲದಲ್ಲಿ ತೊಳಲಾಡುವ ಲಘುಮನೋಭಾವ ಪ್ರಗತಿಸೂಚಕವೇನಲ್ಲ. ಈ ಮಠದ, ಹಿಂದಿನ ಮಹಾನುಭಾವರಾದ ಅನೇಕರು ಅಂದರೆ ಶ್ರೀ ಸಿದ್ದನಂಜದೇಶಿಕೇಂದ್ರರು. ಪರಮ ಶಿವಾಧಿಕ್ಯ ಶಿಖಾಮಣಿ ಎಂಬ ಕೃತಿಯನ್ನು, ಇಮ್ಮಡಿ ಶ್ರೀ ಶಿವರಾತ್ರೀಶ್ವರರು ವೃಷಭೇಂದ್ರ ವಿಜಯ ಪುರಾಣವನ್ನು, ಚನ್ನಬಸವ ಶಿವಾಚಾರ್ಯರು ಚೋಳ ರೇಣುಕ ಸಂವಾದಕ್ಕೆ ಟೀಕೆಯನ್ನು ಬರೆದಿರುವುದೂ, ಶ್ರೀ ಘನಲಿಂಗ ಚಕ್ರವರ್ತಿಗಳು ವಚನ ಸಾಹಿತ್ಯವನ್ನು ರಚಿಸಿರುವುದೂ, ಕನ್ನಡಸಾಹಿತ್ಯದ ಚರಿತ್ರೆಯಿಂದ ತಿಳಿದು ಬರುತ್ತದೆ. ಇವು ಶ್ರೀಮಠದ ಶಾಶ್ವತಕೀರ್ತಿಗೆ ಕಾರಣವಾಗಿವೆ. ಘನ ಲಿಂಗಿ ವಚನಗಳ ಪ್ರಕ

ಟಣೆಯಾಗಿದೆ. ಆದರೆ ಉಳಿದ ಕೃತಿಗಳ ಪ್ರಕಟಣೆಕಾರ್ಯವನ್ನು ಶೀಘ್ರವಾಗಿ ಕೈಕೊ
ಳ್ಳುವ ಆಕಾಂಕ್ಷೆ, ನಮ್ಮ ಮುಂದಿದೆ. ಇತ್ತೀಚೆಗೆ ಈ ಪೀಠದ ಅಧಿಪತಿಗಳಲ್ಲೊಬ್ಬ
ರಿಂದ ರಚಿತವಾದ, ಆ ಮುಗಿದೇವನ ಸಾಂಗತ್ಯವೆಂಬ ಕೃತಿ ನಮ್ಮ ಗಮನಕ್ಕೆ ಬಂದು,
ಅದರ ಪ್ರಕಟಣೆ ಕಾರ್ಯಕ್ಕೆ ಸಂಸ್ಥೆ ಗಮನ ಕೊಟ್ಟಿದೆ.

ಶ್ರೀ ಮಠದ ಪರಂಪರೆಯ ಮಹತ್ಕಾರ್ಯಗಳು ಸಂಶೋಧನೆಯ ಬೆಳಕು
ಕಾಣದೆ ಗುಪ್ತವಾಗಿಯೇ ಇದ್ದು, ಇತ್ತೀಚೆಗೆ ಸಂಸ್ಥೆಯ ಮನವೆಳೆಸಿರುವುದು ಸ್ತುತ್ಯಾ
ರ್ಹವಾಗಿಯೇ ಇದೆ. ಈ ಮಹಾತ್ಕಾರ್ಯಕ್ಕೆ ಉದಾರಾಶ್ರಯವನ್ನೂ, ಅವಕಾಶ
ವನ್ನು ನೀಡಿದ ಈ ಪೀಠದ 22ನೇ ಅಧಿಪತಿಗಳಾದ ಜಗದ್ಗುರು ಶ್ರೀ ಶಿವರಾತ್ರಿ
ಮಹಾಸ್ವಾಮಿಗಳವರು, ಅವರ ಸಾಹಸ ಸತ್ಕೃತಿಗಳೂ ಸಹಾ ನಮಗೆ ಪೂರ್ಣವಾಗಿ
ಪರಿಚಯವಾಗಿಲ್ಲ.

ಈ ಪ್ರಸ್ತಾವನೆಯಲ್ಲಿ ಅವರ ಜೀವನ ಮತ್ತೂ ಕೃತಿಯನ್ನು ಕುರಿತು ಸಂಕ್ಷಿಪ್ತ
ವಾಗಿ ವಿಚಾರಮಾಡಿದರೆ ಶ್ರೀ ಮಠದ ಪೂರ್ಣರೂಪ, ನಮ್ಮ ಮುಂದೆ ನಿಲ್ಲಬಹು
ದೆಂದು ಇಲ್ಲಿ ಕೊಡಲು ಯತ್ನಿಸಲಾಗಿದೆ. ಮಹಾನುಭಾವರ ಜೀವನವನ್ನು ಚಿತ್ರಿ
ಸುವುದು, ಮಹಾನುಭಾವರಿಗಲ್ಲದೆ, ಅನ್ಯರಿಗೆ ಅಸಾಧ್ಯ. ಆದರೂ ಅಲ್ಲಲ್ಲಿ ದೊರತ
ಸಾಮಗ್ರಿಗಳನ್ನು ಜೋಡಿಸಿ ಒಂದು ಜೀವನ ಚಿತ್ರದಮಾಲೆ ಮಾಡಿ ಅರ್ಪಿಸಲು
ಯತ್ನಿಸಿದೆ.

ಕಪಿಲಾ ನದೀತೀರದಲ್ಲಿ, ಊರಿನಿಂದ ಹೊರಭಾಗದಲ್ಲಿ ಆದಿಗುರು ಶ್ರೀ ಶಿವ
ರಾತ್ರೀಶ್ವರರ ಗದ್ದಿಗೆಯೊಂದಿದೆ. ಶ್ರೀ ಸುತ್ತೂರುಮಠದ ಎಲ್ಲಾ ಕಾರ್ಯಗಳಿಗೂ
ಇಲ್ಲಿಂದಲೇ ಆಧ್ಯಾತ್ಮಿಕ ಚೇತನ ದೊರೆಯುತ್ತಿದೆ. ಅಪ್ರತ್ಯಕ್ಷವಾದರೂ ನಂಬಿಗೆ
ಬದ್ಧವಾದ ಅಪ್ಪಣೆ ಇಲ್ಲದೆ, ಈ ಮಠದ ಮಠಾಧಿಪತಿಗಳು ಯಾವ ಕಾರ್ಯವನ್ನೂ
ನಡೆಸುವುದಿಲ್ಲ.

ಮಠಾಧಿಪತಿಗಳು ತಮ್ಮ ಉತ್ತರಾಧಿಕಾರಿಗಳನ್ನು ನಿಯಮಿಸುವಾಗಲೂ, ಆದಿ
ಗುರುಗಳ ಸೂಚನೆಯಂತೆಯೇ, ನಡೆಯಲಾಗುತ್ತಿದೆ. ಮಠದಲ್ಲಿ ಮಠಾಧೀಶ್ವರರ
ಪೂರ್ವಾಶ್ರಮ ಬಂಧುಗಳು, ಶ್ರೀ ಮಠದ ಸೇವಾಕಾರ್ಯಗಳನ್ನು ನಡೆಸಿಕೊಂಡು,
ಗುರುಭಕ್ತರು, ದೈವಭಕ್ತರೂ ಆಗಿ, ಇಲ್ಲಿಯೇ ನೆಲೆಸಿರುತ್ತಾರೆ. ಪೂರ್ಣ ನಿಷ್ಠಾ
ನಂತರ, ಉದರದಲ್ಲಿ ಜನಿಸಿದವರನ್ನು ಪೀಠಕ್ಕೆ ತಮ್ಮ ಉತ್ತರಾಧಿಕಾರಿಯಾಗಿ,
ನಿಯಮಿಸುತ್ತಾ ಬರುವುದು ಶ್ರೀಮಠದ ಪದ್ಧತಿಯಾಗಿದೆ. ಅಂತೆಯೇ ಇಂದಿನ
ಹಿರಿಯ ಜಗದ್ಗುರುಗಳವರು ಶ್ರೀಮಠದ ಕೀರ್ತಿಪ್ರಕಾಶಕ್ಕೆಂದು ಗುರುವಿನ ಅಪ್ಪಣೆ
ಯಂತೆ ಅವತರಿಸಿದ ಮಹಾಯೋಗೀಶ್ವರರಲ್ಲೊಬ್ಬರು.

ಮಹಾತ್ಕಾರ್ಯಗಳು ಮಹಾನುಭಾವರಾದವರಿಂದಲ್ಲದೆ, ಅನ್ಯರಿಂದ ಸಾಧ್ಯವಿಲ್ಲಾ. ಮಹಾತ್ಕಾರ್ಯಗಳಿಗಲ್ಲದೇ ಮಹಾನುಭಾವರು ಅವತರಿಸುವುದೂ ಇಲ್ಲಾ. ಮಾನವನ ಬಾಹ್ಯ ಶಕ್ತಿ ಎಷ್ಟೆ ಪ್ರಬಲವಾದರೂ ಅದರಿಂದಾಗುವ ಕಾರ್ಯ ಕ್ಷಣಿಕವೂ, ಅಪ್ರಯೋಜಕವೂ, ಆಗುತ್ತವೆ. ಯಾವ ಕಾರ್ಯಗಳು ಶಾಶ್ವತವೂ, ಲೋಕಕಲ್ಯಾಣ ಕಾರಕವೂ, ಆಗಿರುವುವೋ, ಅವೆಲ್ಲವೂ ಮಹಾತ್ಕಾರ್ಯಗಳು; ಮತ್ತು ಮಹಾತ್ಮರ ಅವತಾರದಿಂದ ಆದವುಗಳೆಂದೇ ಭಾರತೀಯರ ನಂಬಿಗೆ; ಒಂದು ಮಠದ ಆಶ್ರಯದಲ್ಲಿ ಲೋಕೋಪಯುಕ್ತವಾದ ಮಹಾತ್ಕಾರ್ಯಗಳು ನಡೆಯಬೇಕಾಗಿದ್ದರೆ, ಯಾವುದೋ ಒಂದು ಭವ್ಯಶಕ್ತಿ, ಹಿನ್ನೆಲೆಯಾಗಿ, ನಾನಾರೂಪಿನಲ್ಲಿ, ನಾನಾ ಕಾಲದಲ್ಲಿ, ಅವತಾರವೆತ್ತುವುದು, ಸಹಜವಾಗಿಯೇ ಇದೆ; ಸದ್ವಂಶದಲ್ಲಿ ದೈವಭಕ್ತರ ಉದರದಲ್ಲಿ ಜನಿಸಿದ ಹಸುಳೆಯನ್ನು, ಮಹಾತ್ಕಾರ್ಯಕ್ಕೆಂದೇ ತಂದೆ ತಾಯಿಗಳು ಸಂತೋಷದಿಂದ. ಗುರುವಿನ ಚರಣಕಮಲಗಳಿಗೆ ಸಮರ್ಪಿಸಿದರು. ಶ್ರೀ ಮಠದ ಹಿಂದಿನ ಗುರುಗಳಾದ ಶ್ರೀ ಸಿದ್ದಲಿಂಗಸ್ವಾಮಿಗಳವರು ಶ್ರೀ ಗುರುಕರುಣೆಯಿಂದ ಬಂದ ತಮ್ಮ ಉತ್ತರಾಧಿಕಾರಿಯಾಗಲೂ ಅರ್ಹರಾದ ಶಿಶುವನ್ನು ತಮ್ಮ ತಪಃಪ್ರಭಾವದ ಮಡಿಲಿನಲ್ಲಿ ಬೆಳೆಸಿದರು. ಶಿಶುವಿನ ವಯೋವಿಕಾಸವೂ, ಜ್ಞಾನಪ್ರಕಾಶವೂ, ಆತ್ಮಾನುಸಂಧಾನವಿಲಾಸವೂ ಶ್ರೀ ಸಿದ್ದಲಿಂಗಸ್ವಾಮಿಗಳವರ ತಪಃಪ್ರಭಾವದಲ್ಲಿಯೇ ನಡೆಯತೊಡಗಿತು. ತಾ॥ 21-5-1886 ರಲ್ಲಿ ಜನಿಸಿದ ಶ್ರೀ ಗುರುವರೇಣ್ಯಮೂರ್ತಿಯು ಶ್ರೀಮಠದ ಅಧಿಕಾರವನ್ನು ವಹಿಸಿ ಸಂಸ್ಥಾನದ ಭವಿತವ್ಯವನ್ನು ಉಜ್ವಲಗೊಳಿಸಬಲ್ಲ ಸೂಚನೆಗಳು ಮುಂದುಗಾಣಿಸುತ್ತಿದ್ದುವು.

## ಗುರುಕರುಣೆ

ಮಹಾನುಭಾವರಾಗುವವರ, ಗುಣಾವಳಿಗಳನ್ನು. ನಾವು ಎಳೆತನದಲ್ಲಿಯೇ ನಿರೀಕ್ಷಿಸಬಹುದು. ಶ್ರೀ ಸಿದ್ದಲಿಂಗಸ್ವಾಮಿಗಳವರು, ಈ ಲೌಕಿಕ ವ್ಯವಹಾರಗಳಲ್ಲಿ ಹೆಚ್ಚು ಮನವೆಳಸಿದವರಲ್ಲ. ಆದುದರಿಂದ ದೀರ್ಘಕಾಲ ಪೂಜಾನಿರತರಾಗಿರುವುದು ಜಪಾನುಸಂಧಾನದಲ್ಲಿ ತೊಡಗಿರುವುದು ಇವೇ ಅವರ ನಿತ್ಯನಿಯಮಂಗಳಾಗಿದ್ದುವು. ತಮ್ಮ ವಶಕ್ಕೆ ತೆಗೆದುಕೊಂಡ ಶಿಶುವು, ತನ್ನಲ್ಲಿರುವ ನಿಷ್ಠೆ ಮತ್ತು ಸೂಕ್ಷ್ಮ ದೃಷ್ಟಿಗಳನ್ನು ಪ್ರಕಟಗೊಳಿಸಲಾರಂಭಿಸಿತು. ಶ್ರೀಗಳವರು ಪೂಜೆಯಲ್ಲಿ ತೊಡಗಿದರೆ ಅಲ್ಲಿ ದೃಷ್ಟಿ ಮಗ್ನವಾಗಿರುವುದು ಮತ್ತು ಗುರುಸನ್ನಿಧಿಯಲ್ಲಿಯೇ ತನ್ನ ಎಲ್ಲ ವಿಹಾರಗಳನ್ನು ನಡೆಸುವುದರಲ್ಲಿ ತೊಡಗಿತು. ಆ ಎಳೆ ವಯಸ್ಸಿನಲ್ಲಿಯೇ, ಸಂಸಾರಿಗರ ಸಂಗದಿಂದ ದೂರವಾಗಿರುತ್ತಿತ್ತು. ಇಂತಹ ಬಾಲಯೋಗಿಗೆ ಸೂಕ್ತ ಶಿಕ್ಷಣಕೊಡುವುದು ಅವಶ್ಯಕವಾಗಿತ್ತು. ಆ ಸಮಯದಲ್ಲಿ ಎಲ್ಲ ದೃಷ್ಟಿಯಿಂದಲೂ, ಸುತ್ತೂರು ಮಠದ ಭವಿತವ್ಯವನ್ನು ಹಾರೈಸುತ್ತಿದ್ದವರೆಂದರೆ ಕಾರ್ಯದ ಮಠದ ಶ್ರೀ ಪ್ರಭುಸ್ವಾಮಿಗಳು.

ಅವರು ಮಹೋನ್ನತಯೋಗಿಗಳೂ, ಶಿವಾನುಭವಿಗಳೂ, ಜ್ಯೋತಿಷ್ಯಶಾಸ್ತ್ರಪಾರಂಗತರೂ, ಆಗಿದ್ದರು. ಅವರ ಪ್ರತಿಭೆ ಮೈಸೂರು ರಾಜಮನೆತದವರ ಮನಸ್ಸನ್ನು ಸೆಳೆದಿತ್ತು. ಅವರ ಬಳಿಯಲ್ಲಿ ಶಿಶುವಿಗೆ ಶಿಕ್ಷಣಕೊಡಿಸಲು ನಿಶ್ಚಯಿಸಿದ ಶ್ರೀ ಸಿದ್ಧಲಿಂಗಸ್ವಾಮಿಗಳವರ ಪ್ರಾರ್ಥನೆಯನ್ನು ಶ್ರೀ ಪ್ರಭುಸ್ವಾಮಿಗಳು ಅತಿಸಂತೋಷದಿಂದ ಒಪ್ಪಿದರು. ಅನೇಕ ವರ್ಷಗಳ ಕಾಲ ಅವರಲ್ಲಿ ಶಿವಾನುಭವ, ಜ್ಯೋತಿಷ್ಯಶಾಸ್ತ್ರ ಶಿಕ್ಷಣ ಕೊಡಿಸಿದರು.

ಶಿಶುವಿಗೆ ಸುಮಾರು ಐದನೇ ವರ್ಷ ವಯಸ್ಸಾಗಿರುವಾಗಲೇ ಶ್ರೀಮಠದ ಅಧಿಕಾರಸೂತ್ರ ವಹಿಸಬೇಕೆಂದು ನಿಶ್ಚಯಿಸಿದರು. ಹತ್ತನೇ ವಯಸ್ಸಿನಲ್ಲಿ ಶಿಕ್ಷಣಕ್ಕಾಗಿ ಕಳುಹಿಸಿದ ಶಿಶುವು ಪ್ರತಿಭಾವಂತನಾಗುವುದನ್ನು ನೋಡುವ ಅವಕಾಶ ಶ್ರೀ ಸಿದ್ಧಲಿಂಗಸ್ವಾಮಿಗಳವರಿಗೆ ದೊರೆಯಲಿಲ್ಲ. ಆ ವರ್ಷವೇ ಅವರು ಶಿವನೊಡಗೂಡಿದರು. ಪೂಜಾನಿಷ್ಠರಾಗಿ ಲೋಕದ ಹಂಗಿನಿಂದ, ದೂರವಿದ್ದ ಶ್ರೀ ಸಿದ್ಧಲಿಂಗಸ್ವಾಮಿಗಳವರ ಕಾಲದಲ್ಲಿ ಮಠದ ಆಡಳಿತದ ವ್ಯವಸ್ಥೆ ಸಮರ್ಪಕವಾಗಿರಲಿಲ್ಲ. ಅವರ ಉತ್ತರಾಧಿಕಾರಿಗಳು ಇನ್ನೂ ಶಿಕ್ಷಣ ಪಡೆಯುವ ಹಸುಳೆಯಾಗಿರುವಾಗಲೇ ಶ್ರೀಮಠದ ಆಡಳಿತದ ಹೊಣೆ ಅವರ ಪಾಲಿಗೆ ಬಂದಿತು. ಉತ್ತಮ ಶಿಕ್ಷಣ ಮತ್ತು ಮಹಾದಾಶೀರ್ವಾದದ ಫಲ, ಇವುಗಳು ಶಿಶುವಿನಲ್ಲಿ ಸ್ಥೈರ್ಯ ತುಂಬಿದುವು. ಕಿರಿತನದಲ್ಲಿಯೇ ಹಿರಿತನದ ಶಕ್ತಿಯನ್ನು ವ್ಯಕ್ತಪಡಿಸಿ ಅಧಿಕಾರವನ್ನು ಸಮರ್ಪಕವಾಗಿ ನಡೆಸಲಾರಂಭಿಸಿ, ಶ್ರೀ ಶಿವರಾತ್ರಿಮಹಾಸ್ವಾಮಿಗಳು ಅತಿ ಕ್ಷಿಪ್ರದಲ್ಲಿ ಜನಪ್ರಿಯರಾದರು. ಮಠದ ಹಿರಿಮೆಯನ್ನು ಅಳಿಸಲು ಯತ್ನಿಸಿದ ಎಲ್ಲ ಕಂಟಕಗಳನ್ನು ಜಾಣ್ಮೆಯಿಂದಲೂ, ಸಾಹಸದಿಂದಲೂ ಎದುರಿಸಿದರು. ಆಡಳಿತ ವ್ಯವಸ್ಥೆಯನ್ನು ಒಂದು ನಿರ್ದಿಷ್ಟರೂಪಕ್ಕೆ ತರಲು ಅವರು ಅನುಭವಿಸಿದ ಕಷ್ಟ ಪರಂಪರೆಗಳು ಅತಿ ಭಯಂಕರವಾದುವುಗಳೆಂದೇ ಹೇಳಬೇಕು:-

ಶ್ರೀ ಶಿವರಾತ್ರಿ ಸ್ವಾಮಿಎಂಬ ಅಭಿದಾನದಿಂದ ತಾ॥18-5-1902ರಲ್ಲಿ ಶ್ರೀಮಠದ ಪಟ್ಟಾಧಿಕಾರವನ್ನು ವಹಿಸಿಕೊಂಡಾಗ ಅವರಿಗೆ ಹದಿನಾರುವರ್ಷ ವಯಸ್ಸು. ಇನ್ನೂ ಹತ್ತುವರ್ಷಕಾಲ ಅಭ್ಯಾಸಮಾಡಿದ್ದರೆ, ಅದ್ವಿತೀಯ ಪಂಡಿತರೇ ಆಗುತ್ತಿದ್ದರು ಆದರೆ ವಿಧಿ ಲೀಲೆ ಅವರು ವಿದ್ವನ್ಮಣಿಗಳಾಗುವುದಕ್ಕಿಂತಲೂ ಕರ್ತವ್ಯನಿಷ್ಠರೂ, ಶ್ರೇಷ್ಠ ಸಂಘಟಕರೂ ಆಗಬೇಕಾಗಿತ್ತೆಂದು ಕಾಣುತ್ತದೆ. ತಾನುಕಲಿಯುವುದಕ್ಕಿಂತಲೂ, ಕಲಿಯಬೇಕೆಂಬ ಆಕಾಂಕ್ಷಿಗಳಿಗೆ ಅನುಕೂಲಗಳನ್ನು ದೊರಕಿಸುವ ಪುಣ್ಯಕೃತಿ ಈ ಮಹಾನುಭಾವರಿಂದ ನೆರವೇರಬೇಕಾಗಿತ್ತು ಆದುದರಿಂದ ಅವರು ಮತ್ತೆಲಿಯೂ ಶಿಕ್ಷಣ ಪಡೆಯುವ ಹಂಬಲವನ್ನು ತಾಳಲ್ಲಿಲ್ಲಾ. ಮೊದಲು ಅವರು ಶ್ರೀಮಠದ ಇತಿಹಾಸವನ್ನು ಅರಿಯುವರಲ್ಲಿ ನಿರತರಾದರು. ಶ್ರೀಮಠದಲ್ಲಿರುವ ಎಲ್ಲಾ ಕಾಗದ ಪತ್ರಗಳ ಸಂಶೋಧನೆಮಾಡಿ, ಶ್ರೀಮಠದ ಗತ ವೈಭವವನ್ನು ಪುನರುಜ್ಜೀವನ

ಗೊಳಿಸಲು ಪ್ರಾರಂಭಿಸಿದರು. ಅನುಭವಿಗಳಿಂದ ತಿಳಿದು, ಆ ವಿಷಯಗಳಿಂದ ತಮಗೆ ದೊರೆಯುವ ಎಲ್ಲಾ ರೀತಿಯ ಸಾಧನಗಳಿಂದಲೂ ಶ್ರೀಮಠದ ಪೂರ್ವೇತಿಹಾಸವನ್ನು ಚಿತ್ರಿಸಿಕೊಂಡು ಪುನರುಜ್ಜೀವನದ ಕಾರ್ಯವನ್ನು ಪ್ರಾರಂಭಿಸಲು ದೀರ್ಘಯೋಜನೆಯೊಂದನ್ನು ಕಲ್ಪಿಸಿಕೊಂಡರು.

## ಕರ್ತವ್ಯನಿಷ್ಠೆ

ಶ್ರೀಗಳವರಲ್ಲಿ ಕರ್ತವ್ಯದಲ್ಲಿ ನಿಷ್ಠಾಯುತ ಸಾಧನಾ ಪ್ರವೃತ್ತಿ ಎಳೆತನದಿಂದಲೂ ಬೆಳೆದು ಬಂದಿತು. ಶ್ರೀಮಠದ ಪೂರ್ವೇತಿಹಾಸವನ್ನು ಅರಿತಹೊರತು ತಮ್ಮ ಭವಿಷ್ಯ ಕಲ್ಪನೆಯ ಸಾಧನೆಯನ್ನು ರೂಪಿಸಿಕೊಳ್ಳುವುದು ಕಷ್ಟವಾಗಿತ್ತು ಅಂತೆಯೇ ಐತಿಹಾಸಿಕ ವ್ಯವಹಾರಿಕವಾದ ಎಲ್ಲ ಸಂಗತಿಗಳನ್ನು ಸಂಗ್ರಹಿಸಿ ಮುದ್ದಾದ ಅಕ್ಷರಗಳಲ್ಲಿ ವಿವರಣೆಗಳನ್ನು ಬರೆದಿಟ್ಟರು. ಇದುವರೆವಿಗೂ ತಮ್ಮ ಜೀವನದಲ್ಲಿ ಶ್ರೀಮಠದ ಚರಿತ್ರೆಯಲ್ಲಿ ನಡೆದುಬರುವ ಎಲ್ಲಾ ಕಾರ್ಯಗಳನ್ನು ತಪ್ಪದೇ ಬರೆದಿಡುವ ಅಭ್ಯಾಸ ಬಂದಿದೆ. ಇಂದಿಗೆ 77 ವರ್ಷದವಯಸ್ಸಾಗುತ್ತಿದ್ದರೂ ಸಹ ಇಂದೂ ಎಲ್ಲಾ ಕೃತಿಗಳನ್ನು ಅಮೂಲಾಗ್ರವಾಗಿ ಸ್ವಹಸ್ತಾಕ್ಷರದಿಂದ ಬರೆದಿಡುತ್ತಾರೆ. ಈ ರೀತಿ ಬರೆದಿರುವ (ನೋಟ್ಸ್) ವಿವರಣೆಗಳು ಸುಮಾರು ಎಂಟು ಸಾವಿರ ಪುಟಗಳಷ್ಟಾಗಬಹುದು. ಲೌಕಿಕ ವಿದ್ಯೆಯನ್ನು ಸಾಂಪ್ರದಾಯಿಕವಾಗಿ ಕಲಿಯದಿದ್ದರೂ ಸಹ ಕಾಗದ ಪತ್ರಗಳ ಶೇಖರಣೆ, ಅವುಗಳ ರಕ್ಷಣೆ ಅನುಕರಣೀಯವಾಗಿದೆ ಸ್ವಯಂ ಸಂಶೋಧಕರಾದಂತೆ ಐತಿಹಾಸಿಕ ಸಂಗತಿಗಳ ಸಂಶೋಧನಾ ಪಂಡಿತರಾದ ಮಹನೀಯರಿಗೆ ಆಶ್ರಯವಿತ್ತು ಅವರೆಲ್ಲರ ಅಭಿಪ್ರಾಯಗಳನ್ನು ಸಂಗ್ರಹಿಸಿರುತ್ತಾರೆ. ಈ ಗ್ರಂಥದ ಕೊನೆಯಲ್ಲಿ ಕೊಟ್ಟಿರುವ ಎಲ್ಲ ಶಾಸನಗಳನ್ನು ಸಂಗ್ರಹಿಸಿ, ಅವುಗಳನ್ನು ವಿಮರ್ಶೆ ಮಾಡಿಸಿ ವರದಿ ಮಾಡಿಸುವುದರಲ್ಲಿ ಶ್ರೀಗಳವರು ತೋರಿಸಿದ ಸಾಹಸ, ಶ್ರಮ, ಇವುಗಳು ಮನನೀಯವಾಗಿವೆ.

## –ಶ್ರೀ ಮಠದ ಆಡಳಿತ ಸುಧಾರಣೆ–

ಹಿಂದಿನ ಗುರುಗಳು ವ್ಯವಹಾರ ದೂರರಾಗಿದ್ದರಷ್ಟೆ. ಆದುದರಿಂದ ಶ್ರೀಮಠದ ಆರ್ಥಿಕ ಪರಿಸ್ಥಿತಿ ತುಂಬಾ ಕಳವಳಕರವಾಗಿತ್ತು. ನೇರವಾಗಿ ಆಡಳಿತ ವಹಿಸಿಕೊಂಡು ವ್ಯವಸಾಯ ವೃತ್ತಿಯಿಂದಹಿಡಿದು ಶ್ರೀಮಠದ ಸುಧಾರಣೆಯನ್ನೇ ಮಾಡಿದರು. ಮೈಸೂರು, ಕೇರಳ, ತಮಿಳು, ಕೊಡಗು ನೀಲಗಿರಿ ಈ ಪ್ರದೇಶಗಳಲ್ಲಿ ಹಗಲಿರುಳೆನ್ನದೆ ಸಂಚರಿಸಿ ಭಕ್ತಸಮುದಾಯವನ್ನು ಬೆಳೆಸಿದರು. ಸಂಘಟಿಸಿದರು. ಶ್ರೀಮಠದ ಪ್ರಭಾವವನ್ನು ಬೆಳಗಿದರು. ಸ್ವೇಚ್ಛಾವರ್ತಿಗಳಾಗಿದ್ದ ಸುಮಾರು 40–50 ಶಾಖಾ ಮಠಗಳ ವ್ಯವಸ್ಥೆಯಲ್ಲಿ ಕೈ ಹಾಕಿ, ಅವುಗಳನ್ನು ಉತ್ತಮಸ್ಥಿತಿಗೆ ತಂದರು.

## ದೇವಾಲಯದ ಜೀರ್ಣೋದ್ಧಾರ

ಸುತ್ತೂರಿನಲ್ಲಿ ಚೋಳರಿಂದ ಸ್ಥಾಪಿತವಾದ ಶ್ರೀ ಸೋಮೇಶ್ವರ ದೇವಾಲಯವು

ಅತ್ಯಂತ ಕಲಾತ್ಮಕವಾಗಿತ್ತು. ಆದರೆ ತುಂಬಾ ಶಿಥಿಲವಾಗಿ ಸಂಪೂರ್ಣ ನಾಶವಾಗುವ ಸ್ಥಿತಿಯಲ್ಲಿತ್ತು. ಆ ಸಮಯದಲ್ಲಿ ಶ್ರೀ ದೇವಸ್ಥಾನದ ಪುನರ್ನಿರ್ಮಾಣವನ್ನೇ ಮಾಡಬೇಕಾಯಿತು. ಹಿಂದಿನ ಕಲಾಕೃತಿಯನ್ನು ಕಳೆಯದಂತೆ ಅವುಗಳನ್ನು ಉಳಿಸಿಕೊಂಡು ಭವ್ಯ ಮಂದಿರವನ್ನು ನಿರ್ಮಿಸಿದರು. ಈ ಮಂದಿರದ ಪ್ರಾರಂಭೋತ್ಸವ ಅಂದಿನ ಜಿಲ್ಲಾಧಿಕಾರಿಗಳಾದ ಶ್ರೀ ಸಿ. ಎಸ್. ಕೃಷ್ಣಸ್ವಾಮಯ್ಯಂಗಾರ್‌ರವರಿಂದ ತಾರೀಖು 21–2–1935 ರಲ್ಲಿ ಬಹಳ ವೈಭವದಿಂದ ನೆರವೇರಿಸಿದರು. ಇಡಿ ತಾಲ್ಲೂಕಿನಲ್ಲಿ ಅಷ್ಟು ವಿಜೃಂಭಣೆಯಿಂದ ನಡೆದ ಸಮಾರಂಭಗಳಲ್ಲಿ ಅದೇ ಹಿರಿದೆನ್ನಬಹುದು. ಈ ದೇವಸ್ಥಾನದ ನಿರ್ಮಾಣ ಕಾರ್ಯದಲ್ಲಿ ಶ್ರೀಗಳವರು ನಡೆಸಿದ ಎಲ್ಲ ವ್ಯವಹಾರಗಳನ್ನು ಸರ್ಕಾರದೊಡನೆ ನಡೆಸಿದ ಎಲ್ಲ ವ್ಯವಹಾರವನ್ನು ಸಹ ಸಾಂಗವಾಗಿ ಶ್ರೀಗಳವರು ಐದುನೂರು ಪುಟಗಳ ಕೃತಿಯಲ್ಲಿ ಬರೆದಿಟ್ಟಿರುವರು. ಇದನ್ನು ಓದಿದವರಿಗೆ, ಅಂದು ಶ್ರೀಗಳವರು ನಡೆಸಿದ ಸಾಹಸಕಾರ್ಯ ಮೆಚ್ಚುವಂತಹುದೆಂದು ಅರಿವಾಗದಿರದು. ಶ್ರೀಮಠದ ಕೆಲವು ಭಾಗಗಳನ್ನು ಆಧುನಿಕ ರೀತಿಯ ಮಾರ್ಪಾಡು ಮಾಡಿದುದಲ್ಲದೆ, ಶ್ರೀಸೋಮೇಶ್ವರದೇವಾಲಯದ ನಿರ್ಮಾಣಕಾರ್ಯವನ್ನು ಮುಗಿಸಿದೊಡನೆ, ಶ್ರೀವೀರೇಶ್ವರದೇವಾಲಯದ ಪುನರ್ನಿರ್ಮಾಣವೂ ನಡೆಯಿತು. ಶ್ರೀಮಠಕ್ಕೆ ಒಂದೂವರೆ ಮೈಲಿ ದೂರದಲ್ಲಿರುವ ಸುಮಾರು ಕ್ರಿ.ಶ. (1508) ರಲ್ಲಿ ಭುಜಂಗರಾಯನಿಂದ ನಿರ್ಮಿತವಾಗಿದ್ದ ವೀರೇಶ್ವರ ದೇವಾಲಯವನ್ನು ಸಹಸ್ರಾರು ರೂಪಾಯಿ ವೆಚ್ಚ ಮಾಡಿ ಜೀರ್ಣೋದ್ಧಾರ ಮಾಡಿದರು. ಅನಂತರ ಶ್ರೀಮಠಕ್ಕೆ ಬರುವ ಭಕ್ತಾದಿಗಳಿಗಾಗಿ ಬಹುವೆಚ್ಚದಿಂದ ಸುಂದರವಾದ ವಿಶ್ರಾಂತಿ ಗೃಹಗಳನ್ನು ನಿರ್ಮಾಣ ಮಾಡಿಸಿದರು. ಇಷ್ಟೆಲ್ಲ ಕಾರ್ಯಗಳ ನಿರ್ವಹಣೆಯನ್ನು ಮಾಡುವಾಗ, ಶ್ರೀಮಠದ ಸಂಪತ್ತನ್ನು ಬೆಳೆಸುವುದರಲ್ಲಿ ಹಿಂದಾಗಲಿಲ್ಲಾ. ಶಿಷ್ಯಾರ್ಜನೆಯಿಂದ ಸಂಪತ್ತನ್ನು ಕೂಡಿಸುತ್ತಾ ಸತ್ಕಾರ್ಯಗಳಿಗೆ ವಿನಿಯೋಗಿಸುತ್ತಾ ಬಂದರು.

## ಮುಡುಕುದೊರೆಯ ಜಾತ್ರಾ ಸನ್ಮಾನ

ಶ್ರೀಗಳವರು ಶ್ರೀಮಠದ ಅಧಿಕಾರ ಸೂತ್ರವನ್ನು ವಹಿಸಿಕೊಂಡುದು ಮುಳ್ಳಿನ ಹಾಸಿಗೆಯ ಮೇಲೆ ಮಲಗಿದಷ್ಟು ಕಷ್ಟಕರವಾದ ಸಮಯ. ಆರ್ಥಿಕದುಃಸ್ಥಿತಿ ಒಂದು ಕಡೆ ಆಡಳಿತದ ಅವ್ಯವಸ್ಥೆ ಮತ್ತೊಂದುಕಡೆ, ವಿರೋಧಿಗಳು ಶ್ರೀಮಠದ ಕೀರ್ತಿಗೆ ಕಳಂಕತರಲು ಯತ್ನಿಸಿರುವುದು ಮಗದೊಂದುಕಡೆ. ಈ ರೀತಿಯಾಗಿ ಅಪಾರವಾದ ಕಂಟಕಗಳನ್ನೇ ಎದುರಿಸಬೇಕಾಯಿತು. ಈ ಕಷ್ಟಪರಂಪರೆಗಳಲ್ಲಿ ಟಿ. ವರಶೀಪುರ ತಾಲ್ಲೂಕು ಮುಡುಕುದೊರೆ ಶ್ರೀ ಮಲ್ಲಿಕಾರ್ಜುನ ಭ್ರಮರಾಂಬಾ ದೇವಾಲಯಕ್ಕೆ ಸಂಸ್ಥಾನದ ಸನ್ಮಾನಗಳೊಡನೆ ಶ್ರೀಗಳವರು ತಮ್ಮ ಶ್ರೀಮಠದಮರ್ಯಾದೆಗಳೊಡನೆ ಪ್ರಯಾಣ ಮಾಡುವುದಕ್ಕೆ ಬಂದ ಆತಂಕವನ್ನು ಅತಿ ಚತುರತೆಯಿಂದಲೂ, ಸಾಹಸದಿಂದಲೂ ಎದುರಿಸಬೇಕಾಯಿತು. ಶ್ರೀಮಠದ ಪೀಠಾಧಿಪತಿಗಳು ಸಕಲ ಗೌರವಗಳೊ

ಡನೆ ಈ ಜಾತ್ರೆಗೆ ದಯಮಾಡಿಸಿ ದೇವರಿಗೆ ಗೌರವ ಸಮರ್ಪಣೆಮಾಡುವುದು ಸಂಪ್ರದಾಯವಾಗಿತ್ತು. ದೇವಸ್ಥಾನದ ಪೂಜೆಯಿಂದ ಹಿಡಿದು ಜಾತ್ರಾಪದ್ಧತಿಯ ಕಾರ್ಯಕ್ರಮಗಳೆಲ್ಲವೂ ಅನೂಚಾನವಾಗಿ ಈಮಠದ ಅಧಿಪತಿಗಳ ಸಮ್ಮುಖದಲ್ಲಿ ತೀರ್ಮಾನವಾಗಿ ಅದರಂತೆ ನಡೆಯುತ್ತಾ ಬಂದಿರುತ್ತವೆ. ಪದ್ಧತಿಯಂತೆ ಹಿಂದಿನ ಮಠಾಧಿಪತಿಗಳು ನಡೆಸಿಕೊಂಡು ಬಂದಿದ್ದರು, ಆದರೆ 1896ರಲ್ಲಿ ಹಿಂದಿನ ಶ್ರೀ ಸಿದ್ದಲಿಂಗಸ್ವಾಮಿಗಳವರು ಕಾಲವಾದಮೇಲೆ ಜಗದ್ಗುರುಗಳವರು ಪ್ರಥಮ ಬಾರಿಗೆ 1902 ರಲ್ಲಿ ತಮ್ಮ ಪೀಠದ ಗೌರವಗಳೊಡನೆ ಜಾತ್ರೆಗೆ ದಯಮಾಡಿಸಿದರು. ಅನಂತರ ಕೆಲವರು ವಿರೋಧಿಗಳು ಈಪೀಠದ ಗೌರವಕ್ಕೆ ಕುಂದು ತರಬೇಕೆಂದು ಆಶಿಸಿ ವ್ಯವಹಾರ ಹೂಡಿದರು. 1908 ರ ವೇಳೆಯಲ್ಲಿ ಇದೊಂದು ದೊಡ್ಡ ವ್ಯವಹಾರವಾಗಿ ಏರ್ಪಟ್ಟಿತು ಅಮಲ್ದಾರ್‌ರವರಿಂದ ಹಿಡಿದು, ಜಿಲ್ಲಾಧಿಕಾರಿಗಳವರೆಗೆ ಈ ವಿಷಯದಲ್ಲಿ ನೂರಾರು ಕಾಗದಪತ್ರಗಳ ವ್ಯವಹಾರ ನಡೆಯಿತು, ಒಂದುಬಾರಿ ಸಬ್‌ಡಿವಿಜನ್ ಅಧಿಕಾರಿಗಳು ಶ್ರೀ ಗಳವರು ಮರ್ಯಾದೆಗಳೊಡನೆ ದೇವಸ್ಥಾನಕ್ಕೆ ಬರಕೂಡದೆಂದು ಆಜ್ಞೆ ಮಾಡಿದ್ದರು, ಶ್ರೀ ಮಠದ ಪದ್ಧತಿಯನ್ನು ಸರ್ಕಾರಕ್ಕೆ ಮನದಟ್ಟು ಮಾಡಲು ಶ್ರೀಗಳವರು ಪಟ್ಟಸಾಹಸ ಅವರ್ಣನೀಯ. ನೂರಾರು ಜನರ ಸಾಕ್ಷಿಗಳ ಹೇಳಿಕೆಗಳ ನಡೆಯಿತು. ಸತ್ಯಕ್ಕೆ ಎಂದಿಗೂ ಜಯವಿರುವುದಷ್ಟೆ, ಅಂತೆಯೇ ಶ್ರೀ ಮಠದಪರವಾಗಿ ಸರ್ಕಾರವು ತೀರ್ಪುಕೊಟ್ಟು ಶ್ರೀ ಮಠದಕೀರ್ತಿಯನ್ನು ಬೆಳಗಿಸಿತು. ಶ್ರೀಗಳವರು ತಮ್ಮ ಬಿರುದಾವಳಿಗಳೊಡನೆ ಮುಡುಕುದೊರೆ ಬೆಟ್ಟಕ್ಕೆ ದಯಮಾಡಿಸಿ, ದೇವರ ದರ್ಶನ ಮಾಡಿಕೊಂಡು ಹೋಗತಕ್ಕದ್ದೆಂದೂ, ಅದಕ್ಕೆ ಯಾರೂ ಅಂತಕಮಾಡಲು ಅವಕಾಶವಿಲ್ಲವೆಂದೂ ತೀರ್ಮಾನವಾಗಿ 1911ನೇ ಜನವರಿ ಮಾಹೆಯಲ್ಲಿ, ಸಂಸ್ಥಾನದ ಮುಜರಾಯಿ ಸೆಕ್ರೆಟರಿಯವರ 25|27-1-1911ನೇ ಮುಕ್ಕಾಂ 863|372-10-2 ನೇ ನಂಬರಿನಲ್ಲಿ ಸರ್ಕಾರದಿಂದ ಹುಕುಂ ಆಗಿ ಅದರ ಎಂಡಾರ್ಸ್‌ಮೆಂಟ್ ಕಾಪಿ ಶ್ರೀ ಮಠಕ್ಕೆ ಮೈಸೂರು ಜಿಲ್ಲಾಧಿಕಾರಿಗಳಿಂದ ರವಾನಿಸಲ್ಪಟ್ಟಿತು-

ಸಂಪ್ರದಾಯದಂತೆ ಈ ಪೀಠಾಧಿಪತಿಗಳು ಈ ಕ್ಷೇತ್ರದಲ್ಲಿ ಉತ್ಸವ ನಡೆಸಿಕೊಂಡು ದೇವರ ಕಾರ್ಯಗಳನ್ನು ನೆರವೇರಿಸುತ್ತಿದ್ದರು. ಅದಕ್ಕಾಗಿಯೇ ಹಿಂದಿನ ಗುರುಗಳವರು ಶ್ರೀ ಸಿದ್ಧಲಿಂಗಸ್ವಾಮಿಗಳವರು ಮುಡುಕುತೊರೆ ಕ್ಷೇತ್ರದಲ್ಲಿ ಇಲ್ಲಿ ನಾಡುಮಠವನ್ನು ಸಹ ಕಟ್ಟಿಸಿದ್ದರು. ಮಾಮೂಲಾಗಿ ದೇವರ ಉತ್ಸವ ಮೂರ್ತಿಯ ಮಂಟಪೋತ್ಸವವೂ ನಡೆಯುತ್ತೆ. ಈ ಪದ್ಧತಿಗಳಿಗೆ ಬಂದಿದ್ದ ತೊಡರುಗಳು ಪರಿಹಾರವಾದ ಮೇಲೆ ತಾ|| 11-2-1911 ರಲ್ಲಿ ಶ್ರೀಗಳವರು ಪುನಃ ಯಥಾವತ್ತಾಗಿ ಸಕಲ ಮರ್ಯಾದೆಗಳೊಡನೆ ದಯಮಾಡಿಸಿದರು. ಸಕಲ ಕಾರ್ಯಗಳು ಸುಮುಖವಾಗಿ ನೆರವೇರಲ್ಪಟ್ಟದ್ದಾಯಿತು. ಅಂದು ಸಂಜೆ ಮಠದ ಬಳಿಯಲ್ಲಿ ಸ್ವಾಮಿಯ ಮಂಟಪೋತ್ಸವವು ನಡೆಯಿತು. ನಂತರ ಸಮಾರಂಭಕ್ಕೆ ದಯಮಾಡಿಸಿದ್ದ ಸಬ್

ಡಿವಿಜನ್ ಅಧಿಕಾರಿಗಳು ಸರ್ಕಾರದ ಪರವಾಗಿ ಶ್ರೀಗಳವರಿಗೆ ಅಭಿನಂದನೆಯನ್ನು ಸಲ್ಲಿಸಿ ಈ ಮಂಟಪೋತ್ಸವವನ್ನು ಮತ್ತು ಜಾತ್ರೆಯ ಸಮಯದಲ್ಲಿ ದನಗಳ ಪ್ರದರ್ಶನವನ್ನು ಸಹ ಈ ಪೀಠದವರೇ ನಡೆಸುವಂತೆ ಸರ್ಕಾರ ಹುಕುಂ ಮಾಡಿರುವುದನ್ನು ಸಭೆಗೆ ತಿಳಿಸಿದರು. ಅನಂತರ ಉತ್ತಮ ರಾಸುಗಳಿಗೆ, ಶ್ರೀಗಳವರಿಂದಲೇ ಬಹುಮಾನವನ್ನು ಸಹ ಕೊಡಿಸಿದರು. ಈ ವಿಷಯದಲ್ಲಿ ನಡೆದ ವ್ಯವಹಾರವನ್ನು ವಿವರವಾಗಿ ಅಧಿಕೃತವಾಗಿ, ಶ್ರೀಗಳವರು 120 ಪುಟಗಳಲ್ಲಿ ಬರೆದು ಎಲ್ಲವನ್ನೂ ಸಂಗ್ರಹಿಸಿಟ್ಟಿರುವದು ಅತ್ಯಂತ ಗಮನಾರ್ಹವಾಗಿದೆ. ಬಹುಕಾಲದಿಂದ ನಡೆದು ಬಂದ ಸಂಸ್ಥಾನದ ಮನ್ನಣೆಗೆ ಕುಂದುಬಂದುದನ್ನು ಶ್ರೀಗಳವರು ಸಾಹಸದಿಂದಲೂ, ವಿಚಕ್ಷಣೆಯಿಂದಲೂ ಎದುರಿಸಿ, ಜಯಶಾಲಿಗಳಾಗಿ ತಮ್ಮ ಶಕ್ತಿಯನ್ನು ನಾಡಿಗೆ ವ್ಯಕ್ತಪಡಿಸಿದರು. ಇಂತಹ ಹಲವಾರು ಘಟನೆಗಳನ್ನು ಅವರ ಜೀವನದಲ್ಲಿ ನಾವು ಕಾಣಬಹುದಾಗಿದೆ.

## ಉತ್ತರಾಧಿಕಾರಕ್ಕೆ ಹರಕೆ

ಈ ಪೀಠದಲ್ಲಿ ಮಠಾಧಿಪತಿಗಳು, ಪ್ರಾಪ್ತವಯಸ್ಕರಾಗುವಾಗಲೇ, ತಮ್ಮ ಉತ್ತರಾಧಿಕಾರಿಯನ್ನು, ನಿಯಮಿಸಿಕೊಂಡು, ಅವರನ್ನು ಬೆಳಿಸಿ ಪೋಷಿಸುವುದು, ಸಂಪ್ರದಾಯವಾಗಿದೆಯೆಂದು, ಹಿಂದೆ ಹೇಳಿದೆ. ತಾವು ಶ್ರಮಿಸಿ, ಸುಭದ್ರಗೊಳಿಸಿದ, ನೆಲೆಗಟ್ಟಿನಮೇಲೆ ಶ್ರೀ ಪೀಠದ ಕೀರ್ತಿ ಗೌರವಗಳನ್ನು; ಶಾಶ್ವತಗೊಳಿಸಬಲ್ಲ, ಸಮರ್ಥ ಉತ್ತರಾಧಿಕಾರಿಯನ್ನು ನಿಯಮಿಸುವ ಆಕಾಂಕ್ಷೆ ಶ್ರೀಗಳವರಲ್ಲಿ ಮೂಡಿತು. ಮೂಲ ಗುರುಗಳ ಅನುಗ್ರಹವಿಲ್ಲದೆ ಈ ಕಾರ್ಯ ಸ್ವಶಕ್ತಿಯಿಂದ ನೆರವೇರುವುದಲ್ಲ. ಆದುದರಿಂದ ಮೂಲಶಿವಾಚಾರ್ಯರಲ್ಲಿ ಹರಕೆ ಹೊತ್ತರು. ಅದೇ ಸಮಯದಲ್ಲಿ ಮೂಲ ಗದ್ದುಗೆಯ ಪುನರ್‌ನಿರ್ಮಾಣ ಕಾರ್ಯವನ್ನು ಆರಂಭಿಸಿದರು. ಆ ಕಾರ್ಯ ಆರಂಭವಾದ ದಿನದಿಂದ ಹಿಡಿದು, ಮುಗಿಯುವವರೆಗೆ, ತಾವು ಪಾದರಕ್ಷೆಹಾಕುವುದಿಲ್ಲವೆಂದು, ಛತ್ರಿ ಹಿಡಿಯುವುದಿಲ್ಲವೆಂದೂ, ನಿಶ್ಚಯಿಸಿದರು. ಇದೇರೀತಿ ಒಂದುವರ್ಷ ಪೂರ್ತ ಬಿಸಿಲಿನಲ್ಲಿ, ಬರಿಗಾಲಲ್ಲಿ ಬೆಳಗಿನಿಂದ, ಸಂಜೆಯವರೆಗೆ ನಿಂತು, ಕಟ್ಟಡದ ಕೆಲಸ ಮಾಡಿಸಿದರು; ಕೆಲಸಮುಗಿಯುವ ವೇಳೆಗೆ ಅಂತರ್ವಾಣಿ ಉತ್ತರಾಧಿಕಾರಿಯ, ಅವತಾರದ ಸಂಕೇತವನ್ನು ತಿಳಿಸಿತು. ಶ್ರೀ ಮಠದ ದೈವಭಕ್ತ ದಂಪತಿಗಳಲ್ಲಿ ಪೂರ್ಣ ಚಂದ್ರನಂತೆ ತೇಜೋಮಯವಾದ ಶಿಶುವು ಜನಿಸಿತು. ಆಶಿಶುವು ಆರುತಿಂಗಳಕಾಲ ಮಾತ್ರ ಮಾತೃವಿನ ಮಡಿಲಲ್ಲಿ ಬೆಳೆಯಿತು. ಅನಂತರ ಆ ಶಿಶುವಿನ ಶೈಶವಾವಸ್ಥೆಯೆಲ್ಲಾ ಗುರು ಸನ್ನಿಧಿಯಲ್ಲೇ ನಡೆಯಿತು. ಶ್ರೀಗಳವರೇ ತಮ್ಮ ಉತ್ತರಾಧಿಕಾರಿಗೆ ಗುರುವು ಮಾತಾಪಿತೃವೂ ಆಗಿ ಸಲಹಿ ಸಂತೈಸಿ ತಮ್ಮ ಲಿಂಗಾನಂದ ವೈಭವದಲ್ಲಿ ಬೆಳೆಸಿದರು. ಮಹಾನುಭಾವರ ಆಶೀರ್ವಾದ ಅನುಗ್ರಹಗಳಿಂದ ಶಿಶುವಿನ ಭವಿಷ್ಯವನ್ನು ಅರಿತರು. ಉತ್ತಮ ಪಂಡಿತರಲ್ಲಿ ಶಿಕ್ಷಣ ಕೊಡಿಸಿದರು. ಕಾಲಕ್ಕನುಗುಣವಾಗಿ ತಮ್ಮ ಮಠಾಧಿಪತಿಯು ವ್ಯವಹಾರ ಚತುರರಾಗಬೇಕೆಂದು ಆಧುನಿಕ ಶಿಕ್ಷಣ

ವನ್ನು ಸಹ ಕರುಣಿಸಿದರು. ಶಿಶುವು ಎಂಟುವರ್ಷದ ಹಸುಳೆಯಾಗಿರುವಾಗಲೇ ಶ್ರೀ ಶಿವರಾತ್ರಿರಾಜೇಂದ್ರಸ್ವಾಮಿಗಳೆಂಬ ಅಭಿದಾನವಿತ್ತು ಕ್ರಿ॥ 24-2-1928ರಲ್ಲಿ ಶ್ರೀಮಠದ ಉತ್ತರಾಧಿಕಾರದ ಮಹೋತ್ಸವವನ್ನು ಅತ್ಯಂತ ವಿಜೃಂಭಣೆಯಿಂದ ನೆರವೇರಿಸಿದರು. ಶ್ರೀಗಳವರು ಶ್ರೀ ಮಠಕ್ಕೆ ಸಂಪತ್ತು, ಕೀರ್ತಿ ಎಲ್ಲವನ್ನೂ ಗಳಿಸಿದರು ಆದರೆ ಗಳಿಸಿದ ಸಂಪತ್ತನ್ನು ಬೆಳೆಸಿ ಉಳಿಸಿಕೊಳ್ಳುವ ಸಮರ್ಥ ಉತ್ತರಾಧಿಕಾರಿಯನ್ನು ಪಡೆಯುವುದು ಮಹತ್ತರವಾದ ಕಾರ್ಯವೇ ಆಯಿತು. ಅದೂ ಸಹ ಗುರುಕರುಣೆಯಿಂದ ತಮ್ಮ ಕಲ್ಪನೆಗೆ ಮಿಗಿಲಾದ ರೀತಿಯಲ್ಲಿ ಲಭ್ಯವಾಯಿತು. ಶ್ರೀಗಳವರ ಆಶ್ರಯದಲ್ಲಿ, ಅನುಗ್ರಹದಲ್ಲಿ ಬೆಳೆಯುತ್ತಾ ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ಶ್ರೀ ಮಠದ ಕೀರ್ತಿಯನ್ನು ನೂರ್ಮಡಿ ಮಾಡಿರುವುದು ಶ್ರೀಗಳವರಿಗೆ ಅಪಾರ ಆನಂದವನ್ನೂ ಆತ್ಮ ತೃಪ್ತಿಯನ್ನೂ ಉಂಟುಮಾಡಿದೆ.

## ಸಂಸ್ಕೃತ ಪಾಠಶಾಲಾ ಸ್ಥಾಪನೆ

ಶ್ರೀಗಳವರು ಅನುಭವಶಾಸ್ತ್ರ, ಜ್ಯೋತಿಷ್ಯ ಶಾಸ್ತ್ರಗಳನ್ನು ಮಹಾನುಭಾವರಾದ ಕಾರ್ಯದ ಶ್ರೀ ಪ್ರಭುಸ್ವಾಮಿಗಳವರಲ್ಲಿ ಕೆಲವುಕಾಲ ಅಭ್ಯಾಸಮಾಡಿದರು. ಸ್ವತಃ ಸಂಸ್ಕೃತವನ್ನು ಅಭ್ಯಾಸಮಾಡಬೇಕೆಂದು ವೇದಾಂತದಲ್ಲಿ ಹೆಚ್ಚು ಪಾಂಡಿತ್ಯವನ್ನು ಪಡೆಯಬೇಕೆಂದು ಅಪೇಕ್ಷೆ ಇತ್ತು. ಆದರೆ ಶ್ರೀ ಮಠದ ವ್ಯವಹಾರದ ಹೊಣೆ ಎಳೆತನದಲ್ಲೇ ಬಂದುದರಿಂದ ಆ ವ್ಯಾಸಂಗ ಮುಂದುವರಿಯಲಾಗಲಿಲ್ಲ. ಮಠದ ಶಿಷ್ಯಮಂಡಲಿಯಲ್ಲಿ ಮತ್ತೂ ತಮ್ಮ ಶಾಖಾಮಠದ ಅಧಿಕಾರಿಗಳಲ್ಲಾದರೂ, ಪಂಡಿತರುಗಳಾಗಲೆಂಬ ಇಚ್ಛೆ ಪ್ರಬಲವಾಗಿತ್ತು. ಆದರೆ ಅದಕ್ಕೆ ಅನುಕೂಲಗಳು ಅವಕಾಶಗಳೂ, ಇರಲಿಲ್ಲ. ಇದನ್ನರಿತು ಒಂದು ಸಂಸ್ಕೃತಪಾಠಶಾಲೆಯನ್ನು ತೆರೆಯುವ ಸಂಕಲ್ಪಮಾಡಿ ಕ್ಯಾತನಹಳ್ಳಿ ಸಾಹುಕಾರ್ ಸಿದ್ದಲಿಂಗಯ್ಯನವರಲ್ಲಿ ಧರ್ಮ ಪ್ರಚೋದನಗೊಳಿಸಿ, ಮೈಸೂರು ನಗರದಲ್ಲಿ 1933ರಲ್ಲಿ ಒಂದು ಸಂಸ್ಕೃತಪಾಠಶಾಲೆ ಮತ್ತು ಉಚಿತ ಆಶನವಸತಿ ಮಂದಿರವನ್ನು ಸ್ಥಾಪಿಸಿದರು. ಶ್ರೀ ಸಿದ್ದಲಿಂಗಯ್ಯನವರು ಶ್ರೀಗಳವರ ಅನುಗ್ರಹಕ್ಕೆ ಪಾತ್ರರಾಗಿ ಐವತ್ತು ಸಹಸ್ರ ರೂಪಾಯಿಗಳ ದಾನವಿತ್ತು ಸಂಸ್ಥೆ ಪ್ರಾರಂಭಿಸಿದರು. ಅದು ಇಂದು ಪ್ರೌಢಸಂಸ್ಥೆಯಾಗಿಮಾರ್ಪಟ್ಟು ಶ್ರೀಗಳವರ ಸಂಕಲ್ಪವನ್ನು ನೆರವೇರಿಸುವಂತಾಗಿದೆ. ಇದೇ ಸಂಸ್ಥೆಯಲ್ಲಿ ಸಂಸ್ಕೃತಾಭ್ಯಾಸಮಾಡಿದ ಜಗದ್ಗುರು ಶ್ರೀ ಶಿವರಾತ್ರಿರಾಜೇಂದ್ರಮಹಾಸ್ವಾಮಿಗಳವರು ಪ್ರಥಮತಃ ಸಾಹಿತ್ಯ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಅವರು ಇಲ್ಲಿಯೇ ಶಿಕ್ಷಣವನ್ನು ಪಡೆದು ಸಂಸ್ಕೃತ ಸಂಘದ ವ್ಯಾಕರಣ ಮಾಧ್ಯಮ ಪರೀಕ್ಷೆಯಲ್ಲಿ ಉತ್ತೀರ್ಣರಾದುದಲ್ಲದೆ ಇಂಗ್ಲೀಷಿನಲ್ಲಿ ಎಸ್.ಎಸ್.ಎಲ್. ಸಿ, ಪರೀಕ್ಷೆಯಲ್ಲಿ ಉತ್ತೀರ್ಣರಾದುದು ಶ್ರೀಗಳವರಿಗೆ ಅಪಾರ ಸಂತೋಷವನ್ನುಂಟುಮಾಡಿದೆ.

## ರಾಜಸನ್ಮಾನ

ಶ್ರೀಗಳವರು, ಶ್ರೀಮಠದ ಅಭ್ಯುದಯ, ಶಾಖಾ ಮಠಗಳ ಉದ್ಧಾರ ಕಾರ್ಯ ಮತ್ತು ಭಕ್ತರ ಸಂಘಟನೆಯಲ್ಲಿ ನಿರತರಾಗಿದ್ದು ಸಾರ್ವಜನಿಕವಾದ ಕಾರ್ಯಗಳನ್ನು ನೆರವೇರಿಸುತ್ತಾ ಬಂದರು. ಮೈಸೂರು ನಗರದಲ್ಲಿ ಪಾಠಶಾಲೆಯು ಸ್ಥಾಪನೆಯಾದ ಮೇಲೆ ಶ್ರೀಗಳವರು ಲಕ್ಷಾಂತರ ರೂಪಾಯಿಗಳ ವೆಚ್ಚದಿಂದ ಧರ್ಮಕಾರ್ಯಗಳನ್ನು ನೆರವೇರಿಸುತ್ತಿರುವುದು ಅಂದಿನ ಶ್ರೀಮನ್ಮಹಾರಾಜರವರ ಗಮನವನ್ನು ಸೆಳೆಯಿತು. ಸರ್ಕಾರವು ಶ್ರೀಗಳವರ ಸೇವಾಪ್ರವೃತ್ತಿಯನ್ನು ಅರಿಯಿತು. ಅದರ ಫಲವಾಗಿ ರಾಜ ಸನ್ಮಾನಕ್ಕೂ ಪಾತ್ರರಾಗುವಂತಾಯಿತು. ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್‌ರವರು ಶ್ರೀಗಳವರ ಪ್ರತಿಭೆಯನ್ನು ಕೇಳಿ ಸಂತುಷ್ಟರಾಗಿ ರಾಜಮರ್ಯಾದೆಯನ್ನು ಸಲ್ಲಿಸಲು ಸಮ್ಮತಿಸಿದರು.

ತಾ|| 10-10-1935 ರಲ್ಲಿ ನಡೆದ ದಸರಾ ಮಹೋತ್ಸವ ಕಾಲದಲ್ಲಿ ಶ್ರೀಮನ್ಮಹಾರಾಜರವರು ಶ್ರೀಗಳವರಿಗೆ ಪ್ರಥಮ ದರ್ಜೆಯ ಸನ್ಮಾನ ನೀಡುವಂತೆ ಮನವಿ ಮಾಡಿದರು. ಅದರಂತೆ ರಾಜಸಭೆಯಲ್ಲಿ ಅಂಗೀಕೃತವಾಗಿ ಪ್ರಥಮದರ್ಜೆಯ ಸನ್ಮಾನವು ದೊರೆಯಿತು. ಸನ್ಮಾನ ಪತ್ರದಲ್ಲಿ "ನಂಜನಗೂಡು ತಾಲ್ಲೂಕು ಸುತ್ತೂರು ಶ್ರೀ ವೀರಸಿಂಹಾಸನಮಠದ ಪಟ್ಟದ ಶ್ರೀ ಶಿವರಾತ್ರಿಮಹಾಸ್ವಾಮಿಗಳವರು ವೀರಶೈವ ಪಂಗಡದವರಿಗಾಗಿ ಮೈಸೂರು ನಗರದಲ್ಲಿ ಏರ್ಪಟ್ಟಿರುವ, ಸಂಸ್ಕೃತ ಪಾಠಶಾಲೆಗೂ ತತ್ಸಂಬಂಧವಾದ ವಿದ್ಯಾರ್ಥಿನಿಲಯಕ್ಕೂ ಸಹಾಯವಾಗುವಂತೆ ಸುಮಾರು ಹತ್ತು ಸಹಸ್ರ ರೂಪಾಯಿ ಬೆಲೆ ಬಾಳುವ ಗದ್ದೆ ಕೊಟ್ಟಿರುತ್ತಾರೆ. ಸುತ್ತೂರಿನಲ್ಲಿ ಸೋಮೇಶ್ವರ ದೇವಾಲಯದ ಜೀರ್ಣೋದ್ಧಾರಕ್ಕಾಗಿ ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ವೆಚ್ಚಮಾಡಿದ್ದಾರೆ. ಮುಡುಕುತೊರೆಯ ಶ್ರೀ ಮಲ್ಲಿಕಾರ್ಜುನಸ್ವಾಮಿ ರಥೋತ್ಸವ ಕಾಲದಲ್ಲಿ ದನಗಳ ಜಾತ್ರೆಗೆ ಉಪಯೋಗವಾಗುವಂತೆ ಮೂರುಸಾವಿರ ರೂಪಾಯಿಗಳ ವೆಚ್ಚದಲ್ಲಿ ಮಂಟಪನ್ನು ಕಟ್ಟಿಸಿಕೊಟ್ಟಿರುವುದೇ ಮುಂತಾದ ಧರ್ಮಕಾರ್ಯಗಳನ್ನು ಮಾಡಿದ್ದಾರೆ." ಇದನ್ನು ನಮೂದಿಸಿ ಒಂದನೇ ತರಗತಿ ಭಂಗಾರದ ಪದಕ ಮತ್ತು ಇತರ ಸನ್ಮಾನಗಳೊಡನೆ ಶ್ರೀಗಳವರಿಗೆ ರಾಜಸನ್ಮಾನಮಾಡಿರುತ್ತಾರೆ.

## ವಿದ್ಯಾರ್ಥಿನಿಲಯಗಳ ಸ್ಥಾಪನೆ

ಶ್ರೀಗಳವರು ತಮ್ಮ ಸಂಕಲ್ಪದಂತೆ ಗುರುವನುಗ್ರಹದಿಂದ ಪಡೆದ ತಮ್ಮ ಉತ್ತರಾಧಿಕಾರಿಗಳಾದ ಜಗದ್ಗುರು ಶ್ರೀ ಶಿವರಾತ್ರಿರಾಜೇಂದ್ರಮಹಾಸ್ವಾಮಿಗಳವರನ್ನು ತಮ್ಮ ಪೋಷಣೆಯಲ್ಲಿಯೇ ಬೆಳೆಸಿದರು. ಉತ್ತಮ ಶಿಕ್ಷಣಕೊಡಿಸಿದರು. ಲೌಕಿಕ ಹಾಗೂ ವೈದಿಕ ವಿದ್ಯೆಗಳಲ್ಲಿ ಸೂಕ್ತ ಶಿಕ್ಷಣ ಪಡೆದು ಕಾರ್ಯಚಾತುರ್ಯವನ್ನು ಸಂಪಾದಿಸಿದರು. ವೈದಿಕ ಶಿಕ್ಷಣಕ್ಕಾಗಿ, ಕ್ಯಾತನಹಳ್ಳಿ ಸಾಹುಕಾರ ಸಿದ್ದಲಿಂಗಯ್ಯನವರ ಧಾರ್ಮಿಕ ನೆರವಿನಿಂದ ಸಂಸ್ಕೃತ ಪಾಠಶಾಲಾ ಮತ್ತು ಉಚಿತ ಅಶನ, ವಸತಿ

ನಿಲಯವನ್ನು ಸ್ಥಾಪಿಸಲಾಗಿತ್ತು. ಆದರೆ ಶ್ರೀಗಳವರ ಉತ್ತರಾಧಿಕಾರಿಗಳಾದ ಶ್ರೀ
ಗಳವರು ಕೆಲವು ಮಂದಿ ಸಹಪಾಠಿಗಳನ್ನು ಪ್ರಚೋದಿಸಿ ಲೌಕಿಕ, ವಿದ್ಯೆಯ, ಅಭ್ಯಾ
ಮಾಡುವ ವಿದ್ಯಾರ್ಥಿಗಳಿಗಾಗಿ ಒಂದು ವಿದ್ಯಾರ್ಥಿನಿಲಯವನ್ನು ಸ್ಥಾಪಿಸುವ ಸಮಾ
ಲೋಚನೆ ನಡೆಸಿದ್ದರು. ಕೆಲವು ಮಂದಿ ವಿದ್ಯಾರ್ಥಿಗಳು ಸೇರಿ ಸಂಸ್ಥೆಯೊಂದನ್ನು
ಕಟ್ಟಿ ಶ್ರೀಮಠದ ಹೆಸರಿನಲ್ಲಿ ಸಂಸ್ಥೆಯನ್ನು ಪ್ರಾರಂಭಿಸಿದರು. ಶ್ರೀಗಳವರು ಕಿರಿ
ರಾದರೂ ಅವರಲ್ಲಿರುವ ಧರ್ಮಾಭಿಮಾನ, ಮತ್ತು ಸಂಘಟನಾಶಕ್ತಿ ಹಿರಿಯ ಜಗದ್ಗು
ರುಗಳವರ ಮನಕ್ಕೆ ಅಪಾರ ಆನಂದವನ್ನುಂಟುಮಾಡಿತು. ಅದಕ್ಕೆ ಮೆಚ್ಚಿ ಶ್ರೀ
ಜಗದ್ಗುರು ಶಿವರಾತ್ರೀಶ್ವರ ವಿದ್ಯಾರ್ಥಿನಿಲಯವೆಂಬ ಹೆಸರನ್ನಿಟ್ಟು. ನಿಲಯದ
ಸುಮಾರು ಐವತ್ತು ಅರವತ್ತು ಮಂದಿ ವಿದ್ಯಾರ್ಥಿಗಳಿಗೆ ಶ್ರೀಮಠದಿಂದ ಊಟ
ವೆಚ್ಚವನ್ನು, ವಸತಿ ಸೌಕರ್ಯವನ್ನು ಕಲ್ಪಿಸುತ್ತಾ ಬಂದರು. ತಾ॥ 19-9-194
ರಲ್ಲಿ ಈ ವಿದ್ಯಾರ್ಥಿನಿಲಯದ ಪ್ರಾರಂಭೋತ್ಸವವು ಅಂದು ಅರಮನೆ ಕಾರ್ಯದರ್ಶಿ
ಗಳಾಗಿದ್ದ ಶ್ರೀ ಕೆ. ಗುರುದತ್, ಬಿ.ಎ. ಇವರಿಂದ ನೆರವೇರಿಸಲ್ಪಟ್ಟ ಭವ್ಯಸಮಾರಂ
ಶ್ರೀಮಠದ ಇತಿಹಾಸದಲ್ಲೇ ಚಿರಸ್ಮರಣೀಯ.

ಒಂದು ವಿದ್ಯಾರ್ಥಿನಿಲಯ ಮೈಸೂರು ನಗರದಲ್ಲಿ ಪ್ರಾರಂಭಗೊಂಡುದರಿಂ
ಶ್ರೀಗಳವರಿಗೆ ತೃಪ್ತಿಯಾಗಲಿಲ್ಲ. ಇದೇ ಮೈಸೂರು ನಗರದಲ್ಲೇ ಶ್ರೀಮಠದ ಕ
ಯಿಂದ ನಾಲ್ಕು ವಿದ್ಯಾರ್ಥಿನಿಲಯಗಳಾದವು. ಅಂತೆಯೇ ಚಾಮರಾಜನಗರ, ನಂ
ನಗೂಡು, ಟಿ. ನರಸೀಪುರ, ಸರಗೂರು ಇತ್ಯಾದಿ ಕಡೆಗಳಲ್ಲಿ ವಿದ್ಯಾರ್ಥಿನಿಲಯಗಳ
ಪ್ರಾರಂಭವಾದುವು. ಸುಮಾರು ಎರಡುಸಾವಿರದಷ್ಟು ಮಂದಿ ವಿದ್ಯಾರ್ಥಿಗಳು ಶ್ರೀ
ಮಠದ ಆಶ್ರಯದಲ್ಲಿ ಅಶನ, ವಸತಿ, ಸೌಕರ್ಯ ಪಡೆಯುವಂತಾಯಿತು. ಶ್ರೀಮಠ
ಕೀರ್ತಿ ಕರ್ನಾಟಕದಲ್ಲೆಲ್ಲಾ ಹರಡಿತು. ಅಷ್ಟು ಸಮಯಕ್ಕೆ ಶ್ರೀಗಳವರಿಗೆ ಶರೀ
ಶಕ್ತಿ ಕುಗ್ಗುತ್ತಾ ಬಂದಿತು. ಸಂಸ್ಥೆಗಳ ಕಾರ್ಯನಿರ್ವಹಣೆಯ ಪೂರ್ಣಹೊಣೆಯನ್ನು
ತಮ್ಮ ಉತ್ತರಾಧಿಕಾರಿಗಳಾದ ಜಗದ್ಗುರು ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿ
ಗಳವರಿಗೆ ಒಪ್ಪಿಸಿ ತಾವು ಧರ್ಮಗ್ರಂಥಗಳ ಅಭ್ಯಾಸ, ಜಪ ಮತ್ತು ಆಧ್ಯಾತ್ಮಿ
ಕಾರ್ಯಗಳಲ್ಲಿ ನಿರತರಾದರು.

ಈ ಸಮಯಕ್ಕಾಗಲೇ ಶ್ರೀ ಗಳವರು ಅರಮನೆ ಮುಜರಾಯಿ ಭಕ್ಷಿಗಳಾಗಿದ್ದ
ರಾಜಸೇವಾಸಕ್ತ ರಾಜಕವಿಭೂಷಣ ಶ್ರೀ ಮಾನ್. ಹೆಚ್. ಲಿಂಗರಾಜೇ ಅರಸಿನವರ ಸಹಾಯದೊಡ
ಕೈ॥ ಶ್ರೀ ಸಂಗಪ್ಪಶಾಸ್ತ್ರಿಗಳಿಗೆ ಮಠದ ಇತಿಹಾಸವನ್ನೊದಗಿಸಿ ಶ್ರೀ ಮಠದ ಚರಿ
ಯನ್ನು ಆಧರಿಸಿ "ಶ್ರೀ ಮಠದ ಗುರು ಪರಂಪರೆ" ಎಂಬ ಕಾವ್ಯವನ್ನು ರಚಿಸಿ ಪ್ರಕ
ಗೊಳಿಸಿದರು.

## ಶ್ರೀ ಗೌರೀ ಶಂಕರ ಮಹಾಸ್ವಾಮಿಗಳವರ ಆಗಮನ

ಶ್ರೀ ಗಳವರು ಶ್ರೀ ರೇಣುಕಾಚಾರ್ಯ ಭಗವತ್ಪಾದರ ಆಚಾರ್ಯ ಪೀಠ

ಸಂಪ್ರದಾಯಕ್ಕೆ ಸೇರಿದವರು. ಕನ್ನಡನಾಡಿನಲ್ಲಿ ಆಚಾರ್ಯ ಪಂಥದವರಿಗೂ, ಶಿವಾದಿ ಪ್ರಮುಖರ ಪಂಥದವರಿಗೂ ವೈಮನಸ್ಸು ಬೆಳೆದು ದೊಡ್ಡ ದೊಡ್ಡ ಮಠಗಳು ನಾಡಿನ ಅವಹೇಳಕ್ಕೆ ಕಾರಣವಾದುವು, ಆದರೆ ಶ್ರೀ ಗಳವರಲ್ಲಿ ಉದಾತ್ತವಾದ ಒಂದು ಸದ್ಗುಣವನ್ನು ನಾವು ಕಾಣುತ್ತೇವೆ. ನಿತ್ಯವೂ ತಮ್ಮ ಬಳಿಯಲ್ಲಿ ಯಾರಾದರೊಬ್ಬರು ವಿರಕ್ತ ಮೂರ್ತಿಗಳು ಇರಲೇ ಬೇಕು. ಶ್ರೀ ಮಠದಲ್ಲಿ ವಿರಕ್ತ ಮಹಾನೀಯರು ಪೂಜೆ ನಡೆಸಲೇ ಬೇಕು ತಾವು ಹಿರಿಯ ಮಠದವರೆಂಬ ದುರಭಿಮಾನದಿಂದ ಅನ್ಯರನ್ನು ಎಂದೂ ಕಾಣುವುದಿಲ್ಲ. ಜಂಗಮರ ಸೇವೆ ಜಂಗಮದಾಸೋಹದಲ್ಲಿ ಅವರಿಗೆ ಅತ್ಯಂತ ಆಸಕ್ತಿ ಮತ್ತೂ ಅಪಾರ ಪೂಜ್ಯಮನೋಭಾವನೆ ಅಂತೆಯೇ ಕಾಶೀಕ್ಷೇತ್ರದಲ್ಲಿ ಮೂವತ್ತಮೂರು ವರ್ಷಗಳಕಾಲ ವಿದ್ವಾಂಸರೆನಿಸಿದ ಪರಮ ಪೂಜ್ಯ, ಶ್ರೀ ನಿ.ಪ್ರ. ಸ್ವ. ಗೌರೀಶಂಕರ ಮಹಾಸ್ವಾಮಿಗಳವರು ಕಾಶಿಯಿಂದ ಸಾವಿರದ ಒಂಭೈನೂರಾ ನಲ್ವತಾರರಲ್ಲಿ ಮೈಸೂರಿಗೆ ಹಿಂದಿರುಗಿದರು ಅವರ ವಿದ್ವತ್ ಪ್ರತಿಭೆ, ಇಡೀನಾಡಿನಲ್ಲಿ ಪ್ರಚಾರಕ್ಕೆ ಬರಲೆಂದು ಅಲ್ಲಲ್ಲಿ ಸಮಾರಂಭಗಳನ್ನೇರ್ಪಡಿಸಿದರು. ಶ್ರೀ ಮಠದಲ್ಲಿ ಅವರಿಗೆ ಅಪಾರ ಪೂಜ್ಯತೆಯನ್ನು ವ್ಯಕ್ತಪಡಿಸಿದರು. ಆದರೆ ದೇಶದ ದುರ್ದೈವವೋ ಎನ್ನುವಂತೆ ಅವರು ಕಾಶಿಯಿಂದ ಬಂದು ಮೈಸೂರಿನಲ್ಲಿ ನೆಲಸಿದ ಕೆಲವೇ ವರ್ಷಗಳಲ್ಲಿ ಶಿವಸಾನ್ನಿಧ್ಯವನ್ನು ಸೇರಿದರು. ಶ್ರೀ ಗಳವರು ಅವರಿಂದ ಹಲವಾರು ಮಹಾತ್ಕೃತಿಗಳನ್ನು ರಚಿಸಬೇಕೆಂದು ಆಶಯವನ್ನುಳ್ಳವರಾಗಿದ್ದರು. ಆದರೆ ವಿಧಿಲೀಲೆ ಬೇರೆಇತ್ತು ಆದ್ದರಿಂದ ಅದು ನೆರವೇರಲಿಲ್ಲಾ.

## ಕ್ಷೇತ್ರಗಳ ಸಂದರ್ಶನ

ಶ್ರೀಗಳವರಿಗೆ ನಾಡಿನ ಹಲವಾರು ಕ್ಷೇತ್ರಗಳ ಸಂಸ್ಕೃತಿಯನ್ನು ತಿಳಿಯಬೇಕೆಂಬ ಅಪೇಕ್ಷೆ ಬಹಳ. ಆದುದರಿಂದಲೇ ಅವರು ಉತ್ತರ ಭಾರತದಲ್ಲಿ ಕಾಶಿಗೂ ಪ್ರಯಾಣ ಮಾಡಿದ್ದರು. ದಕ್ಷಿಣದೇಶದಲ್ಲಿ ಧನುಷ್ಕೋಡಿಯವರೆಗೆ, ರಾಮೇಶ್ವರ, ಚಿದಂಬರ ತಿರುವಣ್ಣಾಮಲೈ, ಮಧುರೆ, ಕಂಚಿ, ಕಾಳಹಸ್ತಿ ಮುಂತಾದ ಸ್ಥಳಗಳಿಗೂ ಭೇಟಿಯಿತ್ತರು. ಕರ್ಣಾಟಕದಲ್ಲಿ ಗೋಕರ್ಣದವರೆಗೂ ಮತ್ತು ಶರಣರ ಆವಾಸಸ್ಥಾನಗಳಾದ ಧರ್ಮ ಕ್ಷೇತ್ರಗಳಿಗೂ ಅಂದರೆ ಕಲ್ಯಾಣ, ಕೊಲ್ಲಿಪಾಕೆ, ಉಡುಪಿ, ಶ್ರೀ ಶೈಲ ಮುಂತಾದ ಸ್ಥಳಗಳಿಗೂ ದರ್ಶನವಿತ್ತು ಎಲ್ಲಾ ಕ್ಷೇತ್ರಗಳಲ್ಲಿ ಜನರ ಸಂಸ್ಕೃತಿಯ ಪರಿಚಯ ಪಡೆದಿರುತ್ತಾರೆ. ತಮ್ಮ ಅನುಭವದ ಪರಿಣಾಮವಾಗಿ ಶ್ರೀ ಮಠದ ಆಶ್ರಯದಲ್ಲಿ ಹಲವಾರುಮಹತ್ವದ ಸಂಸ್ಥೆಗಳು ಬೆಳೆಯಲು ಕಾರಣರಾಗಿದ್ದಾರೆ.

## ಮಂತ್ರ ದರ್ಶನ

ಶ್ರೀಗಳವರ ಜೀವನದಲ್ಲಿ ಅತಿಮಹತ್ವದ ಘಟನೆಯೊಂದು ಸಂಭವಿಸಿತು. ಅವರಿಗೆ ದಮ್ಮಿನ ವ್ಯಾಧಿ ಉಂಟಾಗಿತ್ತು ಈಗ್ಗೆ ಹನ್ನೆರಡು ವರ್ಷಗಳಹಿಂದೆ ಉಲ್ಬಣಗೊಂಡು ಅವರ ಆಯುಃ ಪ್ರಮಾಣವೇ ಮುಗಿಯಿತೆಂದು ಅನೇಕಮಂದಿ ಜ್ಯೋತಿಷ್ಯ ವಿದ್ವಾಂಸರು

ನಿರ್ಣಯಿಸಿದ್ದರು ಆ ಸಮಯದಲ್ಲಿ ಶ್ರೀ ನಿ. ಪ್ರ. ಸ್ವ. ಶ್ರೀ ಗೌರಿಶಂಕರ ಮಹಾ ಸ್ವಾಮಿಗಳವರು ಶ್ರೀಗಳವರು ಷಡಕ್ಷರೀ ಮಹಾಮಂತ್ರ ಲೇಖನ ತಪಸ್ಸನ್ನು ಕೈಗೊಳ್ಳ ಬೇಕೆಂದು ಅರಿಕೆ ಮಾಡಿಕೊಂಡರು. ಅಂತೆಯೇ ಹನ್ನೆರಡು ವರ್ಷಗಳಿಂದ ಈ ತಪಸ್ಸು ಇಂದಿನವರೆಗೆ ಅತ್ಯಂತ ಸಾಹಸಮಯವಾಗಿ ಜರುಗುತ್ತಿದೆ. ಪ್ರಾತಃಕಾಲ ಸ್ನಾನ ಪೂಜಾದಿಗಳನ್ನು ಮುಗಿಸಿದರೆ ಸಂಜೆಯವರೆಗೆ ಸುಮಾರು ಹತ್ತುಹನ್ನೆರಡು ಘಂಟೆಗಳ ಕಾಲ ಕುಳಿತ ಸ್ಥಳವನ್ನು ಬಿಟ್ಟು ಏಳದಂತೆ ಹಿಡಿದ ಲೇಖಣಿಯನ್ನು ಕೆಳಗೆ ಇಳಿಸ ದಂತೆ ಷಡಕ್ಷರೀ ಮಹಾಮಂತ್ರವನ್ನು ಬರೆದಿರುತ್ತಾರೆ. ಈ ಮಂತ್ರವಲ್ಲದೆ ಒಂದೂವರೆ ಲಕ್ಷ ದೇವೀನವಾರ್ಣ್ವ, ಲಕ್ಷ ಪ್ರದೀಪ ಮಂತ್ರವನ್ನೂ ಸಹ ರಚಿಸಿರುತ್ತಾರೆ. ಇನ್ನೂ ಲೇಖನ ತಪಸ್ಸು ಅವ್ಯಾಹತವಾಗಿ ನಡೆಯುತ್ತಿದೆ. ತಾವು ನಡೆಸಿದ ತಪಸ್ಸಿನ ಫಲ ಭಕ್ತವೃಂದಕ್ಕೆ ದೊರೆಯಲೆಂದು ಹಗಲಿರುಳು ಹಂಬಲಿಸುತ್ತಿರುತ್ತಾರೆ.

## ಶ್ರೀ ಶಿವಮಂತ್ರ ಮಹಿಮೆ

ಶ್ರೀಗಳವರು ನಡೆಸಿದ ತಪಸ್ಸಿನ ಫಲವಾಗಿ ಅವರಿಂದಲೇ ಶ್ರೀ ಶಿವಮಂತ್ರ ಮಹಿಮೆ ಎಂಬ ಅಮೋಘ ಕೃತಿಯೂ ಪ್ರಕಾಶಿತವಾಗಿದೆ. ಅದರಲ್ಲಿ ಶ್ರೀಗಳವರು ಪುರಾಣ ಇತಿಹಾಸಗಳಲ್ಲಿರುವ ಶಿವಮಂತ್ರ ಮಹಿಮೆಯನ್ನೆಲ್ಲಾ ಸಂಗ್ರಹಿಸಿ ಅರ್ಥ ವಿವರಣೆ ಮತ್ತು ತತ್ವಾಭಿಮಾನಿಗಳಿಗೆ ಮಹಾದಾಶೀರ್ವಾದವನ್ನು ದಯಪಾಲಿಸಿ ದ್ದಾರೆ. ಶ್ರೀ ಶಿವಮಂತ್ರ ಲೇಖನವೂ, ಅವರ ಹಿರಿಮೆಯೂ ಅನೇಕ ಜನ ಜ್ಞಾನಿ ಗಳನ್ನೂ, ತಪಸ್ವಿಗಳನ್ನೂ, ವಿದ್ವನ್ಮಣಿಗಳನ್ನೂ ಆಕರ್ಷಿಸಿದೆ. ಅವುಗಳಲ್ಲಿ ಹಲವನ್ನು ಈ ಸಮಯದಲ್ಲಿ ತಿಳಿಸುವುದು ಸೂಕ್ತವಾಗಿಯೇ ಇದೆ.

## ಶ್ರೀಗಳವರು ಬರೆದಿರತಕ್ಕ ಮಹಾಮಂತ್ರ ಲೇಖನವನ್ನು ಪ್ರತ್ಯಕ್ಷವಾಗಿ ನೋಡಿ ತಮ್ಮ ಅಭಿಪ್ರಾಯವನ್ನು ಬರೆದಿರತಕ್ಕ ಮಠಾಧಿಪತಿಗಳು

---

ಶೃಂಗೇರಿ ಮಠಾಧೀಶರಾದ ಜಗದ್ಗುರು ಶ್ರೀ ವಿದ್ಯಾತೀರ್ಥ ಮಹಾಸ್ವಾಮಿ ಗಳವರು ಶಿವಮಂತ್ರ ಲೇಖನವನ್ನು ಕುರಿತು ತಮ್ಮ ಆನಂದವನ್ನು ಈರೀತಿ ವ್ಯಕ್ತಪಡಿ ಸಿರುತ್ತಾರೆ.

ನಮಃಶಿವಾಯ ಮಂತ್ರೋಯಂ ವಾಗೀಶ ವಶವರ್ತಿನೀ । ಅಹೋ ಮೋಹಸ್ಯ ಮಹಾತ್ಮ್ಯಂ ನರಕಂ ಏನಪಶ್ಯತಿ ॥ ಶಿವಪಂಚಾಕ್ಷರೀ ಮಂತ್ರವಿದೆ. ವಾಕ್ಕು ನಮ್ಮ ದಾಗಿದೆ. ಹೀಗಿದ್ದರೂ ನರಕವನ್ನು ನೋಡುವುದೆಂದರೆ, ಮೋಹದ ಮಹತ್ವೆ ಎಷ್ಟಿರ ಬೇಕೆಂದು ಹೇಳಿ ಪ್ರಾಚೀನರು ಪಂಚಾಕ್ಷರೀ ಜಪದಿಂದ ಸಕಲ ಪಾಪಗಳನ್ನು ಕಳೆದು ಕೊಂಡು ಶಿವನ ಅನುಗ್ರಹವನ್ನುಪಡೆಯುತ್ತೇವೆಂದು ಪ್ರಶಂಸಿಸಿರುತ್ತಾರೆ. ಶೃತಿ ಸ್ಮೃತಿ ಪುರಾಣಗಳಲ್ಲಿಯೂ ಈ ಮಂತ್ರವನ್ನು ಪ್ರತಿಪಾದಿಸಿವೆ. ಇಂತಹ ಉತ್ತಮೋತ್ತಮ

ಮಹಾಮಂತ್ರವನ್ನು ಶ್ರೀ ಸ್ವಾಮಿಗಳವರು ಇದುವರೆಗೆ ಎರಡುಕೋಟಿಯವರೆಗೆ ಬರೆದು ಶಿವಾನುಗ್ರಹ ಸಾಧನವಾದ ಕಠಿಣಯೋಗವನ್ನು ಆಚರಿಸುತ್ತಲಿರುವುದನ್ನು ಮನಗಂಡು ತುಂಬಾ ಸಂತೋಷಪಡುತ್ತೇವೆ. ಈ ಯೋಗಮಾರ್ಗವು ಮುಂದುವರೆದು ಮಂತ್ರಾಕ್ಷರ ಸಂಖ್ಯಾತ ಕೋಟಿ ಲೇಖನವು ಪೂರ್ಣವಾಗಲು ಮತ್ತು ಇದರಿಂದ ಲೋಕಕಲ್ಯಾಣ ವಾಗಲೂ ಸಹ ಶಿವಾನುಗ್ರಹ ಸುಧಾವರ್ಷಣವು ಸದಾವರ್ಷಿಸಲೆಂದು ಪರಶಿವನನ್ನು ಪ್ರಾರ್ಥಿಸುತ್ತೇವೆ.

ಬೆಂಗಳೂರು ತಾ॥ 22-9-61 ವಿದ್ಯಾತೀರ್ಥ

**ಚಿತ್ರದುರ್ಗದ ಶೂನ್ಯ ಸಿಂಹಾಸನ ಪೀಠಾಧಿಕಾರಿಗಳವರು**

**ಶ್ರೀ. ನಿ. ಜಗದ್ಗುರು ಜಯದೇವ ಮುರುಘ ರಾಜೇಂದ್ರ ಸ್ವಾಮಿಗಳವರು**

ಓಂನಮಶಿವಾಯ ಓಂನಮಃಶಿವಾಯ ಓಂನಮಃಶಿವಾಯ । ವೀರಸಿಂಹಾಸನಾ ಧೀಶ್ವರರಾದ ಸುತ್ತೂರು ಮಠಾಧ್ಯಕ್ಷ ಶ್ರೀ ಶಿವರಾತ್ರೀಶ್ವರ ನಾಮಕರಾದ ನೀವು ಕೈಗೊಂಡಿರುವ ಮಹಾಮಂತ್ರ ಲೇಖನವು ನಿಮಗಿರುವ ಮಂತ್ರದಲ್ಲಿಯ ಪರಮ ಶ್ರದ್ಧಾಭಕ್ತಿಯನ್ನೇ ಧೃಡೀಕರಿಸುತ್ತದೆ. ಇದೇ ವಿಧವಾದ ಶ್ರದ್ಧೆಯು ಶಾಶ್ವತವಾಗಿ ಇದ್ದು ಆಯುರಾರೋಗ್ಯಭಾಗ್ಯಗಳೊಂದಿಗೆ ಇನ್ನೂ ಹೆಚ್ಚಾದ ಸಮಾಜ ವಿದ್ಯಾಭಿ ವೃದ್ಧಿಯ ಕಾರ್ಯಗಳು ಜರುಗಲೆಂದು ಹಾರೈಸೋಣವಾಗಿದೆ.

ಶಿವೋವಃ ಶಿವಾಯಭವತು ಶ್ರೀ ಮನ್ನಿರಂಜನಜಗದ್ಗುರು ಜಯದೇವ

ಬೆಟ್ಟದಪುರ **ಮುರುಘರಾಜೇಂದ್ರಸ್ವಾಮಿ**

6–4–1953

ಧಾರವಾಡದ ಹಾವೇರೀಪೇಟೇ ಶ್ರೀಮುರುಘಾಮಠದ ಶ್ರೀ. ನಿ. ಪ್ರ. ಶ್ರೀ. ಶ್ರೀ

ಮೃತ್ಯುಂಜಯ ಸ್ವಾಮಿಗಳವರು

ಓಂನಮಃಶಿವಾಯ. ಓಂನಮಃಶಿವಾಯ. ಓನಮಃಶಿವಾಯ. ಓಂನಮಃಶಿವಾಯ.
ಓಂನಮಃಶಿವಾಯ. ಓಂನಮಃಶಿವಾಯ.

ಸುತ್ತೂರು ಶ್ರೀ ವೀರಸಿಂಹಾಸನಾಧೀಶ್ವರರಾದ ಶ್ರೀ ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರು, ಮೈಸೂರು ಗವಿ ಮಠಾಧ್ಯಕ್ಷರಾದ ಶ್ರೀ ಗೌರೀಶಂಕರ ಮಹಾ ಸ್ವಾಮಿಗಳವರ ಅಪ್ಪಣೆಮೇರೆಗೆ ಇಲ್ಲಿಯವರೆಗೆ ಆರುಲಕ್ಷ ಷಡಕ್ಷರ ಮಹಾಮಂತ್ರವನ್ನು ಬಹು ಶ್ರದ್ಧಾಭಕ್ತಿಯಿಂದ ಬರೆದಿರುವುದು ನಮ್ಮೆಲ್ಲರ ಉದ್ಧಾರಕ್ಕೆಂದು ನಾನು ಭಾವಿಸಿ ದ್ದೇನೆ. ತಾವು ಕೈಗೊಂಡ ಕಾರ್ಯಗಳೆಲ್ಲವೂ ಅಭಿವೃದ್ಧಿಯಾಗಿ ತಮಗೆ ಆಯುರಾ ರೋಗ್ಯ ಉಂಟಾಗಲೆಂದು ಧ್ಯಾನಿಸುತ್ತೇನೆ. ಈ ಮಂತ್ರ ಲೇಖನವು ಸರ್ವರಿಗೂ ಪೂಜಾರ್ಹವಾಗಿದೆ.

**ಮೃತ್ಯುಂಜಯ**

ಸುತ್ತೂರು

ತಾರೀಖು 13-4--1953

ಜಯನಾಮ ಸಂವತ್ಸರದ ಜೇಷ್ಠ ಬಹುಳ ಬಿದಿಗೆ ಶುಕ್ರವಾರ ತಾ॥18-6-54
ಬಳ್ಳಾರಿ ಜಿಲ್ಲಾ ಹೊಸಪೇಟೆ ಸಂಸ್ಥಾನಮಠ ಶ್ರೀ. ನಿ.ಪ್ರ. ಶ್ರೀ- ಶ್ರೀ. ಕೊಟ್ಟೂರ
ಸ್ವಾಮಿಗಳವರು, ಓಂನಮಃಶಿವಾಯ ಓಂನಮಃಶಿವಾಯ.

ಸುತ್ತೂರು ವೀರ ಸಿಂಹಾಸನಾಧೀಶ್ವರರಾದ ಶ್ರೀ ಶ್ರೀ ಶಿವರಾತ್ರೀಶ್ವರ ಮಹಾ
ಸ್ವಾಮಿಗಳವರು ಈಗ ಕೈಕೊಂಡಿರು ಪ್ರಣವದ ಕಾರ್ಯಗಳು ಪರಿಶೋಧನೆ ಮಾಡ
ಲಾಗಿ ಹನ್ನೆರಡು ಲಕ್ಷ ಬರೆದಿರುವುದಾಗಿ ತಿಳಿಯುತ್ತದೆ. ಇಂಥ ಶಿವಯೋಗದಿಂದ ಇಡಿ
ನಮ್ಮ ವೀರಶೈವ ಸಮಾಜ ಯೇಳ್ಗೆಯಾಗುವುದೆಂದು ನಮ್ಮ ಭಾವನೆಯಾಗುತ್ತದೆ.

ಸುತ್ತೂರು — ಇತಿ ಶ್ರೀ ಮನ್ನಿರಂಜನ ಜಗದ್ಗುರು
ತಾರೀಖು॥ 11-10-1954 — ಶ್ರೀ ಕೊಟ್ಟೂರು ಸ್ವಾಮಿಗಳವರು ಸಂಸ್ಥಾನಮಠ
ಬಳ್ಳಾರಿ

ಬಾಗೇಪಲ್ಲಿ ತಾಲ್ಲೂಕು ಗೂಳೂರು ಶ್ರೀ ನಿಡುಮಾಮಿಡಿ ಶ್ರೀ ಶೈಲ ಸಂಸ್ಥಾನದ
ಪಟ್ಟಾಧ್ಯಕ್ಷರಾದ ಶ್ರೀ. ಜ. ಚ. ಶ್ರೀ ಗಳವರು
ಪಂಚಾಕ್ಷರ ಮಯನಾದ ಪರಮೇಶ್ವರನಿಗೆ ಪೊಡಮಡುವೆ.

ಮಂತ್ರ ಮಯವಾದುದು ಜಗತ್ತು. ಮಂತ್ರಮಯವಾಗಿದ್ದಾನೆ ಮಾನವ
ಅರಿದೋ ಅರಿಯದೆಯೋ ಪ್ರತಿಮಾನವನು ಪ್ರತಿದಿನ ಇಪ್ಪತ್ತೊಂದು ಸಾವಿರದ ಅರು
ನೂರು ಹಂಸ ಮಂತ್ರ ಜಪವನ್ನು ಪ್ರತಿಜೀವಿಯು ಮಾಡುತ್ತಾನೆ. ನಿಸರ್ಗನಾಗಿ
ಬಲ್ಲಿಚ ಅಂದರೆ ಮಂತ್ರ ದೃಷ್ಟರಾದವರು ಆ ಹಂಸವನ್ನು ಸೋಹಂ ಅನ್ನಾಗಿ ಏಕೈಕ
ಪ್ರಾಣಾಯಾಮದಿಂದ ರಚಿಸಿ ಕೊಂಡಿದ್ದಾರೆ. ಸೋಹಂ ದೊಳಗಿನ ವ್ಯಂಜನಾಕ್ಷರಗಳ
ನ್ನು ಕಳೆದುದೇ ಓಂಕಾರ ಪ್ರಣವವು. ಇದರಿಂದ ಪಂಚಾಕ್ಷರಿ ಜನಿಸುತ್ತಿದೆ. ಓಂಕಾರ
ಸಹಿತವಾದಲ್ಲಿ ಷಡಕ್ಷರವೆನಿಸುತ್ತದೆ.

ಈ ಷಡಕ್ಷರ ಮಂತ್ರವು ಏಳುಕೋಟಿ ಮಂತ್ರಗಳಿಗೆ ರಾಜ. ಇದಕ್ಕೆ ಮಿಗಿಲಾದ
ಮಂತ್ರವಿಲ್ಲಾ, ತಂತ್ರವಿಲ್ಲಾ ಇಂತಹ ಮಹಾಮಂತ್ರವನ್ನು ತಪಸ್ವಿಗಳೂ, ಜ್ಞಾನಿಗಳೂ
ವೃದ್ಧರೂ ಆದ ಸುತ್ತೂರು ವೀರ ಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಶಿವರಾತ್ರಿ
ಮಹಾ ಸ್ವಾಮಿಗಳವರು ತೊಂಭತ್ತ ನಾಲ್ಕುಲಕ್ಷ ಲಿಖಿಸಿದನ್ನು ನೋಡಿ ತುಂಬ ಆನಂದಿ
ಸಿವೆನು ಸದರೀ ಜಗದ್ಗುರುಗಳವರು ನಿಜಕ್ಕೂ ಮಂತ್ರಮಯಿಪಿಂಡರು. ವೀರಶೈವ ತತ್ವ
ಕ್ಕೆ ಸಾಕ್ಷಾತ್ ಸಾಕ್ಷಿಸ್ವರೂಪರು ಪರಮೇಶ ಸ್ವರೂಪರು. ಇದರಿಂದ ಇವರು ತಮ್ಮ
ಎಲ್ಲ ದೈಹಿಕಗುಣಗಳನ್ನು ಕಳಚಿದ್ದಾರೆ, ದೈವಿಕ ದಿವ್ಯಶಕ್ತಿ ಸಂಗಳಿಸಿದಾರೆ. ಇದರಿಂದ
ನಮ್ಮ ಶಿವಚಾರ್ಯ ಸಂಕುಳವು ಹೆಮ್ಮೆಪಡಬೇಕಾದದು ಒಂದು ಕೀರ್ತಿಯೂ ಸಹ
ಜೊತೆಗೆ ಬಂದು ಮಂತ್ರಮಯಮಂಗಳವೂ ಸಹ ಇಂತಹ ಆದರ್ಶರಾದ ಮಹಾಸನ್ನಿಧಿ

ಯವರ ಅತ್ಯಂತ ಮನೋಹರವಾದ ಮಂತ್ರತಂತ್ರವು ನಮಗೆಲ್ಲ ಮಂಗಳವನ್ನುಂಟು ಮಾಡಲೆಂದು ಹೃದಯಾರೆ ಹಾರೈಸುತ್ತೇನೆ.

ಗುರುಕುಲಾಶ್ರಮ ಶ್ರೀ. ಜ. ಚ. ನಿ. ಸಂಸ್ಥಾನ ಶ್ರೀ ಶೈಲಸಂಸ್ಥಾನ
ತಾ॥.4–3–1956 ಗೂಳೂರು.

### ಶ್ರೀ. ನಿ. ಪ್ರ. ಶ್ರೀ. ಶ್ರೀ. ಇಲಕಲ್ಲ ಮಹಾಂತಸ್ವಾಮಿಗಳ ಲೇಖನ

ಓಂನಮಃಶಿವಾಯ ಓಂನಮಃಶಿವಾಯ ಓಂನಮಃಶಿವಾಯ ಓಂಮಂತ್ರ ಮೂರ್ತಯೇ ತು ಭ್ಯಂ ಶಿವಾಯ ಶಿವದಾಯಿನೇ. ನಾವು ಈದಿವಸ ಭೂಕೈಲಾಸವಾದ ಸುತ್ತೂರು ಕ್ಷೇತ್ರಕ್ಕೆ ದಯಮಾಡಿಸಿದೆವು, ಜಗದ್ಗುರು ಶ್ರೀ ಶಿವರಾತ್ರೀಶ್ವರಸ್ವಾಮಿಗಳ ದರ್ಶನ ಮಾಡಿಕೊಂಡೆವು. ಶ್ರೀಗಳವರು ಮಂತ್ರ ಲೇಖನದ ಜಪ ಯಜ್ಞದಲ್ಲಿ ತೊಡಗಿ ಅರು ವರ್ಷದ ಹತ್ತು ತಿಂಗಳಾದವು. ಈಗ ಒಂದು ಕೋಟಿ ಇಪ್ಪತ್ತುಮೂರು ಲಕ್ಷಹದಿ ನಾಲ್ಕುಸಾವಿರದ ಐದುನೂರ ಎಂಟು ಮಂತ್ರಗಳನ್ನು ಬರೆದಿದ್ದಾರೆ. ಪೂಜ್ಯರದು ಅಪರ ವಯಸ್ಸು ಇಂಥ ಮುಪ್ಪಿನ ವಯಸ್ಸಿನಲ್ಲಿ ಯೌವನರಂತೆ ಮಂತ್ರಲೇಖನದಲ್ಲಿ ಉತ್ಸಾಹ ಗೊಂಡಿದ್ದಾರೆ, ಇಂಥಾತಪಸ್ವಿಗಳನ್ನು ಈಕಾಲದಲ್ಲಿ ಕಾಣುವುದು ಅಪರೂಪ ನಮ್ಮ ಪುಣ್ಯವು ಅಪಾರವಾದದ್ದರಿಂದ ಈಮಂತ್ರ ಸ್ವರೂಪರ ದರ್ಶನವು ಇಂದು ನಮಗೆ ಲಭಿಸಿತ್ತು ಜಗತ್‌ಕಲ್ಯಾಣಕ್ಕಾಗಿ ನಡೆದ ಈಮಂತ್ರ ಯಜ್ಞವು ಇನ್ನೂ ಬಹುಕಾಲ ನಡೆಯುವಂತೆ ಪರಮೇಶ್ವರನು ಈ ಜಗದ್ಗುರುಗಳಿಗೆ ದೀರ್ಘಾಯುಷ್ಯವನ್ನು ದಯ ಪಾಲಿಸಲೆಂದು ಆಜಗನ್ನಿಯಾಮಕನನ್ನು ಅನನ್ಯ ಭಾವನೆಯಿಂದ ಪ್ರಾರ್ಥಿಸಿಕೊಳ್ಳು ತ್ತೇವೆ.

ಸುತ್ತೂರು ಶಿವಯೋಗ ಮಂದಿರನಾಸಿ ಇಲಕಲ್ಲು
ತಾ॥ 5–4-1958 ಮಹಂತಸ್ವಾಮಿಗಳು

### ಗುಬ್ಬಿ ತಾಲ್ಲೂಕು ಗುಬ್ಬಿಕಸಬಾದಲ್ಲಿರುವ ತೊರೆಮಠದ ಶ್ರೀ. ನಿ. ಪ್ರ. ಶ್ರೀ ನೀಲಕಂಠಸ್ವಾಮಿಗಳವರು

ತಾವು ಅಕಸ್ಮಾತ್ತಾಗಿ ಈಬಡಮಠಕ್ಕೆ ದಯಮಾಡಿಸಿ ಎಲ್ಲರಿಗೂ ದರ್ಶನಕೊಟ್ಟು ತಮ್ಮ ಮಂತ್ರಯಜ್ಞದ ತಪಸ್ಸಿನ ಫಲವನ್ನು ಎಲ್ಲರಿಗೂಕೊಟ್ಟು ಆನಂದಗೊಳಿಸಿದ್ದರಲ್ಲಿ ಎಲ್ಲರಿಗೂ ತುಂಬಾ ಸಂತೋಷವನ್ನುಂಟು ಮಾಡಿದೆ. ತಮ್ಮ ತಪಸ್ಸಿನ ಪ್ರಭಾವವು ತಮ್ಮ ಮುಂದಿನ ಚಿಕ್ಕ ಸ್ವಾಮಿಗಳವರಲ್ಲಿ ಹಾಗೆ ನಮ್ಮ ಭರತ ಭೂಮಿಯಲ್ಲಿ ಫಲದ್ರೂ ಪವಾಗಿ ದೇಶಕ್ಕೆ ಕಲ್ಯಾಣವನ್ನುಂಟುಮಾಡಲೆಂದು ಹಾರೈಸೋಣವಾಗಿದೆ. ತಮ್ಮ ಪ್ರಭಾವವು ಉತ್ತರೋತ್ತರ ಬೆಳೆದು ಜಗತ್ತಿಗೆ ನಂದಾ ದೀಪವಾಗಲೆಂದು ಪರಮಾತ್ಮ ನಲ್ಲಿ ನಮ್ಮ ಪ್ರಾರ್ಥನೆಯಿದೆ.

ಗುಬ್ಬಿ ತಾ॥ 1-6-1958 ಶ್ರೀ ನೀಲಕಂಠಸ್ವಾಮಿಗಳು, ತೊರೆಮಠ

ಶಿವಮೊಗ್ಗಾ ಜಿಲ್ಲಾ ಸಾಗರದ ತಾಲ್ಲೂಕು ಆನಂದಪೂರೀ ಶ್ರೀ ಮುರುಘಾ ಮಠದ ಶ್ರೀ ಪ್ರ.ನಿ.ಜ. ಶ್ರೀ ಸಚ್ಚಿದಾನಂದಸ್ವಾಮಿಗಳವರು

ಓಂ ನಮಃಶಿವಾಯ ಓಂ ನಮಃಶಿವಾಯ ಓಂ ನಮಃಶಿವಾಯ
ಓಂ ನಮಃಶಿವಾಯ ಓಂ ನಮಃಶಿವಾಯ

ಸುತ್ತೂರು ಸಂಸ್ಥಾನಾಧೀಶ್ವರರಾದ ಶ್ರೀಶಿವರಾತ್ರಿ ಸ್ವಾಮಿಗಳವರು ಇಲ್ಲಿಯ ವರೆವಿಗೆ ಬಹಳ ಶ್ರದ್ಧಾ ಭಕ್ತಿಯಿಂದ ಹನ್ನೆರಡುಲಕ್ಷದ ಮೂವತ್ತುಸಾವಿರ ಶ್ರೀ ಷಡಕ್ಷರೀ ಮಹಾ ಮಂತ್ರವನ್ನು ಬರೆದಿರುವುದು ನಮಗೆ ಬಹಳ ಸಂತೋಷವಾಗಿದೆ. ಇದರಿಂದ ನಮ್ಮ ದೇಶಕ್ಕೂನಮ್ಮ ನಾಡಿಗೂ ಸಹ ಶ್ರೇಯಸ್ಸು ಉಂಟಾಗಲೆಂದು ಹಾರೈಸುತ್ತೇವೆ.

ಸುತ್ತೂರು — ಶ್ರೀ ಪ್ರ.ನಿ.ಜ. ಶ್ರೀ ಸಚ್ಚಿದಾನಂದ
ತಾ|| 14-3-55 — ಮಹಾಸ್ವಾಮಿಗಳು

ಸೊಲ್ಲಾಪುರದ ಕಿರೀಟಿಮಠದ
ಶ್ರೀ ನಿ. ಪ್ರ. ಶ್ರೀ ಮೃತ್ಯುಂಜಯಸ್ವಾಮಿಗಳವರು.

ಓಂನಮಃಶಿವಾಯಃ ಶ್ರೀ ಗುರುಬಸವಲಿಂಗಾಯನಮಃ– ಶ್ರೀ ಶಿವಯೋಗೀ ಶಿವರಾತ್ರಿ ಮಹಾಸ್ವಾಮಿಗಳು ತಮ್ಮ ಜಪಾನುಷ್ಠಾನ ತಪಶ್ಚರ್ಯೆಯನ್ನು ತೊಂಭತ್ತೊಂದು ಲಕ್ಷ ನಲವತ್ತೈದು ಸಾವಿರ ಒಂದುನೂರಾ ನಾಲ್ಕರವರೆಗೆ ನಡೆಯಿಸುತ್ತಾ ಬಂದಿರುವುದು, ಆ ಶಿವಯೋಗಿಗಳ ಶುದ್ಧಾಂತಃಕರಣದ್ಯೋತವಲ್ಲದೆ ಮತ್ತೇನು. ಇನ್ನು ಆರು ಕೋಟಿ ಜಪಾನುಷ್ಠಾನದ ಸಮಾಪ್ತಿಯ ಮಹೋತ್ಸವವನ್ನು ನೋಡುವ ಸುಯೋಗವನ್ನು ಶಿವನು ನಮಗೆ ಆಶೀರ್ವದಿಸಲೆಂದು ಪ್ರಾರ್ಥಿಸುತ್ತೇವೆ.

ಸುತ್ತೂರು — ಮೃತ್ಯುಂಜಯಸ್ವಾಮಿಗಳು
20-1-56 — ಕಿರೀಟಿಮಠ ಸೊಲ್ಲಾಪುರ (ಮುಧೋಳ)

ಮುಳುಗುಂದದ ಶ್ರೀ ಮಹಂತ ಶಿವಯೋಗಿಗಳು

ಓಂನಮಃಶಿವಾಯ, ಓಂನಮಃಶಿವಾಯ, ಓಂನಮಃಶಿವಾಯ, ಓಂನಮಃಶಿವಾಯ

ಈ ಮಹಾಮಂತ್ರವನ್ನು ಸುತ್ತೂರಿನ ಈಗಿನ ಪಟ್ಟಾಧ್ಯಕ್ಷರಾದ ಶ್ರೀ ಶಿವರಾತ್ರೀಶ್ವರಸ್ವಾಮಿಗಳವರು ತಮ್ಮ ವೃದ್ಧಾಪ್ಯದಲ್ಲಿಯೂ ಸಹ ತಮ್ಮ ದೇಹಾಲಸ್ಯವನ್ನು ಲೆಕ್ಕಿಸದೆ, ತನುಮನ ಭಾವದಿಂದ ಶ್ರದ್ಧೆವಹಿಸಿ ಲೋಕಕಲ್ಯಾಣಕ್ಕಾಗಿ ಈಗ ಒಂದು ಕೋಟಿ ಮೂವತ್ತೈದು ಲಕ್ಷ ಈ ಮಹಾಮಂತ್ರವನ್ನು ಬರೆದಿರುವುದು ಮುಂದಿನ ಪೀಳಿಗೆಗೆ ಧರ್ಮಜಾಗ್ರತಿಯನ್ನುಂಟುಮಾಡುವ ಕೈದೀವಟಿಗೆಯಾಗಿದೆ. ಇವರಿಗೆ ಶ್ರೀ ಬಾಲಲೀಲಾಮಹಂತ ಶಿವಯೋಗೀಶ್ವರರು ಇನ್ನೂ ಹೆಚ್ಚಿನ ಆಯುರಾರೋಗ್ಯವನ್ನು ದಯಪಾಲಿಸಿ ಈ ಮಹಾತ್ಕಾರ್ಯವನ್ನು ಪೂರೈಸುವ ಆಧ್ಯಾತ್ಮಿಕ ಶಕ್ತಿಯನ್ನೀಯಲೆಂದು ಹಾರೈಸೋಣವಾಗಿದೆ.

ಗವಿಮಠ
ಕ್ಯಾಂಪ್–ಸುತ್ತೂರು 23-10-58 — ಮುಳಗುಂದ ತಾಲ್ಲೂಕ ಗದಗ

ಕಲ್‌ಬುರ್ಗಿ ಚವದಾಪುರಿ ಹಿರೇಮಠದ ಪಟ್ಟಾಧ್ಯಕ್ಷರು
ಶ್ರೀ ಶ್ರೀ ಶಾಂತವೀರ ಶಿವಾಚಾರ್ಯರು

ಓಂನಮಃಶಿವಾಯ ಶ್ರೀಮಜ್ಜಗದ್ಗುರು ಪಂಚಾಚಾರ್ಯ ಪ್ರಸೀದಂತು

ಶ್ರೀ ಶಿವಪಂಚಾಕ್ಷರೀ ಲೇಖನವು ಅತ್ಯಂತ ಅಪವರ್ಗಸಾಧನೆ. ಇದರಿಂಡ ಕಾಯಾ, ವಾಚಾ ಮನಸ್ಸಿನ ಸೇವೆಯು ಸಲ್ಲುತ್ತೆ. ಶ್ರೀ ಸುತ್ತೂರುಮಠದ ಶ್ರೀ ಶಿವರಾತ್ರೀಶ್ವರ ಶಿವಾಚಾರ್ಯರು ಸಮಸ್ತ ಗುರುಕುಲಕ್ಕೆ ಆದರ್ಶಪ್ರಾಯರೆಂದು ನಾನು ತ್ರಿಕರಣಶುದ್ಧಿಯಿಂದ ಒಪ್ಪಿ, ಆನಂದವು.

ಮಾರ್ಗಶಿರ 11–1875 ಶಕ ಶ್ರೀ ಶಾಂತವೀರ ಶಿವಾಚಾರ್ಯರು

ಗದಗದ ಜಗದ್ಗುರು ತೋಂಟದಾರ್ಯಮಠದ ಚರಮೂರ್ತಿಗಳು
ಶ್ರೀ ನಿ. ಪ್ರ. ರೇವಣಸಿದ್ಧಸ್ವಾಮಿಗಳವರು
ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗ ಸಮರ್ಥ

ಓಂನಮಃಶಿವಾಯ, ಓಂನಮಃಶಿವಾಯ, ಓಂನಮಃಶಿವಾಯ–ಶ್ರೀ ಸುತ್ತೂರು ಸಂಸ್ಥಾನಮಠದ ಶ್ರೀ ಜಗದ್ಗುರು ವೀರಸಿಂಹಾಸನಾಧೀಶ್ವರಾದ ಪಟ್ಟದ ಶ್ರೀ ಶಿವರಾತ್ರೀಶ್ವರಸ್ವಾಮಿಗಳವರು ಜಗತ್ ಕಲ್ಯಾಣಕ್ಕಾಗಿ ಇದುವರೆವಿಗೆ 85 ಲಕ್ಷ ಪ್ರಣವ ಮಂತ್ರವನ್ನು ಬರೆದೀತಕ್ಕದ್ದು ನೋಡಿ ಆನಂದ ಉಂಟಾಯಿತು. ಸದ್ರಿ ಮಹಾಸ್ವಾಮಿಗಳವರಿಗೆ 1 ಕೋಟಿ ಮಂತ್ರವನ್ನು ಬರೆಯತಕ್ಕ ಶಕ್ತಿಯನ್ನು ಅನಾದಿ ಸಿದ್ಧಲಿಂಗನು ವೀರಸಂಪತ್ತನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

4-10-1955 ಶ್ರೀ ರೇವಣ ಸಿದ್ಧಸ್ವಾಮಿಗಳು
ಗದಗ ತಾಲ್ಲೂಕು ಧಾರವಾಡ

ಗಿರಿಯಾಪುರದ ಶ್ರೀ ಶ್ರೀ ಸದಾಶಿವ ಶಿವಾಚಾರ್ಯರು
ಓಂನಮಃಶಿವಾಯ

ಈ ಪೀಠದ ಜಗದ್ಗುರುಗಳ ಅಪ್ಪಣೆಯಂತೆ ಇಂದು ಇಲ್ಲಿಗೆ ಬಂದು ದರ್ಶನ ಭಾಗ್ಯವನ್ನು ಪಡೆದೆನು. ಮಂತ್ರಮಯ ಮಹಾಪುಣ್ಯಮಯ, ಲಿಂಗಮಯ ಅಂಗವು ತುಂಬಾ ಸೂಕ್ಷ್ಮವಾಗಿರುವ ಕಾರಣ ಈ ಒಳಕ್ಕೆ ಬಕ್ಕುಮಿಕ್ಕಾಗಿ (ಮಿಗಿಲಾಗಿ) ಲಿಖಿಸುತ್ತಿದ್ದಂತೆ ಇನ್ನು ಮುಂದೆ ಲಿಖಿಸಲು ಸಾಧ್ಯವೇ ಇಲ್ಲವಾಗಿದೆ. ಪಂಡಿತರ ಸಲಹೆಯೂ ಈ ಬಗೆಯಲ್ಲಿರುವುದರಿಂದ ಇನ್ನು ಮುಂದೆ ತ್ರಿವಿಧ ಮತ್ತು ನವಲಿಂಗಗಳಿಗೆ ಸಂಪೂರ್ಣ ಸಮನ್ವಯವಾಗುವ 108 ಸಂಖ್ಯೆಗೆ ಮೀರದಂತೆ ಲಿಖಿಸುವದಾಗಬೇಕೆಂದು ತ್ರಿಕರಣಪೂರ್ವಕ ಪೂಜ್ಯಪಾದರಲ್ಲಿ ಈ ಮೂಲಕ ಬಿನ್ನವಿಸಿಕೊಂಡಿರುತ್ತೇನೆ.

ಅಂತರಂಗದ ಅನುಸಂಧಾನವು ಸದಾಕಾಲ ನಡೆದಿರುವುದರಿಂದಲೂ ಒಂದ

ಕೋಟಿ ಇಪ್ಪತ್ತೇಳು ಲಕ್ಷ ಸಂಖ್ಯೆಯಲ್ಲಿ ಅಮೃತಹಸ್ತಾಕ್ಷರಗಳಿಂದ ಲಿಖಿಸಿರುವುದರಿಂದಲೂ, ಸರ್ವಾಂಗವು ಶಿವಷಡಕ್ಷರ ರೂಪಾಗಿ ನಮ್ಮೆದುರಿಗೆ ನೆಲೆ ನಿಂತಿದೆ.

ಜಗದ್ಗುರುಗಳವರ ಷಡಕ್ಷರ ಮಂತ್ರಮಯ ಪ್ರಸಾದ ಅಂಗದರ್ಶನಕ್ಕೆ ಭಾಗಿಗಳಾದ ನಾವೇ ಧನ್ಯರು. ಸಾಧನೆ ಸಿದ್ಧಿಗೇರಿದೆ. ಮಂತ್ರವೇ ತಾವಾಗಿದ್ದೀರಿ, ಹೀಗಿರುವಾಗ ಮರಳಿ ಸಾಧನೆ ತಮ್ಮಿಂದಾಗಬೇಕಿಲ್ಲ. ಮಂತ್ರಮಯವೇ ತಾವಾಗಿ ಮಹಾದೇವನೇ ತಾವಾಗಿ ಈ ಯುಗದ ಜನತೆಯನ್ನು ಉದ್ಧರಿಸಲು ಅವತರಿಸಿದ ತಾವು ಈ ಮಂತ್ರಲೇಖನ ಯಜ್ಞದಿಂದ ವಿರಮಿಸಿ ವಿಶ್ರಾಂತಿಯನ್ನು ಪಡೆದು ಅಂದರೆ 108 ಕ್ಕೆ ನಿಲ್ಲಿಸಿ ಇನ್ನೂ ನಿಡುಗಾಲ, ತಮ್ಮ ಮಂತ್ರಮಯ ದಿವ್ಯಪ್ರಸಾದ, ಕಾಯದರ್ಶನ, ಸೌಭಾಗ್ಯವನ್ನು ಜಗದ ಜನಕ್ಕೆ ದಯಪಾಲಿಸಬೇಕೆಂದು ಅನನ್ಯಭಕ್ತಿಯಿಂದ ಪಾದಾರವಿಂದದಲ್ಲಿ ಪ್ರಾರ್ಥಿಸುತ್ತೇನೆ.

ಸುತ್ತೂರು — ಶ್ರೀ ಸದಾಶಿವ ಶಿವಾಚಾರ್ಯ

29-6-1958 — ಸಖರಾಯಪಟ್ಟಣ

॥ ಶ್ರೀ ಓಂಕಾರ ರೂಪಿಣೇನಮಃ ॥

ಓಂನಮಃಶಿವಾಯ, ಓಂನಮಃಶಿವಾಯ, ಓಂನಮಃಶಿವಾಯ, ಓಂನಮಃಶಿವಾಯ,
ಓಂನಮಃಶಿವಾಯ, ಓಂನಮಃಶಿವಾಯ.

ನಾನು ಆಕಸ್ಮಿತವಾಗಿ ಶ್ರೀ ಗೌರೀಶಂಕರಯಾತ್ರೆಯ ಉತ್ತರ ಹಿಂದೂಸ್ಥಾನ, ದಕ್ಷಿಣ ಹಿಂದೂಸ್ತಾನ, ಪ್ರಯಾಣ ಕೈಗೊಂಡು ಎರಡು ದಿನ ಮೈಸೂರಿನಲ್ಲಿ ಕ್ಯಾಂಪ್ ಇದ್ದಾಗ್ಯೆ ಬಹುದಿನಗಳಿಂದಲೂ ಸುತ್ತೂರ ಮಠದ ಶಿವರಾತ್ರೀಶ್ವರ ಮಹಾಸ್ವಾಮಿಗಳವರ ಮಹತ್ ಕಾರ್ಯದ ಬಗ್ಗೆ ಕೇಳುತ್ತಿದ್ದೆ. ಅದನ್ನು ಸಂದರ್ಶಿಸುವ ಭಾಗ್ಯ ಇವತ್ತು ದೊರೆಯಿತು. ಇವತ್ತು ಶ್ರೀ ಸ್ವಾಮಿಗಳವರು ಲೋಕಕಲ್ಯಾಣಕ್ಕಾಗಿ ವಿದ್ಯಾಭಿವೃದ್ಧಿಗಾಗಿ ಧರ್ಮದೇಳ್ಗೆಗಾಗಿ ಶ್ರಮಿಸುತ್ತಿರುವುದನ್ನು ಕಣ್ಣಾರೆಕಂಡು ಪರಮ ಸಂತೋಷವಾಯಿತು. ನಿಜವಾದ ಧರ್ಮಗುರುಗಳು ಮಾಡುವ ಕಾರ್ಯಕ್ಷೇತ್ರವಲ್ಲದೆ ಸಣ್ಣವರಾದ ಭಾವೀಮಹಾಸ್ವಾಮಿಗಳು ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರ ದಯಾದಾಕ್ಷಿಣ್ಯ, ಕಾರ್ಯಬಾಹುಲ್ಯ. ಸತ್ಕಾರ್ಯಗಳನ್ನು ಕಂಡು ಸಂತೋಷವಲ್ಲದೆ, ಮುಪ್ಪಿನವರಾದ ಜ್ಞಾನವೃದ್ಧರೂ, ಮಂತ್ರಮಯರೂ ಆದ ಶಿವರಾತ್ರಿಮಹಾಸ್ವಾಮಿಗಳವರು ಓಂನಮಃಶಿವಾಯ ಷಡಕ್ಷರೀಮಹಾಮಂತ್ರವನ್ನು ಒಂದುಕೋಟಿ ಐವತ್ತು ಲಕ್ಷವನ್ನು ಬರೆಯಲು ಶ್ರಮಿಸಿದ್ದು ಸ್ವತಃ ಸಂದರ್ಶನ ಕಂಡು ಮಹಾನಂದವಾಗುವದಲ್ಲದೆ, ಮಹಾಮಂತ್ರ ಬರೆಯುವುದರಿಂದ ತಮಗಾದ ನೇತ್ರಸ್ಫುರಣ ಸ್ವಸಬಂಧನ ಕಡಿಮೆಯಾದದ್ದು ಅನುಭವದಿಂದ ಕೇಳಿದ್ದು ಮಹಾನಂದವು. ಇದು ಅಲ್ಲದೆ ಇವರು ಪ್ರಕಟಿಸಿರುವ ಶಿವಮಂತ್ರಮಹಿಮೆ ಗ್ರಂಥವೂ ಇದೇ ಅರ್ಥವನ್ನು ಬೋಧಿಸುವುದು

"ಸರ್ವಕೋಟೇಷು ಮಂತ್ರೇಷು ಷಡಕ್ಷರ ಮಂತ್ರೋವಿರಾಜತೆ" ಎಂಬಂತೆ ಇಚ್ಛಿತ ವಲ್ಲದೆ ಆಗಬಾರದ್ದು ಆಗುವುದು. ಅದರಂತೆ ಇವರ ಮಹಾಮಂತ್ರ ಬರಹವು ಲೋಕ ಕಲ್ಯಾಣಕ್ಕಾಗಿ ಶ್ರಮಿಸುವದಲ್ಲದೆ, ಆಯುಷ್ಯ ಭಾಗ್ಯ ದೊರೆತು ಹೆಚ್ಚಾಗಿ ಸೇವೆ ದೊರೆಯುಲೆಂದು ಹಾಗೂ ಗುರುವರ್ಯನು ಸನ್ಮಂಗಳನ್ನೀಯಲೆಂದು ಹಾರೈಸುವೆವು.

ಸುತ್ತೂರು
29-1-1960

ಶ್ರೀ ನಿ.ಪ್ರ. ಕುಮಾರಸ್ವಾಮಿಗಳು
ಕಲ್ಮಠ ಸವದತ್ತಿ
ಶ್ರೀ ಶಿವಲಿಂಗ ಪಟ್ಟದೇವರು, ಕಲ್ಯಾಣಮಠ
ಜಮಖಂಡಿ

"ಮಂತ್ರಮಾತಾ ಷಡಕ್ಷರೀ" ಎಂಬ ಉಕ್ತಿಯಂತೆ ಸುತ್ತೂರು ವೀರಸಿಂಹಾಸ ನಾಧೀಶ್ವರ ಜಗದ್ಗುರು ಶ್ರೀ ಶಿವರಾತ್ರೆ ಮಹಾಸ್ವಾಮಿಗಳವರು ಸುಮಾರು ಎಂಟು ವರ್ಷಗಳಿಗಿಂತ ಹಿಂದಿನಿಂದಲೂ ಸಹ ಶಿವಷಡಕ್ಷರೀ ಮಹಾಮಂತ್ರ ಮತ್ತು ದೇವೀ ನವಾರ್ಣವ ಮಂತ್ರಲೇಖನ ಮಹಾಯಜ್ಞವನ್ನು ಕೈಗೊಂಡು ಒಂದು ಕೋಟಿ ಎಪ್ಪತ್ತು ಲಕ್ಷಕ್ಕೂ ಮಿಗಿಲು ಲೋಕಕಲ್ಯಾಣಾರ್ಥವಾಗಿ ಬರೆಯುತ್ತಿರುವುದು ಜಗತ್ತಿನ ಪುಣ್ಯ.

ಜೊತೆಗೆ ಮಹಾಸ್ವಾಮಿಯವರು ಶಿವಮಂತ್ರದ ಮೇಲೆ ಪ್ರಕಟಿಸಿರುವ ಪವಿತ್ರ ಗ್ರಂಥ ಅತ್ಯಂತ ಮಹತ್ವಪೂರ್ಣವಾಗಿದೆ. ಮಹಾಸ್ವಾಮಿಯವರು ಆರಂಭಿಸಿರುವ, ವಿದ್ಯಾನ್ನ ದಾಸೋಹಗಳಿಗೆ ಈ ಮಂತ್ರಯಜ್ಞವು ಕಲಶಪ್ರಾಯವಾಗಿದೆ. ಮಹಾ ಮಂತ್ರದ ಬಗ್ಗೆ ಶ್ರೀ ಸುತ್ತೂರು ಪೀಠದಿಂದ ಇಂಗ್ಲೀಷು, ಹಿಂದಿ ಮುಂತಾದ ಭಾಷೆ ಗಳಲ್ಲಿ ವಿಶ್ವದ ವಿದ್ವಾಂಸರಿಂದ ವಿಚಾರ ಪರಿಪ್ಲುತವಾದ ಪವಿತ್ರಗ್ರಂಥವೊಂದು ಪ್ರಕಟ ವಾಗಿ, ಷಡಕ್ಷರ ಮಹಾಮಂತ್ರಪ್ರಭಾವವು ವಿಶ್ವದಲ್ಲಿ ಪ್ರಕಟವಾಗಿ ಭಾರತೀಯ ಸಂಸ್ಕೃತಿಯ ಹೃದಯವಾದ ಮಂತ್ರಜ್ಯೋತಿಯು ಬೆಳಗುವಂತಾಗಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಇಂತಿ
ಮಹಾಸನ್ನಿಧಿಯ ಕೃಪಾಪಾತ್ರ
ಆಸ್ಥಾನ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ
ವೀರಶೈವಾಗಮ ಪ್ರೊಫೆಸರ್, ಶ್ರೀಮನ್ಮಹಾರಾಜ
ಸಂಸ್ಕೃತ ಕಾಲೇಜು, ಮೈಸೂರು

ಮುಕ್ಕಾಂ
ಶ್ರೀ ಬನಶಂಕರೀದೇವಾಲಯ
ತಾ|| 27-1-60
ಬೆಂಗಳೂರು

ಓಂ ನಮಃಶಿವಾಯ ಓಂ ನಮಃಶಿವಾಯ ಓಂ ನಮಃಶಿವಾಯ
ಓಂ ನಮಃಶಿವಾಯ ಓಂ ನಮಃಶಿವಾಯ
" ಅಘಟಿತಘಟಿತರು ವಿಪರೀತಚರಿತರು ಕೂಡಲಸಂಗನ ಶರಣರು "
ಶ್ರೀ ಜನಕರಾಜಾ ಮತ್ತು ಶ್ರೀ ಬಸವಣ್ಣನವರಂತೆ ವಿದೇಹ ಮುಕ್ತ

ಸ್ಥಿತಿಯಲ್ಲಿರುವ ಸುತ್ತೂರು ವೀರಸಿಂಹಾಸನಾಧೀಶ್ವರರಾದ–
ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರ
ದಿವ್ಯದರ್ಶನದಿಂದ ಮನಸ್ಸಿಗೆ ಅಪಾರ ಆನಂದ ಉಂಟಾಯಿತು.

ಶ್ರೀಗಳವರು ಇಲ್ಲಿಯವರೆಗೆ ಅತ್ಯಂತ ಪರಿಶ್ರಮದಿಂದ 13828000- ಒಂದು ಕೋಟಿ ಮೂವತ್ತೆಂಟು ಲಕ್ಷ ಇಪ್ಪತ್ತೆಂಟುಸಾವಿರ ಷಡಕ್ಷರೀ ಮಂತ್ರವನ್ನು ಬರೆದಿರುತ್ತಾರೆ.

ಶ್ರೀಗಳವರ ಜಮಾಖರ್ಚು ಷಡಕ್ಷರ ಮಹಾಮಂತ್ರದ ಜಮಾಖರ್ಚೇ ಹೊರ್ತು ಲೌಕಿಕ ಜಮಾಖರ್ಚಿಲ್ಲ.

ಲೋಕಕಲ್ಯಾಣದ ಅಭಿವೃದ್ಧಿಗಾಗಿ ಹಗಲಿರುಳು ವಿದ್ಯಾದಾನ ಮೊದಲಾದುವುಗಳಿಗಾಗಿ ತನುಮನಧನಗಳಿಂದ ದುಡಿಯುತ್ತಿರುವ ಮಹಾತ್ಮರೆಂದರೆ ಶ್ರೀ ಶಿವರಾತ್ರಿ ಮಹಾಸ್ವಾಮಿಗಳೇ ಹೀಗೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಇಂತಹ ಕಾರ್ಯಗಳನ್ನುಮಾಡಲು ಶ್ರೀಗಳವರಿಗೆ ದೇವರು ಆಯುರಾರೋಗ್ಯವನ್ನ ದಯಪಾಲಿಸಲೆಂದು ಆಶಿಸುತ್ತೇನೆ.

ತಾ|| 3-4-59 ಸೊಲ್ಲಾಪುರ

ಸಿದ್ಧರಾಮ ಸ್ವಾಮಿಗಳು ಕುಂಟೋಜಿಮಠ

ಬೆಂಗಳೂರು ಬನಶಂಕರಿ ದೇವಸ್ಥಾನದಲ್ಲಿ ಶ್ರೀ ಸುತ್ತೂ ವೀರ ಸಿಂಹಾಸನಾಧೀಶರ ಶ್ರೀ ಜಗದ್ಗುರು ಶ್ರೀ ಶಿವರಾತ್ರಿ ಸ್ವಾಮಿಗಳವರನ್ನು ತಾ||21-7-1961 ರಲ್ಲಿ ಸಂದರ್ಶಿದೆವು, ವಯೋವೃದ್ಧರಾಗಿಯೂ ಈ ವರೆವಿಗೆ ಒಂದು ಕೋಟಿ ಎಪ್ಪತ್ತೈದು ಲಕ್ಷ (17500000) ವಾಗಿರುವ ಶ್ರೀ ಮಹಾಮಂತ್ರವನ್ನು ತಮ್ಮ ಅಮೃತ ಹಸ್ತದಿಂದ ಈ ವರೆವಿಗೆ ಬರೆದು ಮಂತ್ರಮಯ ಶರೀರವಾಗಿರುವ ಶ್ರೀ ಮಹಾಸ್ವಾಮಿಗಳು ಎಲ್ಲ ಮಠಾಧಿಕಾರಿಗಳಿಗೂ, ಮಾರ್ಗದರ್ಶಕರಾಗಿರುತ್ತಾರೆ. ಈ ವಿಷಯದಲ್ಲಿ ಸರ್ವರೂ ಇವರು ಕೈಗೊಂಡಿರುವ ಮಹಾಮಂತ್ರಪಠಣ, ಮತ್ತು ಕೈಯಿಂದ ಬರೆಯುವ ಪದ್ಧತಿಯು ಜೀವರಾಶಿಗಳಲ್ಲಿ ಮುಕ್ತಿಯನ್ನುಂಟುಮಾಡುವ ಆದರ್ಶವನ್ನು ಎಲ್ಲರೂ ಕಲಿತುಕೊಂಡು ಮಹಾಸ್ವಾಮಿಗಳವರ ಅನುಗ್ರಹ ಪಡೆಯುವುದು ಪುಣ್ಯವಾಗಿರುತ್ತೆ.

ತಾ|| 21-7-1961 ಕುಂಭಕೋಣಂ ಪೆರಿಯಮಠಂ ಶ್ರೀ ಜಗದ್ಗುರು

ಬೆಂಗಳೂರು ಶಾಂತದೇವದೇಶಿಕೇಂದ್ರ ಮಹಾಸ್ವಾಮಿಗಳು

ಶ್ರೀ ಸುತ್ತೂರು ಸಂಸ್ಥಾನದ ಚಿಕ್ಕಜಗದ್ಗುರುಗಳು ಶ್ರೀ ಶಿವರಾತ್ರಿರಾಜೇಂದ್ರ ಸ್ವಾಮಿಗಳು, ಎರಡುಸಾವಿರದ ಐನೂರು ಜನ ವಿದ್ಯಾರ್ಥಿಗಳಿಗೆ ವಿದ್ಯಾದಾನ, ಅನ್ನದಾನ ನಡೆಸುವ ವಿಷಯ. ತುಂಬಾ ಸಂತೋಷವನ್ನುಂಟುಮಾಡಿದೆ. ಮಠಛಾತ್ರಾದಿ



ಜಗದ್ಗುರು ಶ್ರೀ ಶಿವರಾತ್ರಿರಾಜೇಂದ್ರಮಹಾಸ್ವಾಮಿಗಳವರು

ನಿಲಯವೆಂಬಂತೆ ಈ ಕಾಲದಲ್ಲಿ ತಮ್ಮ ಮಠದಿಂದ ವಿದ್ಯಾದಾನ ಅನ್ನದಾನ ನಡೆಸಿ ಎಲ್ಲರಿಗೂ ಮಾರ್ಗ ದರ್ಶಿಗಳಾಗಿರುವುದು ತುಂಬಾ ಶ್ಲಾಘ್ಯವಾಗಿದೆ. ಶ್ರೀ ಗುರುವು ಸವರಿ ಶ್ರೀಗಳವರಿಗೆ ಆಯುರಾರೋಗ್ಯ ಉಂಟು ಮಾಡಲೆಂದು ಅಪೇಕ್ಷಿಸುತ್ತೇವೆ.

ತಾ। 21-7-61

ಪೂಜ್ಯ ಶ್ರೀಗಳವರು ಹಿಂದೊಮ್ಮೆ ನಾನು ಬಂದಾಗ್ಯೆ ನಡೆಯಿಕೊಂಡು ಬರತ್ತಿರುವ ನಾಮ ಜಪಲೇಖನ ಕಾರ್ಯವನ್ನು ಅವಿಚ್ಛಿನ್ನವಾಗಿ ನಡೆಯಿಸಿಕೊಂಡು ಬರುತ್ತಿದ್ದು ನಾಮಮೂರ್ತಿಗಳೇ ತಾವೇ ಆಗಿ ನಿಂತಿದ್ದಾರೆ, ಅವರು ಈ ಕಾರ್ಯವನ್ನು ನಡೆಯಿಸುತ್ತಿರುವಂತಲೇ ಆ ಅವ್ಯಕ್ತದಲ್ಲಿ ಬೆರೆತು ಅಮರರಾಗತಕ್ಕವರು. ಇದಕ್ಕಿಂತಲೂ ಮಿಗಿಲಾದ ಕಾರ್ಯ ಇನ್ನು ಬೇರೇನಿದೆ ಜನತೆ ಶ್ರೀಗಳವರ ಹಾದಿಯಲ್ಲಿ ನಡೆಯಲು ಪ್ರಯತ್ನಿಸಿದರೆ ಲೋಕವಲ್ಲಿಯ ಅಂಧಕಾರವು ಉಳಿದೀತೆ?...................ಇದನ್ನು ಸಮಾಜವು ಅರಿಯಬೇಕು, ಅನುಸರಿಸಬೇಕು.

ಸೇವಕ
ಬಾ- ರಾಘವೇಂದ್ರ
ಅನಾಥ ಸೇವಾಶ್ರಮ ಮಲ್ಲಾಡಿಹಳ್ಳಿ

ತಾ।। 9-10-61

ಓಂನಮಃ ಶಿವಾಯ

ಶ್ರೀ ಸುತ್ತೂರು ವೀರ ಸಿಂಹಾಸನ ಮಠದ ಶ್ರೀ ಜಗದ್ಗುರು ಹಿರಿಯ ಶ್ರೀಸ್ವಾಮಿಗಳವರು ಷಡಕ್ಷರಿ ಮಹಾಮಂತ್ರದಲ್ಲಿ ತಲ್ಲೀನರಾಗಿದ್ದಾರೆಂದು ನಾನು ಈ ದಿವಸನೋಡಿ ಮಹಾನಂದವಾಯಿತು ಅವರು ಮಂತ್ರಯೋಗದಲ್ಲಿ ಬಾಹ್ಯ ವ್ಯವಹಾರದ ಅರುವಿಲ್ಲದೆ ಪೂರ್ಣಯೋಗಿಗಳಾಗಿದ್ದಾರೆ ಮಂತ್ರ ಶಕ್ತಿಯು ಅವರನ್ನು ಪೂರ್ಣಗೊಂಡಿದೆ ಆಧುನಿಕ ಪ್ರಪಂಚದಲ್ಲಿ ಇಂಥಾ ಮಹಾಮಹಿಮರ ಅವಶ್ಯಕತೆ ಇದೆ. ಕಿರಿಯ ಜಗದ್ಗುರು ಶ್ರೀಸ್ವಾಮಿಗಳವರು ಅಪಾರವಾದ ವಿದ್ಯಾದಾನವನ್ನು ಅನ್ನದಾನವನ್ನು ನೀಡಿ ಜನತೆಯ ಕಲ್ಯಾಣಕ್ಕಾಗಿ ಹಗಲು ರಾತ್ರಿ ಎನ್ನದೆ ತಪೋನಿಷ್ಠರಾಗಿದ್ದಾರೆ. ಉಭಯ ಸ್ವಾಮಿಗಳವರು ಮಾನವರ ಉದ್ಧಾರಕ್ಕೆ ಮಾರ್ಗದರ್ಶಕರಾಗದ್ದಾರೆ.

ಹಿರಿಯ ಶ್ರೀಗಳವರು ಮಹಾಮಂತ್ರವನ್ನು ತದೇಕ ಚಿತ್ತದಿಂದ ಬರೆಯುವ ಸಮಯದಲ್ಲಿ ನಾನು ಬಂದು ನೋಡಿದೆ. ಇಲ್ಲಿಯವರೆಗೆ ಒಂದುಕೋಟಿ ಎಂಭತ್ತುಲಕ್ಷ ಮಹಾಮಂತ್ರವನ್ನು ಬರೆದಿದ್ದಾರೆ. ಎರಡುಕೋಟಿಗೆ ಪೂರ್ಣವಾಗಿದೆ ಎಂದು ತಿಳಿದಿದ್ದೇನೆ. ಇವರು ಕೈಕೊಂಡ ಮಹಾಕಾರ್ಯಗಳು ಶುಕ್ಲ ಪಕ್ಷದ ಚಂದ್ರನಂತೆ ದಿನೇದಿನೆ ಅಭಿವೃದ್ಧಿ ಹೊಂದಿ ಮಾನವರ ಕಲ್ಯಾಣದತ್ತ ನಂದಾದೀಪವಾಗಿ ಬೆಳಗಲಿ. ಪೂರ್ವದ ಪೀಠದ ಶಿವರಾತ್ರೀಶ್ವರರು ಉಭಯ ಶ್ರೀ ಸ್ವಾಮಿಗಳವರಿಗೂ ಆಯುರಾರೋಗ್ಯಭಾಗ್ಯ ತಪಶ್ಶಕ್ತಿಯುನ್ನೀಯಲೆಂದು ಹಾರೈಸುತ್ತೇನೆ.

ಮೈಸೂರು — ಶ್ರೀ ಮ. ನಿ. ಚನ್ನವೀರ ದೇಶಿಕೇಂದ್ರ ಸ್ವಾಮಿಗಳು

ತಾ।।8–10–61 — ಬೆಟ್ಟದಪುರ ಮಠ ಪಿರಿಯಾಪಟ್ಟಣ ತಾಲ್ಲೂಕು

ಪರಮ ತಪೋನಿಧಿ ವಿಶ್ವಕಲ್ಯಾಣ ಯೋಗೀಶ್ವರ ಶ್ರೀ ಶ್ರೀ ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರೊಂದಿಗೆ ಈದಿನ ಮೈಸೂರಿನ ಮಹಾಮಠದಲ್ಲಿ ಶಿವಮಂತ್ರದ ಮಹೋನ್ನತ ಮಹಿಮೆಯ ಬಗ್ಗೆ ಸಂಭಾಷಿಸುವ ಅಮೃತ ಸನ್ನಿವೇಶವು ಸಂಪ್ರಾಪ್ತ ವಾಗಿತ್ತು. ಶ್ರೀ ಮಹಾಸ್ವಾಮಿಗಳವರು ಇಲ್ಲಿಯವರೆಗೆ ಒಂದುಕೋಟಿ ಎಂಭತ್ತೊಂದು ಲಕ್ಷ ಮಹಾಪಂಚಾಕ್ಷರ ಮಂತ್ರವನ್ನು ಸ್ವಹಸ್ತದಿಂದ ಲಿಖಿಸಿ ವಿಶ್ವಮಾನವತೆಗೆ ಒಂದು ಅಮೂಲ್ಯ ಶಾಂತಿಯನ್ನ ತರಲು ಸಾಧಿಸಿದ್ದಾರೆ.

ಪಂಚಾಕ್ಷರ ಮಹಾಮಂತ್ರಾನುಷ್ಠಾನವು ಅಂದರೆ ಜಪವು ಶ್ರೇಷ್ಠವಾದ ಅತ್ಯಂತ ಸಾತ್ವಿಕವಾದ, ಉಚ್ಛತಮವಾದ ಉಪಾಸನೆಯಾಗಿದೆ. ಜಪಕ್ಕಿಂತ ಲೇಖನ ಮೂಲ ಕವಾದ ಜಪವು ಶ್ರೇಷ್ಟವಾಗಿದೆ. ತನುಮನಗಳ ಅಂತರ್ಮುಖತೆಯೊಂದಿಗೆ ಪರಿಶ್ರಮ ದೊಂದಿಗೆ ಮಂತ್ರಲೇಖನವು ಧ್ಯಾನಕ್ಕೆ ಅನುಕೂಲವಾದುದಾಗಿ ಧ್ಯಾನದ ಸಾನಿಧ್ಯ ವನ್ನುಹೊಂದಿರುವುದು. ಇಂತಹ ಧ್ಯಾನ ಸಾಮಿಪ್ಯವಾದ ಲೇಖನವು ಅಸಾಧಾರಣವೂ, ಅದ ಕಾರ್ಯ. ಮಹಾಸ್ವಾಮಿಗಳವರಂಥ ಯೋಗಿಗಳು ಈ ಮಂತ್ರಯೋಗದಿಂದ ಇಂದು ವಿಕೃತವಾದ ಪ್ರಕೃತಿಯು ಪುನಃ ವಿಕೃತಿಯನ್ನು ಹೋಗಲಾಡಿಸಿಕೊಂಡು ಸುಕೃತಿಯನ್ನು ಹೊಂದಿ ಕಲ್ಯಾಣವನ್ನು ಸಾಧಿಸಲು ಸಮರ್ಥವಾಗುವುದರಲ್ಲಿ ಸಂದೇಹವಿಲ್ಲ.

ಭಾರತೀಯರೆಲ್ಲರೂ ಶ್ರೀಗಳವರಂತಹ ಯೋಗಿಗಳ ಅನುಕರಣೆಮಾಡಿ ಜಪಾ ನುಷ್ಠಾನದ ಮಹಾನ್ ಆಂಧೋಲನವನ್ನು ಮಾಡಿ ತಮ್ಮ ಆತ್ಮೋನ್ನತಿಯೊಂದಿಗೆ ವಿಶ್ವಕಲ್ಯಾಣವನ್ನು ಸಾಧಿಸುವಂತಾಗಲೆಂದು ಹಾರೈಸುತ್ತೇವೆ.

ತಾ|| 17-10-61 — ಉದ್ಗಿರಿ ಪೀಠಾಧೀಶ

ಮೈಸೂರು — ಗುರುಲಿಂಗ ಶಿವಾಚಾರ್ಯ ರಾಯಚೂರು ಸ್ವಾಮಿಗಳು

## ಶಿವ ಮಂತ್ರಯಜ್ಞ

ಶ್ರೀ ಸುತ್ತೂರು ವೀರ ಸಿಂಹಾಸನಾಧೀಶ್ವರರಾದ ಜಗದ್ಗುರು ಶಿವರಾತ್ರಿಸ್ವಾ ಮಿಗಳು ಲೋಕಕಲ್ಯಾಣಾರ್ಥವಾಗಿ ಬರೆಯುತ್ತಿರುವ ಶಿವಮಂತ್ರಗಳು ಈಗ ಒಂದು ಕೋಟಿ ತೊಂಭತ್ತೈದುಲಕ್ಷ ಷಡಕ್ಷರ ಮಹಾ ಮಂತ್ರಗಳನ್ನು ಮುಟ್ಟಿದೆ ಯೆಂಬುದನ್ನು ಕೇಳಿ ನನಗೆ ಪರಮಾಶ್ಚರ್ಯವಾಗಿದೆ. ಎಪ್ಪತ್ತೇಳನೆಯವರ್ಷದ ಹಿರಿಯ ವಯಸ್ಸಿನಲ್ಲಿ ಶ್ರೀ ಜಗದ್ಗುರುಗಳು ಸಾಧಿಸಿರುವ ಈಮಂತ್ರ ತಪಸ್ಸು ಇತರ ಮಠಾಧೀಶರಿಗೆ ಆದರ್ಶ ವಾಗಿದೆ. ಸಪ್ತಕೋಟಿ ಮಹಾಮಂತ್ರಗಳಿಗೆ ಮಾತೃಸ್ಥಾನವೆನಿಸಿದ ಶಿವಪಂಚಾಕ್ಷರಿಯ ನಿಷ್ಠೆಯಿಂದ ಪೂಜ್ಯ ಜಗದ್ಗುರುಗಳು ತಮ್ಮ ಜೀವನದಲ್ಲಿಯೇ ಹಲವು ಪವಾಡಗಳನ್ನು ನಡೆಸಿರುತ್ತಾರೆ. ಸಮಾಜದ ವಿದ್ಯಾಭಿವೃದ್ಧಿಗಾಗಿ ಧರ್ಮದ ಅಭಿವೃದ್ಧಿಗಾಗಿ ಶ್ರೀಜಗ ದ್ಗುರುಗಳು ಕೈಗೊಂಡಿರುವ ಮಹಾಕಾರ್ಯಗಳು ಅಸಾಧ್ಯವಾಗಿವೆ. ಈ ಬೃಹತ್ಸಂಸಾರ

ದಲ್ಲಿ ಹೆಚ್ಚು ಕಾಲಾವಕಾಶದಲ್ಲಿ ಈ ಪಂಚಾಕ್ಷರೀ ಮಂತ್ರಗಳನ್ನು ಲಿಖಿಸುತ್ತಿರುವುದು ಶ್ರೀಜಗದ್ಗುರುಗಳ ಆತ್ಮಶಕ್ತಿಯ ನಿದರ್ಶನವೆನ್ನಬಹುದು. ಲೋಕಶಾಂತಿಗಾಗಿ ಭಾರತದ ಕಲ್ಯಾಣಕ್ಕಾಗಿ ಶ್ರೀ ಜಗದ್ಗುರುಗಳ ಈ ಮಂತ್ರಯಜ್ಞವು ಮುಂದುವರಿಯಲಿ ಎಂಬುದು ನನ್ನ ಹೃದ್ಗತ.

ಬೆಂಗಳೂರು
ತಾ॥ 18-6-1962

ಬಿ. ಶಿವಮೂರ್ತಿಶಾಸ್ತ್ರಿ
ಅಧ್ಯಕ್ಷ, ಕನ್ನಡ ಸಾಹಿತ್ಯ ಪರಿಷತ್ತು

ಗದಗದ ಸಾವಧಾನ ಪತ್ರಿಕಾ ಸಂಪಾದಕರು ಪಂಡಿತ ನಾಗಭೂಷಣ ಶಾಸ್ತ್ರಿಗಳು

ಓಂಶಿವಾಯನಮಃ ಓಂಶಿವಾಯನಮಃ ಓಂಶಿವಾಯನಮಃ

ಸಪ್ತ ಕೋಟಿ ಮಂತ್ರಗಳಲ್ಲಿ ಶ್ರೇಷ್ಠವಾದ ಶಿವಮಂತ್ರವನ್ನು ಮನನ ನಿಧಿಧ್ಯಾಸನ ಪೂರ್ವಕವಾಗಿ ಲೋಕ ಕಲ್ಯಾಣೈಕ ದೃಷ್ಟಿಯಿಂದ ಬರೆಯಲು ಪ್ರಾರಂಭಿಸಿ ಇಂದಿಗೆ 9145104 ಪ್ರಣವಗಳನ್ನು ಬರೆದ ಶ್ರೀ ಷ. ಬ್ರ. ಜಗದ್ಗುರು ಶಿವರಾತ್ರಿ ಮಹಾಸ್ವಾಮಿಗಳು ಸುತ್ತೂರು ಅವರ ದರ್ಶನದಿಂದ ಅಭೂತ ಪೂರ್ವ ಸಂತೋಷವನ್ನು ಹೊಂದಿದ್ದೆ.

ಶ್ರೀಜಗದ್ಗುರುಗಳಲ್ಲಿ ವ್ಯಾವಹಾರಿಕ ಪಾರಮಾರ್ಥಿಕ ಜ್ಞಾನಗಳ ಸುಂದರ ಸಮನ್ವಯವನ್ನು ಕಂಡಾಗ ಅವರ ತುಂಬ ಜೀವನದ ಮಹಾದೈವೀ ಭಾವನೆಯು ಹೃದಯಂತರಾಳದಲ್ಲಿ ಸದ್ಭಕ್ತಿಯ ಉನ್ಮೇಷಕ್ಕೆ ಪ್ರೇರಣೆ ದೊರೆಯುವುದು. ನಮ್ಮ ಕರ್ನಾಟಕದ ಪ್ರತಿಯೊಬ್ಬ ಮಠಾಧಿಕಾರಿಯು ಸುತ್ತೂರು ಜಗದ್ಗುರುಗಳ ಆದರ್ಶವನ್ನು ತಮ್ಮ ಮುಂದಿಟ್ಟುಕೊಂಡು ನಡೆದರೆ ಕರ್ನಾಟಕದ ಜನತೆಯಲ್ಲಿ ದೈವೀಭಾವವು ಜಾಗೃತಿ ಹೊಂದವದೆಂದು ನನ್ನ ಹೃದಯದ ಕೂಗು. ಶ್ರೀಜಗದ್ಗುರು ಶಿವರಾತ್ರಿ ಮಹಾಸ್ವಾಮಿಗಳು ಕೈಕೊಂಡ ಶಿವಮಂತ್ರಲೇಖನ ಮಹಾಕಾರ್ಯದಿಂದ ಕೇವಲ ನಮ್ಮ ಕರ್ನಾಟಕ ಪ್ರಾಂತವಲ್ಲದೆ ಇಡೀಭಾರತಕ್ಕೆ ಪರಮ ಕಲ್ಯಾಣ ಲಭಿಸುವುದು.

ಗದಗ
ತಾ॥ 20-1-1956

ತಮ್ಮ ಅಡಿಯಾಳು
ನಾಗಭೂಷಣ ಶಾಸ್ತ್ರಿ

ಕಳೆದ ಎಪ್ಪತ್ತೈದು ವರ್ಷಗಳಿಂದ ವೀರಶೈವ ಸಮಾಜೋದ್ಧಾರಣಕ್ಕಾಗಿ ಅನೇಕ ಮಹನೀಯರು ಸ್ವಾರ್ಥತ್ಯಾಗ ಪೂರ್ವಕ ಮಾಡುತ್ತಿರುವ ಕಾರ್ಯಗಳನ್ನು ನೋಡಿದರೆ ಅತ್ಯಂತ ಆನಂದವಾಗುವುದರಲ್ಲಿ ತಿಲ ಮಾತ್ರ ಸಂಶಯವಿಲ್ಲ. ಸುತ್ತೂರು ವೀರಸಿಂಹಾಸನಾಧೀಶ್ವರರಾದ ಶ್ರೀ ಜಗದ್ಗುರು ಶಿವರಾತ್ರೀಶ್ವರ ಮಹಾಸ್ವಾಮಿಗಳು ಮಾಡುತ್ತಿರುವ ಅಂತರಂಗ ಬಹಿರಂಗ ಕಾರ್ಯಗಳು ಅಂದರೆ ಲೌಕಿಕ ಮತ್ತು ಪಾರಮಾರ್ಥಿಕ ಎರಡನ್ನೂ ಸಾಗಿಸಿಕೊಂಡು ಹೋಗುತ್ತಿರುವುದು ಹೆಮ್ಮೆಯವಿಷಯ. ದೊಡ್ಡ ಮಹಾಸ್ವಾಮಿಗಳು, ಈಗ ಒಂದುಕೋಟಿ ಎಂಭತ್ತೊಂದು ಲಕ್ಷ ಶಿವ ಪಂಚಾಕ್ಷರಿಯನ್ನು ಬರೆದಿರುವುದನ್ನು ನೋಡಿದರೆ ಯಾರಿಗೆ ತಾನೇ ಪರಮಾಶ್ಚರ್ಯವಾಗಲಿಕ್ಕಿಲ್ಲ.

ಕಿರಿಯ ಶ್ರೀ ಸ್ವಾಮಿಗಳವರು ಅನೇಕ ವಿದ್ಯಾಸಂಸ್ಥೆಗಳನ್ನು ನಡೆಸುತ್ತಾ ಸಹ ಸ್ರಾರು ವಿದ್ಯಾರ್ಥಿಗಳಿಗೆ ಅನ್ನದಾನ ವಿದ್ಯಾದಾನ ಮಾಡುತ್ತಿರುವುದನ್ನು ನೋಡಿದರೆ ಹಿಂದಿನ ನಮ್ಮ ಗುರುಕುಲಗಳ ನೆನಪು ಆಗದಿರಲಾರದು. ಈ ಉಭಯ ಮಹಾಸ್ವಾಮಿ ಗಳವರು ವೀರಶೈವ ಸಮಾಜಕ್ಕೆ ಮಾಡುತ್ತಿರುವ ಅಪಾರವಾದ ಉಪಕಾರಕ್ಕೆ ಸಮಾ ಜನೇ ಋಣಿಯಾಗಿರುತ್ತದೆ. ದೇವರ ದೇವನಾದ ಮಹಾದೇವನು ಈ ಉಭಯ ಮಹಾಸ್ವಾಮಿಗಳವರಿಂದ ಸಮಾಜಕ್ಕೆ ಹೆಚ್ಚಿನ ಲಾಭವಾಗುವಂತೆ ಮಾಡುವ ಸಮಯ ಕೊಡಲೆಂದು ಹಾರೈಸುತ್ತೇನೆ.

ತಾ.॥ 23-10-1961 ವ್ಯಾಕರಣ ತೀರ್ಥ ವಿದ್ಯಾಲಂಕಾರ ಚಂದ್ರಶೇಖರ
ಮೈಸೂರು ಶಾಸ್ತ್ರಿ, ಪ್ರಿನ್ಸಿಪಾಲ್, ಸಂಸ್ಕೃತ ಕಾಲೇಜು

ಶ್ರೀ

ನವಿಲುಗುಂದ ಗವಿಮಠದಲ್ಲಿ ಶ್ರೀಸುತ್ತೂರು ಶ್ರೀಜಗದ್ಗುರು ಶಿವರಾತ್ರಿ ಮಹಾ ಸ್ವಾಮಿಗಳವರ ದರ್ಶನವಾಯಿತು. ಮುಖ್ಯವಾದ ವಿಷಯವೆಂದರೆ ಎರಡು ಕೋಟಿ ಗಿಂತಲೂ ಹೆಚ್ಚಾಗಿ ಶ್ರೀ ಶಿವಮಹಾಮಂತ್ರವನ್ನು ಲಿಖಿಸಿದ್ದಾರೆ. ಮಂತ್ರಲೇಖನದಿಂದ ಶ್ರೀ ಜಗದ್ಗುರುಗಳ ಇಂದ್ರಿಯಗಳು ಬುದ್ಧಿ, ಮನಭಾವ ಯಲ್ಲವೂ ಮಂತ್ರವಾಗಿದೆ. ಆದುದರಿಂದ ಶ್ರೀಗಳು ಮಂತ್ರಮಯ ಶರೀರಿಗಳಾಗಿದ್ದಾರೆ. ಮಂತ್ರ ಸ್ವರೂಪಿಗಳಾಗಿ ದ್ದಾರೆ. ಪ್ರಪಂಚದಲ್ಲಿ ಇದಕ್ಕಿಂತಲೂ ಹೆಚ್ಚಿನ ಸಾಧನೆಯು ಮತ್ತೊಂದಿಲ್ಲಾ.

ತಾ॥17-11-1961 ಶ್ರೀ. ಮ. ನಿ. ಪ್ರ. ಪ್ರಭುಸ್ವಾಮಿಗಳ
ಹೊಸಹಳ್ಳಿ ಬೂದೀಸ್ವಾಮಿ ಸಂಸ್ಥಾನಮಠ

ಶ್ರೀ ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರು ಲೋಕ ಕಲ್ಯಾಣಕ್ಕಾಗಿ ಮಾಡುತ್ತಿರುವ ಕಾರ್ಯ ಸ್ತುತ್ಯಾರ್ಹವಾದುದು. ಈ ಸಾರಿ ಈ ಜಯಂತ್ಯುತ್ಸವದಲ್ಲಿ ನಾನು ಭಾಗವಹಿಸಿ ಆ ಕಾರ್ಯದ ಮಹತ್ವವನ್ನು ಕಣ್ಣಾರೆ ನೋಡಿದೆ. ಇವರು ನಡೆಸುತ್ತಿರುವ ಶಾಲೆಗಳು ಮತ್ತು ವಿದ್ಯಾರ್ಥಿನಿಲಯಗಳು ಇತರರಿಗೆ ಮೇಲ್ಪಂಕ್ತಿಯಾಗಿವೆ. ವರ್ಗಭೇದ ವಿಲ್ಲದೆ ಎಲ್ಲರಿಗೂ ಮಾರ್ಗದರ್ಶನವಾಗುತ್ತಿದೆ. ಈ ಮಹತ್ಕಾರ್ಯದಲ್ಲಿ ಶ್ರೀ ಕಿರಿಯ ಸ್ವಾಮಿಗಳವರು ಅವಿಶ್ರಾಂತವಾಗಿ ಶ್ರಮಿಸುತ್ತಿದ್ದಾರೆ. ಈ ಮಠಕ್ಕೂ ಮತ್ತು ಶ್ರೀ ಶ್ರೀ ಗಳವರಿಗೆ ಜಗದೀಶ್ವರನು ಮಂಗಳವನ್ನೀಯಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು ಟಿ. ಮರಿಯಪ್ಪ
ತಾ॥ 6-12-59 (ಹಣಕಾಸಿನ ಸಚಿವ ಮೈಸೂರು)

೨೯

ಮೈಸೂರು ಶ್ರೀಮನ್ಮಹಾರಾಜಾಸ್ಥಾನ ಮಹಾ ವಿದ್ವಾನ್ ಪಂಡಿತರತ್ನಂ,
ಬೆಂಗಳೂರು ಶ್ರೀ ಜಯಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ಶಕ್ತಿ ವಿಶಿಷ್ಟಾದ್ವೈತ
ಪ್ರೊಫೆಸರ್ ಶ್ರೀಮರ್ಾ ಶ್ರೀ ಸಿ. ಗುರುಶಾಂತ ಶಾಸ್ತ್ರಿಗಳವರು

ಓಂ ನಮಃಶಿವಾಯ

ಮನನಾತ್ ತ್ರಾಯತೇ ಯಸ್ಮಾ ತ್ತನ್ಮಾನ್ತ್ರಂ ತ್ರೋಯ ಮೀರಿತಃ, ವಾಚ ವಾಚಕ ರೂಪೇಣ, ದ್ವಿಧಾ ಮಂತ್ರಃ ಪ್ರಕೀರ್ತಿತಃ, ವಾಚತೋರ್ವರ್ಣ ರೂಪಸ್ಯಾತ್ ವಾಚ್ಯಶ್ಚ ಪರಮಶ್ಶಿವಃ । ಮನು ದೇವತಯೋರೈಕ್ಯಂ, ತಸ್ಮದಾಹುರ್ಮ ಹರ್ಷಯಃ॥

ಶ್ರೀ ಗುರೂಪದಿಷ್ಟವಾದ ಮಂತ್ರವನ್ನು ಬಾರಿ ಬಾರಿಗೂ ಸ್ಮರಿಸುತ್ತಾ ಯುಕ್ತಿ ಪ್ರತ್ಯುಕ್ತಿಗಳಿಂದ ಧೃಡಪಡಿಸುವುದಕ್ಕೆ ಮನನವೆಂದು ಹೇಳುತ್ತಾರೆ. ಇಂಥ ಮನನ ದಿಂದ ರಕ್ಷಿಸಲು ಯೋಗ್ಯವಾಗಿರುವುದರಿಂದ ಮಂತ್ರವೆನಿಸಿಕೊಳ್ಳುತ್ತದೆ. ಇಂಥಾ ರಕ್ಷ ಣೀಯವಾದ ಮಂತ್ರವು ವಾಚಕ (ಶಬ್ದ) ವೆಂತಲೂ, ವಾಚ್ಯ (ಅರ್ಥ) ವೆಂತಲೂ, ಎರಡು ವಿಧವು, ಇವುಗಳಲ್ಲಿ ಓಂ ನಮಃಶಿವಾಯ ಎಂದು ಅಕ್ಷರ ಮಯವಾದುದೇ ವಾಚಕವೆನಿಸುತ್ತದೆ. ಅರ್ಥ (ಶಿವ) ರೂಪವಾದುದೇ ವಾಚ್ಯಮಂತ್ರವೆನಿಸುತ್ತದೆ. ಮಹರ್ಷಿಗಳು ಇಂಥ ವಾಚ್ಯಕ್ಕೂ ವಾಚಕಕ್ಕೂ ಏಕತ್ವವನ್ನು ಒಪ್ಪಿರುತ್ತಾರೆ. ಮತ್ತು ನಮಃ ಪೀಠ ಮಿತಿ ಪ್ರೋಕ್ತಂ ಶಿಕಾರಂ ಮಧ್ಯ ಮೀರಿತಂ। ವಾಕಾರಂ ಗೋಮುಖಂ ವೃತ್ತಂ। ಯಕಾರಂ ಗೋಳಕಂ ಸ್ಮೃತಂ ಓಂಕಾರಲಿಂಗ ಮಾಖ್ಯಾತಂ, ಷಡ್ವರ್ಣಂ ಲಿಂಗಮುಚ್ಯತೇ॥

ಜನನ ಮರಣರೂಪವಾದ ಸಂಸಾರವೆಂಬ ಮಹಾಸಮುದ್ರವನ್ನು ದಾಂಟಿಸಲು, ಹಡಗಿನೋಪಾದಿಯಲ್ಲಿರುವ ಸಪ್ತಕೋಟಿ ಮಹಾಮಂತ್ರಗಳಲ್ಲಿ ಪ್ರಧಾನವಾಗಿರುವ ಈ ಪಂಚಾಕ್ಷರೀಮಹಾಮಂತ್ರ ನಿಖಿಲ ಜಗದಾಧಾರಭೂತವಾದ ಪರಶಿವಲಿಂಗಸ್ವರೂಪವೇ ಆಗಿರುತ್ತದೆ. ಹೇಗೆಂದರೆ ಈ ಮಹಾ ಜಪದಲ್ಲಿರುವ ನಮಃ ಎರಡಕ್ಷರಂಗಳೇ ಶಿವ ಲಿಂಗದ ಪೀಠವಾಗಿಯೂ ಶ್ರೀ ಎಂಬ ಅಕ್ಷರವೇ ಮಧ್ಯಭಾಗವಾಗಿಯೂ ವಾ ಎಂಬ ಅಕ್ಷರವೇ ಆ ಲಿಂಗದ ಗೋಮುಖ ವೃತ್ತಗಳಾಗಿಯೂ ಯ ಎಂಬ ಅಕ್ಷರವೇ ಗೋಲಕ ವಾಗಿಯೂ ಮಂತ್ರ ಶಿರಸ್ಸೆನಿಸಿದ ಓಂಕಾರವೇ ಲಿಂಗವಾಗಿಯೂ ಇರುತ್ತವೆ ಯೆಂದು ಶಿವಾಗಮಗಳು ಘೋಷಿಸುತ್ತಲಿವೆ. ಆದುದರಿಂದ ಸಾಕ್ಷಾತ್ ಪರಶಿವಬ್ರಹ್ಮವೆನಿಸಿದ ಈ ಮಂತ್ರವನ್ನು ಹೃತ್ಪುಂಡರೀಕ ಮಧ್ಯದಲ್ಲಿ ಮನಸಾಧ್ಯಾನಿಸುತ್ತಲಿರುವುದು ವಾಚಾ ವೈಖರೀ ರೂಪದಿಂದ ಉಚ್ಚರಿಸುತ್ತಿರುವುದು ಹಸ್ತದಿಂದ ಗ್ರಂಥರೂಪದಲ್ಲಿ ರೇಖಾಕಾರ ವಾಗಿ ಬರೆಯುತ್ತಿರುವುದು ಹೀಗೆ ಮನಸ್ಸಿನಿಂದಲೂ, ಮಾತಿನಿಂದಲೂ, ಹಸ್ತಕ್ರಿಯೆ ಯಿಂದಲೂ, ಈ ಪಂಚಾಕ್ಷರೀ ಮಂತ್ರವನ್ನು ವಾಕ್ ಮನಸ್ಸು ವಾಣಿರೂಪವಾದ ತ್ರಿಕ ರಣವಲ್ಲಿ ಏಕಾಕಾರವಮಾಡಿ ಜಪಿಸುತ್ತಲಿರುವುದು ಪ್ರಾಚೀನ ಮಹಾತಪಸ್ವಿಗಳ ಲಕ್ಷಣ

ವಾಗಿವೆ. ಹೀಗೆ ಕಾಯಕ, ವಾಚಕ, ಮಾನಸಿಕಗಳಾದ ಜಪಲಕ್ಷಣಗಳಲ್ಲಿ ವಾಚಕ
ಜಪವಾಗಲಿ, ಮಾನಸಿಕ ಜಪವಾಗಲಿ, ಇವೆರಡೂ ಕೇವಲ ಆತ್ಮೋದ್ಧಾರ ಸಾಧನಗ
ಳಾಗಿರುತ್ತವೆ. ಕಾಯಕ ರೂಪವಾದ ಅಂದರೆ ಲಿಪಿಯ ಆಕಾರವನ್ನು ಹೊಂದಿದ
ಮಂತ್ರ ಜಪವಾದರೋ ಸಕಲ ಜನ ಚಕ್ಷುರಿಂದ್ರಿಯ ಗೋಚರವಾಗುವ ಮೂಲಕ
ಸಕಲ ಸಚ್ಛಿಷ್ಯ ಮಂಡಲಿಗೂ ಶಿವಾನಂದ, ಶಿವಭಕ್ತಿ ಸುಧಾ ಸ್ವಾದನವನ್ನು ಮಾಡಿಸಿ
ಅನಾಯಾಸವಾಗಿ ಮೃತ್ಯು ಮುಖದಲ್ಲಿದ್ದ ಮರ್ತ್ಯರನ್ನು ಅಮರ್ತ್ಯರನ್ನಾಗಿ ಮಾಡುವುದ
ರಿಂದ ಲಿಪಿಯ ಆಕಾರವನ್ನು ಹೊಂದಿದ ಮಂತ್ರ ಜಪವೇ ಶೀಘ್ರವಾಗಿ ಸುಖಾಮೃತ
ವನ್ನು ಪಾನಮಾಡಿಸುತ್ತದೆ.

ಪ್ರಕೃತದಲ್ಲಿ ಸುತ್ತೂರು ಶ್ರೀ ವೀರಸಿಂಹಾಸನಾ ಮಠಾಧೀಶ್ವರರಾದ ಬ್ರ. ಶ್ರೀ.
ಪ್ರ. ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳು ನಿಖಿಲ ಶಿವಭಕ್ತಶ್ರೇಣಿಗೆ ಸಂಜೀವಿನಿ
ಸ್ವರೂಪಿಣಿ ಎನಿಸಿದ ದಿವ್ಯ ಪಂಚಾಕ್ಷರೀ ಮಹಾಮಂತ್ರವನ್ನು ವಿದ್ಯುಕ್ತವಾಗಿ

"ಆತ್ಮಾವಾ ರೇದ್ರಷ್ಟವ್ಯಃ ಶ್ರೋತವ್ಯೋ, ಮಂತ್ರವ್ಯೋ ನಿಧಿಧ್ಯಾಸಿತವ್ಯಃ" ಎಂಬ
ಉಪನಿಷದ್ವಾಕ್ಯಾನುಸಾರವಾಗಿ ಬಹುಕಾಲದಿಂದ ಶ್ರವಣ ಮನನ ನಿಧಿಧ್ಯಾಸನಾದಿ
ಗಳಿಂದ ಮಂತ್ರ ವಾಚ್ಯನಾದ ಪರಶಿವ ಬ್ರಹ್ಮವನ್ನು ದೂರಾಕಾಶದಲ್ಲಿ ಸಾಕ್ಷಾತ್ಕರಿಸಿ
ಲೋಕೋದ್ಧಾರಕ್ಕಾಗಿ ತಮ್ಮ ತಪಶ್ಶಕ್ತಿಯಿಂದ ಶಿವಕಲಾ ಸಮಾವಿಷ್ಟವಾದ ಶಿವಮಹಾ
ಪಂಚಾಕ್ಷರೀ ಮಹಾ ಮಂತ್ರವನ್ನು ತದೇಕಾನುಸಂಧಾನದಿಂದ ಲಿಪಿಯ ಆಕಾರವಾಗಿ
ಮೂರ್ತೀಭವಿಸುವಂತೆ ಮಾಡಬೇಕೆಂದು ಸಂಕಲ್ಪಿಸಿ ಇತರ ವ್ಯಾಪಾರ ಶೂನ್ಯರಾಗಿ
ಪ್ರಣವ ರೂಪಿತರಾಗಿ ಮಹಾಮಂತ್ರವನ್ನು ಬರೆಯುತ್ತಿರುವುದೇ ಶ್ರೀ ಮಹಾಸ್ವಾಮಿ
ಗಳವರ ದಿನಚರ್ಯದ ಮಹಾ ತಪಸ್ಸಾಗಿದೆ. ನಾನು ಕರ್ಣಾಕರ್ಣಿಕೆಯಿಂದ ಜಗ
ತ್ಕಲ್ಯಾಣಾರ್ಥವಾಗಿ ಬರೆಯಲ್ಪಡುತ್ತಿರುವ ಈ ಸುವಾರ್ತೆಯನ್ನು ಕೇಳಿ ಶ್ರೀಗಳವರ
ದರ್ಶನೋತ್ಸುಕನಾಗಿ ಇದೇ ತಾ॥ 31-10-1955ರಲ್ಲಿ ಸೋಮವಾರ ಸುತ್ತೂರಿಗೆ
ಹೋಗಿದ್ದೆನು. ಶ್ರೀಗಳವರು ಲಿಪ್ಯಾಕಾರವಾದ ಮಂತ್ರ ಲೇಖನ ರೂಪವಾದ ತಪ
ಸ್ಸಿನಲ್ಲಿ ವಿಲೀನರಾಗಿದ್ದರು. ಬಹುಕಾಲದಿಂದ ಮಾಡಿದ ಅಮೂರ್ತವಾದ ತಪಸ್ಸೇ ಜಗ
ದ್ಧಿತಾರ್ಥವಾಗಿ ಈ ಲಿಪಿಯ ಆಕಾರದಿಂದ ಪರಿಣಮಿಸಿದೆಯೋ ಎಂಬುವಂತೆ ಈ
ಮಂತ್ರಾವಳಿಯು ನನ್ನನ್ನು ಪರವಶಗೊಳಿಸಿತು. ಶ್ರೀಗಳವರ ಹಸ್ತಕಮಲದ್ವಾರ ಹೊ
ಹೊಮ್ಮಿದ ಮಹಾಮಂತ್ರಾವಳಿಯು ಅರಿಸಿನೆಗೆದು ಸಂಗೊಳಿಸಿದ ಆಣೆ ಮುತ್ತುಗಳಂತೆ
ಶೋಭಿಸುತ್ತಲಿತ್ತು. ಈ ದೃಶ್ಯವು ಎಂಥ ನಾಸ್ತಿಕರನ್ನೂ ಆಸ್ತಿಕರನ್ನಾಗಿ ಮಾಡುವ
ಪ್ರಭಾವವುಳ್ಳದ್ದಲ್ಲದೆ ಪಂಡಿತ ಪಾಮರರಿಗೆಲ್ಲಾ ಹೃದಯಾಕರ್ಷಕವಾಗಿದ್ದರು ಈ ಲಿಪ್ಯಾ
ಕಾರವಾದ ಜಪವನ್ನು ನೋಡಿದ ನಾವೇ ಕೃತಕೃತ್ಯರು

ಮಹಾಸ್ವಾಮಿಗಳು ಅನೇಕವರ್ಷಗಳಿಂದ ಶಿವಾಕಾರವಾದ ಚಿತ್ತವುಳ್ಳವರಾಗಿ
ಉಲ್ಲೇಖಿಸಿರುವ, ಈಮಹಾಮಂತ್ರಾವಳಿಯ ಹನ್ನೆರಡು ಪುಸ್ತಕಗಳನ್ನು ಅವಲೋಕಿಸಿ

ದೆನು. ಮುದ್ದು ಮುದ್ದಾದ ಅಕ್ಷರಾವಳಿಯನ್ನು ಎಷ್ಟು ನೋಡಿದರು ನನಗೆ ಅಲಂಬುದ್ಧಿಯುಂಟಾಗದೆ ಪುನಃ ಪುನಃ ನೋಡಬೇಕೆಂಬ ಕುತೂಹಲವು ಹೆಚ್ಚುತ್ತಲೇ ಇತ್ತು. ಸಧ್ಯಃ ಎಂಭತ್ತಾರು ಲಕ್ಷದವರೆವಿಗೂ ಪ್ರಣವಸಹಿತ ಪಂಚಾಕ್ಷರೀ ಮಂತ್ರದ ಪರಿಗಣನೆಯಲ್ಲಿವೆ. ಒಂದುಕೋಟಿ ಸಂಖ್ಯೆಯು ಪೂರ್ಣವಾದಮೇಲೆ ಉದ್ವಾಸನ ಕಾರ್ಯವು ನಡೆಯಬಹುದೆಂದು ಶ್ರೀಗಳು ಅಪ್ಪಣೆಯನ್ನಿತ್ತರು. ಮತ್ತು ಇದರ ಸಂಗಡ ಚಿನ್ಮಯನಾದ ಪರಮಾತ್ಮನ ಪರಾಶಕ್ತಿಯೆನಿಸಿದ ಶ್ರೀ ದೇವಿಯ ನಿರ್ವಾಣಲಿಪಿಯ ಜಪವನ್ನು ಒಂದುಲಕ್ಷದವರೆವಿಗೂ ಬರೆದಿರುತ್ತಾರೆ.

ಶಿವಪೂಜಾ ದುರಂಧರರಾದ ಶ್ರೀಮನ್ಮಹಾರಾಜಾ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರರವರು ಅತ್ಯಂತ ಸುಂದರವೂ ಹೃದಯಾಕರ್ಷಕವೂ ಆದ ದೀರ್ಘವಾಣೀಲಿಪಿ ಜಪವನ್ನು ಪರಾಮರ್ಶಿಸಿ ಆನಂದ ಸಮುದ್ರದಲ್ಲಿ ಲೋಲಾಡುತ್ತಾ ತಾವೂ ಸಹ ಶ್ರೀ ಸ್ವಾಮಿಗಳಿಂದ ಒಂದುಲಕ್ಷ ಸಂಖ್ಯೆಯುಳ್ಳ ಮಹಾಮಂತ್ರಾವಳಿಯ ಪುಸ್ತಕವನ್ನೂ ಆಶೀರ್ವಾದವನ್ನೂ ಪಡೆದು ತಮ್ಮ ಪೂಜಾಗಾರದಲ್ಲಿ ಪೂಜಿಸುತ್ತಿರುವರು, ಮತ್ತು ತಪೋಲೋಲರಾದ ಸ್ವಾಮಿಗಳಲ್ಲಿ ಪರಮ ಭಕ್ತಿಯನ್ನು ಲೇಖನ ಮೂಲಕವಾಗಿ ತೋರಿಸಿರುತ್ತಾರೆ.

ವಯೋವೃದ್ಧರೂ ಜ್ಞಾನವೃದ್ಧರೂ ಆಗಿರುವ ಶ್ರೀಸ್ವಾಮಿಗಳವರು ತಾವು ಉಲ್ಲೇಖಿಸಿರುವ ಈ ಮಹಾ ಪಂಚಾಕ್ಷರೀ ಮಂತ್ರದ ಪ್ರಕಾಶನದ ಮೂಲಕ ತಮ್ಮ ತಪೋಭಿವೃದ್ಧಿಯು ಎಲ್ಲೆಡೆಯೊಳು ಅಂಕುರಿಸಿ ಕ್ರಮದಿಂದ ಪಲ್ಲವಿಸಿ ಕುಸುಮಿತವಾಗಿ ಘಮಘಮಿಸಿ ಜಗತ್ತಿಗೆ ಭವ್ಯವಾದ ಅಮೃತ ಫಲವನ್ನಿತ್ತು ಶ್ರೀಸ್ವಾಮಿಗಳವರ ಯಶೋವಲ್ಲರಿಯು ದಶದಿಕ್ಕುಗಳಲ್ಲಿ ಹಬ್ಬಿ ಊರ್ಧ್ವ ಲೋಕಕ್ಕೂ ಗಮಿಸಲೆಂದು ಜಗನ್ನಾಯಕನಾದ ಪರಶಿವನನ್ನು ಪ್ರಾರ್ಥಿಸುವ

ಸಿ. ಗುರುಶಾಂತಶಾಸ್ತ್ರೀ, ಪಂಡಿತರತ್ನಂ
ಮೈಸೂರು ಶ್ರೀಮನ್ಮಹಾರಾಜಾಸ್ಥಾನ ಮಹಾವಿದ್ವಾನ್

ಭಾರತ ದೇಶವು ಆರ್ಷಸಂಪತ್ತಿನಿಂದ ಕೂಡಿದ ದೇಶವು. ಸಹಸ್ರಾರು ವರುಷಗಳ ಸಾಂಸ್ಕೃತಿಕ ಧಾರ್ಮಿಕ ತಾತ್ವಿಕ ಇತಿಹಾಸವನ್ನು ನೋಡಿದರೆ ಮಹನೀಯೋಜ್ವಲ ತಪೋಧನರು ಆಗಾಗ್ಗೆ ನಮ್ಮ ದೇಶದಲ್ಲಿ ಅವತರಿಸಿ ಹೋಗಿದ್ದಾರೆ.

"ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ, ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ" ಎಂಬ ಭಗವದುಕ್ತಿಯ ಪ್ರತ್ಯಕ್ಷ ದರ್ಶನವನ್ನು ಇಂದು ನಾವು ಕಾಣಬಹುದು.

ಪರಾತ್ಪರ ಶಕ್ತಿಯ ಪ್ರತಿಕೃತಿಯಂತೆ ಪ್ರತಿನಿಧಿಯಂತೆ ಇರುವ ಶ್ರೀ ವೀರಸಿಂಹಾಸನಾಧೀಶ್ವರ ಜಗದ್ಗುರು ಸುತ್ತೂರು ಸಂಸ್ಥಾನ ಮಠಾಧೀಶ್ವರ ಶ್ರೀ ಶ್ರೀ ಜಗದ್ಗುರು ಶಿವರಾತ್ರೀಶ್ವರ ಮಹಾಸ್ವಾಮಿಗಳವರ ಪ್ರಣವಸ್ವರೂಪಿಗಳ ಸಂದರ್ಶನ ಪಡೆದು ಅವರ

ಕಾರುಣ್ಯದ ಸನ್ನಿಧಿಯಲ್ಲಿ ಪರಮಪವಿತ್ರನಾದೆನು. ನನ್ನ ಕಲ್ಪನೆಯಲ್ಲಿಯೂ ಬರದ ಇಂಥ ದಿವ್ಯದರ್ಶನವನ್ನು ಪಡೆದು ಪುನೀತನಾದೆನು. ನನ್ನ ಜೀವನದಲ್ಲಿ ಇದೊಂದು ಪುಣ್ಯ ಪರಿವರ್ತನೆಯಾಯಿತು ಎಂಭತ್ತುವಯಸ್ಸಿನ ಹೊಸ್ತಲಿನಲ್ಲಿ ದಿನವೂ ಶ್ರೀಗಳವರು ಆತ್ಮಜ್ಯೋತಿಯಿಂದ ದೈದೀಪ್ಯಮಾನರಾಗಿ ಲೋಕಸಂಗ್ರಹಕ್ಕಾಗಿ ಜಗದ್ಧಿತಾರ್ಥವಾಗಿ ಒಂದುಕೋಟಿ ತೊಂಭತ್ತೊಂದು ಲಕ್ಷ ಪ್ರಣವ ಪಂಚಾಕ್ಷರೀ ಮಹಾಮಂತ್ರವನ್ನು ಅತಿಸುಂದರವಾದ ಅಕ್ಷರಗಳಲ್ಲಿ ಮುದ್ರಿಸುತ್ತಿರುವುದನ್ನು ಕಣ್ಣಾರೆ ಕಂಡು ಈ ತಪಸ್ಸಿನ ಮಹಾಸಿದ್ಧಿಯ ಪ್ರಭಾವವನ್ನು ಅನುಭವಿಸುವ ಭಾಗ್ಯದೊರೆತದು ನನ್ನ ಜೀವನದಲ್ಲಿ ಒಂದು ಮಹಾಪೂರಕಕಾಲವೆಂದು ಭಾವಿಸಿರುವೆ. ಅನೇಕ ಗುರುಕುಲಗಳನ್ನು ಸ್ಥಾಪಿಸಿ ವಿದ್ಯಾಪೀಠಗಳನ್ನು ರಚಿಸಿ ಸಹಸ್ರಾರು ಜನವಿದ್ಯಾರ್ಥಿಗಳಿಗೆ ಪ್ರಾಚ್ಯ ಪಾಶ್ಚಿಮಾತ್ಯ ವಿದ್ಯೆಯನ್ನು ಕಲಿಯಲು ಸಕಲ ಸಲಕರಣೆಗಳನ್ನು ಒದಗಿಸಿಕೊಟ್ಟು ವಿಶ್ವ ಕುಟುಂಬಗಳಾದ ಪರಮಪೂಜ್ಯರು ಮಕ್ಕಳಂತೆ ಜೋಪಾನ ಮಾಡುವುದನ್ನು ಕೇಳಿ ಪೂಜ್ಯರು ನಿಜವಾಗಿಯೂ ಕುಲಪತಿಗಳಾಗಿರುವರೆಂದು ಸಮಕ್ಷಮ ಕಂಡು ಸಂತೋಷ ಪಟ್ಟೆನು. ಧರ್ಮವು ಗ್ರಾಸವಾಗುವ ಈಗಿನ ಕಲಿಗಾಲದಲ್ಲಿ ಧಾರ್ಮಿಕ ತೇಜದೊಡನೆ ತಾತ್ವಿಕ ಶಕ್ತಿಯೊಡನೆ ಆತ್ಮೋದ್ಧಾರವನ್ನು ಲೋಕಸಂಗ್ರಹವನ್ನು ಸಾಧಿಸುವ ಪೂಜ್ಯರ ಕರ್ಮಕ್ಷೇತ್ರ ಅತೀವ ಪಾವನಮಯವಾಗಿದೆ. ಇವರ ಪುಣ್ಯದರ್ಶನ ಭಾಗ್ಯವಂತರಿಗೇನೆ ದೊರೆಯಬಹುದು-

"ಪುಣ್ಯವಂತಃ ಪ್ರಮಿಣ್ವಂತಿ ರಸವದ್ ಯೋಗಸಂತತಿಮ್"

ಎಂಬ ಉಕ್ತಿಯಂತೆ ಪುಣ್ಯಾತ್ಮರಿಗೆ ಮಾತ್ರ ಇಂಥ ಸುಯೋಗ

ಈ ವೀರ ಸಿಂಹಾಸನದ ಸೌರತೇಜ ಜಗತ್ತಿನ ಅಜ್ಞಾನಾಂಧಕಾರವನ್ನು ತಳ್ಳಲಿ ಮಹಾಮಂತ್ರ ಜಪಾನುಷ್ಠಾನ ಜಗದ ಕಲ್ಯಾಣೈಕಶಕ್ತಿಯಾಗಲಿ. ಭಾರತೀಯ ಋಷಿ ಸಂತತಿ ಇಂಥಾ ಪೂಜ್ಯಪಾದರ ಮಹಾಶಕ್ತಿಯಿಂದ ಕೂಡ ಚಿರನೂತನ ಚೇತನ ಪುನರುಜ್ಜೀವನಕಾರಣವಾಗಲಿ. ಎರಡುಕೋಟಿ ಸಂಖ್ಯೆಯ ಎಲ್ಲೆಯನ್ನು ಮುಟ್ಟಲಿರುವ ಪ್ರಣವ ಪಂಚಾಕ್ಷರೀ ಲೇಖನ ಜಗನ್ಮಧ್ಯದಲ್ಲಿ ಹಬ್ಬಿದ ಅಶಾಂತಿ ವಿಪ್ಲವವನ್ನು ಧ್ವಂಸ ಮಾಡಲಿ. ಮಂತ್ರದ ಪುಣ್ಯ ಚಂದ್ರಿಕೆಯಲ್ಲಿ ಈ ಲೋಕ ಪಾವನ ಶಾಂತಿಯನ್ನು ಹೊಂದಲೆಂದು ಅಪೇಕ್ಷಿಸಿ ಪೂಜ್ಯಪಾದರಲ್ಲಿ ತ್ರಿಕರಣ ಪುರಸ್ಸರವಾಗಿ ವಂದಿಸಿ ಬೇಡಿ ಮುಗಿಸುವೆ ಸದ್ಭಕ್ತ ತಿಂಥಿಣಿಯ ಮನೋಭೀಷ್ಟವನ್ನು ಅನುಗ್ರಹಿಸುವ ಗುರುವೇ ತಮ್ಮ ಪೂಜ್ಯಪಾದಾರವಿಂದದಲ್ಲಿ ವಂದನೆಗಳು.

ಅನ್ನದಾನೇಶ್ವರ ಹಿರೇಮಠ
ಪ್ರೊಫೆಸರ್ ಎ. ಎಲ್. ಹಿರೇಮಠ, ಎಂ. ಎ.
ಲಿಂಗರಾಜ ಕಾಲೇಜು ಬೆಳಗಾವ್
ತಾ|| 4-5-1962



ಜಗದ್ಗುರು ಶ್ರೀ ಶಿವರಾತ್ರೀಶ್ವರ ಮೂಲಶಿಕ್ಷಣ ವಿದ್ಯಾಪೀಠಕ್ಕೆ ರಾಷ್ಟ್ರಪತಿ ಡಾ॥ ರಾಧಾಕೃಷ್ಣನ್‌ರವರ
ಆಗಮನದಲ್ಲಿ ಜಗದ್ಗುರುಗಳೊಡನೆ ನಿಂತಿರುವುದು.

ಶ್ರೀ ಜಗದ್ಗುರು ರೇಣುಕಾಚಾರ್ಯ ಪರಂಪರಾನುಗತ ಪರಮಪೂಜ್ಯ ಪಟ್ಟಸ್ಥಲ ಬ್ರಹ್ಮಶ್ರೀ ಪ್ರಣವ ಸ್ವರೂಪಿ ಸುತ್ತೂರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳು ಜಗತ್ಕಲ್ಯಾಣಕ್ಕಾಗಿ ಈವರೆವಿಗೆ ಎರಡು ಕೋಟಿಗಳಷ್ಟು ಪ್ರಣವ ಪಂಚಾಕ್ಷರೀ ಮಹಾ ಮಂತ್ರವನ್ನು ಬರೆದು ಜನತೆಯನ್ನು ದರ್ಶನ ಮಾತ್ರದಿಂದಲೇ ಪಾವನಗೊಳಿಸುತ್ತ ಭಕ್ತಾನುಗ್ರಹಲೀಲೆಯಿಂದ ನಿಜವಾಗಿಯೂ ಜಗದ್ಗುರುವಾಗಿ ಶೋಭಿಸುತ್ತಿರುವರು. ಮಹಾಸ್ವಾಮಿಗಳು ನಿಶ್ಚಲ ಚಿತ್ತದಿಂದಲೂ ನಿರ್ಮಲ ಹೃದಯದಿಂದಲೂ ಮಂತ್ರವನ್ನು ಬರೆಯುತ್ತಿರುವುದರಿಂದ ಅವರ ಇಂದ್ರಿಯಗಳೂ, ಮನಬುದ್ಧಿಗಳು ಮಂತ್ರಮಯವಾಗಿ ದೇಹವೂ ಪ್ರಸಾದ ಕಾಯವಾಗಿ ಸತ್ಪರಿಣಾಮವನ್ನು ಹೊಂದಿದೆ. ಅವರ ಪ್ರಶಾಂತತೆಯನ್ನು ನೋಡಿದವರೆಲ್ಲರಿಗೂ ಈ ವಿಷಯವು ಮನವರಿಕೆಯಾಗಲಿರುವುದು. ಮಂತ್ರಮಯವಾದ ಪ್ರಸಾದಕಾಯದಲ್ಲಿ ಅವರು ಸಂಪ್ರಸಾದರೆನಿಸಿ ಶಿವಭಾವದಿಂದ ಪರಾಹಂತಾಸ್ಥಿತಿಯಲ್ಲಿ ಜಗತ್ಕಲ್ಯಾಣವನ್ನು ಸಾಧಿಸುತ್ತಲಿರುವರು. ಆಣವ ಮಾಯಾ ಕಾರ್ಮಿಕವೆಂಬ ಮೂರು ಮಂತ್ರಗಳೂ ಮಂತ್ರದ ನಿತ್ಯಾಭಿಯೋಗದಿಂದ ಅಭಿಮಾನ ಅಹಂಕಾರಗಳ ದುಷ್ಪರಿಣಾಮದಿಂದ ದೂರವಾಗಿ ನಿರಭಿಮಾನದಿಂದಲೂ ನಿರಹಂಕಾರದಿಂದ ಲೋಕ ಕಲ್ಯಾಣದ ಹೆಬ್ಬಯಕೆಯನ್ನು ಸಾಧಿಸುತ್ತ ಇಚ್ಛಾ ಜ್ಞಾನ ಕ್ರಿಯಾ ಶಕ್ತಿಗಳಾಗಿ ಪೂರ್ಣ ವಿಕಾಸಹೊಂದಿವೆ. ಇಂತಹ ಶಿವಯೋಗಿ ಶಿವಾಚಾರ್ಯರ ದಿವ್ಯ ದರ್ಶನವು ನನ್ನ ಮನಸ್ಸಿನಮೇಲೆ ಸತ್ಪರಿಣಾಮವನ್ನುಂಟು ಮಾಡಿತು. ಲೋಕವ್ಯವಹಾರಗಳಲ್ಲಿ ಮಗ್ನರಾಗಿ ಸತ್ವರಜಸ್ತಮೋಗುಣಗಳ ದುಷ್ಪ್ರೇರಣೆಗೆ ಸಿಲುಕಿರುವ ಮಾನವರೆಲ್ಲರೂ ಈ ತಪಸ್ವಿಗಳ ದಿವ್ಯದರ್ಶನದಿಂದ ನಿರ್ಮಲರೂ ಶಾಂತಚಿತ್ತರೂ ಆಗಿ ತಮ್ಮ ಜನ್ಮಸಾರ್ಥಕಪಡಿಸಿಕೊಳ್ಳಲೆಂದು ಹಾರೈಸುತ್ತೇನೆ.

ಇವರ ಕರ ಕಮಲ ಸಂಜಾತರಾದ ಶ್ರೀ ಶಿವರಾತ್ರಿ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ಉದಾರ ಹೃದಯರೂ ಉದಾತ್ತಶೀಲರೂ ಆಗಿ ನವತಾರುಣ್ಯದಲ್ಲಿಯೇ ಪೂರ್ಣವಾದ ಉತ್ಸಾಹವನ್ನು ವಿದ್ಯಾರ್ಥಿಗಳಹಿತಕ್ಕಾಗಿಯೆ ವಿನಿಯೋಗಿಸುತ್ತಾ ಮಠಾಧಿಪತಿಗಳೆಲ್ಲರಿಗೂ ದಿವ್ಯ ಆದರ್ಶರಾಗಿರುವರು. ಅನ್ನದಾನ ವಿದ್ಯಾದಾನಗಳಿಂದಲೂ ಉತ್ತಮ ಸಂಸ್ಕೃತಿಯ ಸರ್ವತೋಮುಖವಾದ ವಿಕಾಸದಿಂದಲೂ ಕರ್ಣಾಟಕದ ಜನತೆಗೆ ಅವರು ಜ್ಞಾನನೇತ್ರರಾಗಿರುವರು. ಮಠಗಳು ವಿದ್ಯಾಪೀಠದ ಕೇಂದ್ರಗಳೆಂಬುದಕ್ಕೆ ಸುತ್ತೂರುಮಠ ಉತ್ತಮ ಆದರ್ಶವಾಗಿದೆ ಎನ್ನುವವಮಟ್ಟಿಗೆ ಅವರು ಅವಿಶ್ರಾಂತ ಪ್ರಯತ್ನದಿಂದಲೂ ಸರ್ಕಾರದ ಮತ್ತು ಮಹಾಜನರ ಬೆಂಬಲದಿಂದಲೂ ದುಡಿಯುತ್ತಿರುವುದು ನಮ್ಮ ನಾಡಿನ ಸೌಭಾಗ್ಯವೆನಿಸಿದೆ, ಅವರ ಹೃದಯ ನಿಷ್ಕಲ್ಮಷವೂ, ಮನವು ನಿರ್ಮಲವೂ ಆಗಿದೆ. ತಮ್ಮ ತನುಮನಧನಗಳೆಲ್ಲವನ್ನೂ, ಶಿವಪೂಜೆಯಂತೆ ಜಗತ್ಕಲ್ಯಾಣಕ್ಕಾಗಿ ಅವರು ಉಪಯೋಗಿಸುತ್ತಾ ಸರ್ವರಿಗೂ ಉತ್ತಮವಾದ ಮಾರ್ಗದರ್ಶನಮಾಡುತ್ತಿರುವ ಇವರ ಸಾರ್ವಜನಿಕ ಚಟುವಟಿಕೆಗಳಿಗೆ ಸರ್ಕಾರವು

ಮತ್ತಷ್ಟು ಹೆಚ್ಚಿನ ಪ್ರೋತ್ಸಾಹವನ್ನು ನೀಡಿ ಇವರ ಕಡೆಯಿಂದ ನಾಡಿನ ಹಿತವನ
ಸಾಧಿಸುವಂತಾಗಲೇದು ಹಾರೈಸುತ್ತೇನೆ.

ಟಿ.ಜಿ. ಸಿದ್ದಪ್ಪಾರಾಧ
ಯು ಜಿ.ಸಿ. ರೀಡರ್
ಮಾನಸಗಂಗೋತ್ರಿ
ಮೈಸೂರು ವಿಶ್ವವಿದ್ಯಾನಿಲಯ ಮೈಸೂ

26-8-62

"ಶ್ರೀ ವಿದ್ಯಾಶಂಕರೋ ವಿಜಯತೇ"

"ಶ್ರೀಮಜ್ಜಗದ್ಗುರು ಶ್ರೀ ಕೂಡಲೀ ಶೃಂಗೇರಿ ಮಹಾಸಂಸ್ಥಾನ"

ಶ್ರೀಮಚ್ಛಿವ ಪಂಚಾಕ್ಷರೀ ಮಂತ್ರಲೇಖನದ ನೋಡುವಿಕೆಯಿಂದ ಈಶ, ತತ್
ರುಷ, ಅಘೋರ, ಸದ್ಯೋಜಾತ, ವಾಮದೇವ ಎಂಬ ಹೆಸರುಳ್ಳ ಐದು ಮುಖಗಳಿಂ
ಕೂಡಿದ ಮಹಾಮಹಿಮನಾದ ಜಗತ್ಸ್ವಾಮಿಯಾದ ಪರಮೇಶ್ವರನ ಸಾಕ್ಷಾತ್ಕಾರದಿಂ
ಎಷ್ಟು ಸಂತೋಷಉಂಟಾಗುವುದೋ ಅಷ್ಟು ಆನಂದವನ್ನು ಅನುಭವಿಸುತಿದ್ದೇವ
ಎಂತೆಂದರೆ-ಹಂಸಮಂತ್ರವೆಂದರೆ ಆತ್ಮಮಂತ್ರದಿಂದ –ಅಕಾರ, ಉಕಾರ, ಮಕಾರ
ನಾದ, ಬಿಂದುರೂಪ ಪ್ರಣವವೂ, ಆ ಪ್ರಣವದಿಂದ 'ನಮಃಶಿವಾಯ' ಎಂಬ ಶಿ
ಪಂಚಾಕ್ಷರೀ ಮಹಾಮಂತ್ರದ ಉತ್ಪತ್ತಿಯು "ಹಂಸಃ, ಸೋऽಹಂ" ಎಂಬುದು ಹಂ
ಮಂತ್ರವು.

ಇದರ ಅರ್ಥವು:-ಹಂ= ನಾನು, ಸಃ= ಈಶ್ವರನು, ಸಃ= ಈಶ್ವರನ
ಹಂ= ನಾನು, ನನಗಿಂತಲೂ ಬೇರೆಯಾದ ಈಶ್ವರನು, ಈಶ್ವರನಿಗಿಂತ ಬೇರೆಯಾ
ವನು ನಾನು, ಎಂಬುದೂ ಇಲ್ಲವು ಹೀಗೆ ಇಬ್ಬರೂ ಒಂದೇ, ಎಂಬುದಾಗಿ ಈ ಬಗೆಯ
ಆತ್ಮಮಂತ್ರವನ್ನು ಸೇರಿಸಿ ಹೇಳುವುದೇ =ಸೋऽ ಹಂ, ಎಂಬುದಾಗಿ ಈ ರೀತಿಯ
ವಿವರಣೆಯಿಂದ = ತತ್ವಮಸಿ „ಅಹಂ ಬ್ರಹ್ಮಾಸ್ಮಿ" ಇವೇ ಮೊದಲಾದ ಮಹಾವ
ಕ್ಯಾರ್ಥವು ಸಿದ್ಧಿಸುವುದು, 'ಸೋऽಹಂ' ಎಂಬ ಮಂತ್ರದಿಂದ:-"ಸಕಾರಾಂಚ
ಕಾರಂಚಲೋಪಯಿತ್ವಾಪ್ರಯೋಜಯೇತ್ । ಸಂಧಿಂಚ ಪೂರ್ವರೂಪಾಖ್ಯಂ" ಎಂದ
ಸೂತಸಂಹಿತೆಯಲ್ಲಿ ಹೇಳಿದರೀತಿಯಿಂದ ಸಕಾರಹಕಾರಗಳನ್ನು ಲೋಪಮಾಡಿ, ಪೂವ
ರೂಪಸಂಧಿಯನ್ನು ಮಾಡುವುದರಿಂದ "ಓಮ್" ಎಂಬ ಪ್ರಣವರೂಪವು ಉಂಟಾಗ
ವುದು. ಆ ಪ್ರಣವದಲ್ಲಿ ಸೇರಿದ ಅಕಾರದಿಂದ ನಕಾರವು, ಉಕಾರದಿಂದ ಮಕಾರವ
ಮಕಾರದಿಂದ ಶಿ- ಎಂಬುದೂ, ನಾದದಿಂದ ವಾಕಾರವೂ, ಬಿಂದುವಿನಮೂಲಕ ಯ
ಕಾರವೂ, ಹೀಗೆ ಈಶಾನಾದಿ ಪಂಚಮುಖರೂಪಗಳಾಗಿರುವ ನಕಾರವೇ ಮೊದಲಿ
ದಾಗಿರುವ ಐದು ಅಕ್ಷರಗಳೇ (ನಮಃಶಿವಾಯ) ಸಮೂಹರೂಪವಾದ ಶಿವಪಂಚಾಕ್ಷರಿ
ಮಂತ್ರವು ಸಿದ್ಧಿಸುವುದು.

"ನಮಃಶಿವಾಯ" ಎಂಬಮಂತ್ರಕ್ಕೆ ಲೋಕರೂಢಿಯಿಂದ ಶಿವನಿಗೋಸ್ಕರ ನಮಸ್ಕಾರವು ಎಂಬರ್ಥವು ಸಿದ್ಧಿಸಿದಾಗ್ಯೂ "ನನ್ನದಲ್ಲವು ಆದರೆ ಶಿವನು" ಇದೆಲ್ಲವೂ ನನ್ನದಲ್ಲವು ಆದರೆ ಮುಖ್ಯನಾಗಿ ಸತ್, ಚಿತ್, ಆನಂದಸ್ವರೂಪನಾದ ಶಿವನೇ ಎಂಬರ್ಥವು ದೃಢಪಡುವುದು. ಕ್ರಮವಾಗಿ ಹೀಗೆಯೇ ಎಲ್ಲಪ್ರಪಂಚವೂ ಯಾವಕಾರಣದಿಂದ ಪರಮಾತ್ಮನ ವಿವರ್ತರೂಪವಾದುದು. ಆ ಪರಮಾತ್ಮನ ಐದುಮುಖಗಳಿಂದ ಕೂಡಿದುದು ಲೀಲಾವಿಗ್ರಹವು ಅಂತಹ ಪರಶಿವನ ಸ್ಮರಣೆಯು ಈ ಮಹಾಮಂತ್ರಲೇಖನದಿಂದ ಮಾಡಲ್ಪಡುವುದು. ಇಂತಹಧ್ಯಾನಬಲದಿಂದ ಪರಶಿವಪರಮಾತ್ಮ ಸಾಕ್ಷಾತ್ಕಾರದ ಅನುಭವವು ಉಂಟಾಗುವುದು ಎಂದು ಈ ಮಹಾಮಂತ್ರದ ಲೇಖಕರಿಗೂ, ಅದಕ್ಕೆ ಪ್ರೇರಿಸುವವರಿಗೂ, ಆ ಲೇಖನವನ್ನೂ ನೋಡುವವರಿಗೂ, ಅಂತಹ ಅನಿರ್ವಾಚ್ಯವಾದ ಆನಂದಾನುಭವವು ಖಂಡಿತವಾಗಿಯೂ ಲಭಿಸುವುದೆಂದು ದೃಢವಾಗಿ ಹೇಳಬಲ್ಲೆವು.

ಲಕ್ಷ್ಮೀಪುರಂ.
ಮೈಸೂರು.

24 9-62

ಹೀಗೆ ನೂರಾರುಮಂದಿ ಮಠಾಧೀಶ್ವರರೂ ತಪೋನಿಷ್ಠರೂ ವಿದ್ವನ್ಮಣಿಗಳೂ ಜಗದ್ಗುರುಗಳವರ ಮಂತ್ರತಪಸ್ಸನ್ನು ಮೆಚ್ಚಿ ತಮ್ಮ ಆತ್ಮಸಂತೋಷವನ್ನು ವ್ಯಕ್ತಪಡಿಸಿದ್ದಾರೆ ಪಂಡಿತರು ಮಂತ್ರಶಕ್ತಿಯನ್ನು ಶಾಸ್ತ್ರಾಧಾರದಿಂದ ವಿವರಿಸಿ ಶ್ರೀಗಳವರ ಮಂತ್ರತಪಸ್ಸಿಗೆ ಮೆರಗುನೀಡಿದ್ದಾರೆ ಇನ್ನೂ ನೂರಾರು ಲೇಖನಗಳನ್ನು ಪ್ರಕಟಿಸಲು ಸ್ಥಳಾಭಾವದಿಂದ ಬಿಟ್ಟಿರುವುದಕ್ಕಾಗಿ ಇಲ್ಲಿ ಕ್ಷಮೆಯನ್ನು ಕೇಳಬೇಕಾಗಿದೆ. ಈ ಮಂತ್ರತಪಸ್ಸು ನಿರಂತರವಾಗಿ ಮುಂದುವರಿಯುತ್ತಲೇಇದೆ. ಶ್ರೀ ಗುರುಕೃಪೆಯಿಂದ ಈ ತಪಸ್ಸು ಇನ್ನೂ ಬಹುಕಾಲ ನಡೆಯಲೆಂದು ಆಶಿಸುತ್ತೇವೆ.

## ಗುರು ಪೀಠದಿಂದ ಸನ್ಮಾನ

ಸಮಾಜ ಕಲ್ಯಾಣದ ಹಾದಿಯಲ್ಲಿ ನಡೆದ ಮಹಾಜನರಿಗೆ ಶ್ರೀಪೀಠವು ಮನ್ನಣೆಯಿತ್ತು ಪ್ರೋತ್ಸಾಹಿಸುವ ಸಂಪ್ರದಾಯವೊಂದಿದೆ ಅಂತೆಯೇ ನೂತನ ರಜತಸಿಂಹಾಸನಾರೋಹಣ ಕಾಲದಲ್ಲಿ ಜಗದ್ಗುರುಗಳು ಬೆಂಗಳೂರಿನ ಉದಾರಿಗಳೂ ದಾನಶೀಲರೂ ಗುರುಭಕ್ತರೂ ಆದ ಶ್ರೀ ಬಿ. ಎಸ್. ಶಂಕರಪ್ಪಶೆಟ್ಟಿ ರವರಿಗೆ "ಗುರುಸೇವಾಧುರೀಣ" ಎಂಬ ಪ್ರಶಸ್ತಿಯನ್ನೂ ಮೈಸೂರಿನ ನಾಟ್ಯಕಲಾವಿಶಾರದ ಶ್ರೀ ಎಂ. ಸಿ. ಮಹದೇವಸ್ವಾಮಿಯವರಿಗೆ "ಸಮಾಜಸೇವಾಧುರೀಣ" ಎಂಬ ಪ್ರಶಸ್ತಿಯನ್ನು ಆಸ್ಥಾನ ವಿದ್ವಾಂಶ್ರೀ ಎಂ. ಡಿ. ನಂಜುಂಡಾರಾಧ್ಯರವರಿಗೆ "ಸಾಹಿತ್ಯರತ್ನ" ಎಂಬ ಪ್ರಶಸ್ತಿಯನ್ನು ಶ್ರೀ ಎಂ. ಬಸವರಾಜಶಾಸ್ತ್ರಿಗಳವರಿಗೆ "ವೈದಿಕಪ್ರವೀಣ" ಎಂಬ ಪ್ರಶಸ್ತಿಯನ್ನು ಖಿಲ್ಲತ್ತುಗಳೊಡನೆ ದಯಪಾಲಿಸಿ ಆಶೀರ್ವದಿಸಿದರು.

§ॐ§

# ಶ್ರೀ ಮಠ ಹಾಗೂ ಜಗದ್ಗುರುಗಳವರ ಕೀರ್ತಿ ಪ್ರಶಂಸೆ

ಶ್ರೀ ಪೀಠದ ಕಾರ್ಯಬಾಹುಳ್ಯವನ್ನು ಜಗದ್ಗುರುಗಳವರ ಔದಾರ್ಯವನ
ಪ್ರಸ್ತಾಪಿಸಿ ಸಾವಿರಾರು ಅಭಿನಂದನಾ ಪತ್ರಿಕೆಗಳು ಸಲ್ಲಿಸಲ್ಪಟ್ಟಿವೆ. ಅವುಗಳಲ್ಲಿ ಕೆಲ
ವನ್ನು ಮಾತ್ರವಾಚಕರ ಗಮನಕ್ಕೆ ತರಲಾಗಿದೆ.

**ಸುತ್ತೂರು ಶ್ರೀ ವೀರಸಿಂಹಾಸನಾಧೀಶ್ವರ ಶ್ರೀ ಶಿವರಾತ್ರಿಸ್ವಾಮಿಗಳವರ ಸುವರ್ಣ ಮಹೋತ್ಸವ ಸಮಯದಲ್ಲಿ ಮೈಸೂರು ನಗರದ ವೀರಶೈವರು ಭಕ್ತಿಪೂರ್ವಕವಾಗಿ ಸಮರ್ಪಿಸಿದ**

## ಸ್ವಾಗತ ಪದ್ಯಮಾಲೆ

ಶ್ರೀ ಮಹಾಬಲ ಶೈಲವಾಸಿನಿ ।
ಸೋಮಧರನರ್ಧಾಂಗಭಾಮಿನಿ ।
ಕಾಮಹರ ವರಭಕ್ತಪೋಷಿಣಿ ದೇವಿ ಕಲ್ಯಾಣಿ ।
ಈ ಮಹಾಹವ ಘೋರಚಕ್ರದಿ ।
ಪ್ರೇಮದೀಪವ ಕಾಣದೀಜನ ।
ತಾಮರಸಕತಿಸುಖವ ನೀಯುತೆ ರಕ್ಷಿಸೌ ಜನನೀ ॥೧
ಶಿಷ್ಯಕೋಟಿಯ ಭಕ್ತಿಚಿಹ್ನೆಯ ।
ವಿಶ್ವಪ್ರೇಮದ ಗುರುವರೇಣ್ಯರ ।
ಹರ್ಷವಾದೀ ಹೇಮದುತ್ಸವಕಧಿಪ ತಾನಾಗಿ ।
ವಿಶ್ವದೊಳು ಸುಖ್ಯಾತಿನಡೆದುರು ।
ಶಿಷ್ಟಜನವಿಹ ನಮ್ಮ ರಾಜ್ಯದ ।
ಶ್ರೇಷ್ಠಸಚಿವ ಸುಮಾಧವಾಚಾರ್ಯಗೆ ಸಲುಗೆ ಸ್ವಾಗತವು ॥
ನಿಯಮದಿಂದೈವತ್ತು ವರುಷಕೆ ।
ನಿಯತವೀ ಸೌವರ್ಣದುತ್ಸವ ।
ಸುಯತಿವರ ಶಿವರಾತ್ರಿಸ್ವಾಮಿಗಳೀಗ ಕಾಳ್ದದನು ।
ನಯವಿದರು ಸುತ್ತೂರು ನಗರಿಯ ।
ಜಯಮಹಿತ ಸಿಂಹಾಸನದೊಳತಿ ।
ದಯದಿ ಶಿಷ್ಯರ ಮುದವ ಪೆರ್ಚಿಸಿ ಸೊಗದಿ ನಿಂದಿಹರು ॥೩
ಲೋಕದೊಳು ಮನುಜರ್ಗೆ ಚಿತ್ತವಿ ।
ವೇಕವನು ತೋರಿಸುವ ಗುರುವೇ ।

ಜೇಕುನವುಗೀದಿನಲಿ ನಾನೇ ಧನ್ಯರವರಿಂದೇ ।
ಲೋಕಗುರು ಶಿವರಾತ್ರಿಯತಿಗಳ ।
ನೇಕಕಾಲದಿ ಶಿಷ್ಯಜನತೆಯ । ||೪||
ಶೋಕವನು ನೀಗುತ್ತೆ ಮೆರೆಯಲಿ ವೀರಪೀಠದೊಳು
ಪರಮಧರ್ಮದ ರೂಪವೇ ಜಗ ।
ವರಿಯೆ ಕಪಿಲಾತೀರವಾಸದೆ ।
ವರದ ರೇಣುಕ ವೀರಸಿಂಹಾಸನದಿ ಮಂಡಿಸುತೆ ।
ಸುರುಚಿರದ ಸಂಸ್ಕೃತಸುವಾಣಿಯ ।
ಸರಿಸಮದಿ ಪಾಶ್ಚಾತ್ಯಭಾಷೆಯ । ||೫||
ನರಿವ ಯುವಕರಿಗಾಗಿ ತೆತ್ತಿಹರಖಿಲಸಂಪದವ
ಮಂಗಳಂ ಜಯಚಾಮಭೂಪಗೆ ।
ಮಂಗಳಂ ನೃಪಬಂಧುವರ್ಗಗೆ ।
ಮಂಗಳಂ ಸುತ್ತೂರುಪೀಠದ ಸ್ವಾಮಿವರ್ಯರಿಗೆ ।
ಮಂಗಳಂ ಕನ್ನಡದನಾಡಿಗೆ ।
ಮಂಗಳಂ ಭರತಾಖ್ಯದೇಶಕೆ । ||೬||
ಮಂಗಳಂ ಪಾಶ್ಚಾತ್ಯರಾಜ್ಯದ ಮಿತ್ರಭೂಪರ್ಗೆ

30-9-44

ಮೈಸೂರು

**ಸುತ್ತೂರು ಶ್ರೀ ವೀರಸಿಂಹಾಸನಮಠದ ಪಟ್ಟದ ಶಿವರಾತ್ರಿಸ್ವಾಮಿಗಳವರ ಸ್ವರ್ಣಮಹೋತ್ಸವ ಸಮಯದಲ್ಲಿ ವೀರಶೈವ ಶಿಷ್ಯಮಂಡಲಿಯವರು ಶ್ರದ್ಧಾಭಕ್ತಿಪೂರ್ವಕವಾಗಿ ಅರ್ಪಿಸಿದ**

## ನವರತ್ನ ಪದ್ಯ ಮಾಲಿಕೆ

ಶ್ರೀ ಶ್ರೋತ್ರಿಯ ಪುರಾವಾಸಂ ವೀರಸಿಂಹಾಸನಾಧಿಪಂ ।
ಸ ಸ್ವಾಮಿ ಶಿವರಾತ್ರೀಶಂ ವೀರಶೈವ ಸುಧಾಕರಂ ||೧||

ಸುರರಂ ಸಂಗರದಿಂದೆ ರಕ್ಷಿಸಲು ನೀನಂದಿತ್ತೆಯೈ ಧೈರ್ಯಮಂ
ವಿಜಿತಾನಂದ ಕೃಪಾಳು ದೇವನಮಿತ ಶ್ರೀಪಾದ ಪಂಕೇರುಹ ।
ಸತತಂ ಶ್ರೀ ಶಿವರಾತ್ರಿದೇವ ಯತಿಪಂಗಾರೋಗ್ಯಸಂಸಿದ್ಧಿಯಂ
ದಯೆಗೈ ಚಿನ್ಮಯ ಚಿನ್ನದುತ್ಸವಕೆ ನೀಂ ಸಮ್ಮೋದ ಸಂದೋಹಮಂ ||೨

ಶಿವಸಮಯಾಬ್ಧಿ ಸುಧಾಂಶುವೆ

ನವಪ್ರಷೋ೯ತ್ಸವಕೆ ಬಂದು ಶೋಭೆಯು ನೆಸಗ್ಯೆ ।
ಕವಿವರ ನುತಚಾರಿತ್ರ್ಯನೆ
ಶಿವರಾತ್ರಿಯತೀಂದ್ರ ನಿನಗೆ ಸುಸ್ವಾಗತವೈ ॥೩॥
ಹಿರಿಯ ಗುರುವರ ನಿಂದೆ ಬಾಲ್ಯದೊ
ಳರಿದು ಮಠದಧಿಕಾರ ವಹಿಸಿದ
ವರುಷ ಪೈವತ್ತಗೊಳು ನಿನ್ನಯಾ ಕೀರ್ತಿಲತೆ ಜಗದಿ ।
ಸುರಚಿರದಿ ಪಲ್ಲವಿಸಿ ಕುಸುಮಿಸಿ ।
ಸರಸ ಫಲಭರದಿಂದೆ ರಂಜಿಸು
ತಿರದೆ ಜನಮನ ತಣಿಸಿ ಮೆರೆದಪುದಿಂದು ಮಹನೀಯ ॥೪॥

ಶಿಷ್ಯವೃಂದದ ಮನವ ನೋಯಿಸಿ
ಕಷ್ಟದಿಂ ಬಹುಧನವ ಗಳಿಸುವ
ನಿಷ್ಠುರದ ಮಾರ್ಗವನು ತೊರೆದುರು ಮುದದಿ ಯತಿವರನೆ ।
ನಿಷ್ಠೆಯಿಂದನವರತ ಶ್ರಮಿಸುತೆ
ಶಿಷ್ಟಮಾರ್ಗದಿ ಧನವನಾರ್ಜಿಸಿ
ಕಷ್ಟವಾರಣೆಮಾಡಿ ಜನತೆಯ ಮನವನೊಲಿಸಿರುವೆ ೫

ವಿದ್ಯೆಯನು ದೇಶದೊಳು ವರ್ಧಿಸಿ
ಸದ್ಯಶವನಾರ್ಜಿಸಿದೆ ನೀನತಿ
ಹೃದ್ಯಚರಿತನೆ ರಚಿಸಿ ವಿದ್ಯಾನಿಲಯಗಳ ಮುದದಿ ।
ವೈದ್ಯಮಂದಿರ ದೇವನಿಲಯವ
ಗದ್ದುಗೆಯ ವಿಶ್ರಾಂತಿಗೃಹ ಮಠ
ವುದ್ಧರಿಸೆ ಬಹುಧನವ ನಿತ್ತಿಹೆ ದಾನಶೂರನೆನೆ ೬

ಭೇದರಹಿತನೆ ಶಿಷ್ಯನೆರವಿಗೆ
ಬೋಧಿಸುತೆ ನಿಜತತ್ತ್ವವರಿಂ
ವೇದ ಸಂಸ್ಕೃತ ಪಾಠಶಾಲೆಯ ರಚಿಸಿ ವಟುಗಳನು
ಆದರಿಸಿ ಹಿತನೊಲ್ಮೆದೋರುತೆ
ಸಾಧುನಿಯಮವ ಕಲಿಸಿ ಪೊರೆದಪೆ
ವೇದ ವಿದ ಗುರು ಶರಣುಗೈಯ್ವವು ಹರಸು ಬಾಲಕರ ೭

ಜಯಿಸಿಕೆ ಸಜ್ಜನನಮಿತ ಮೂರುತಿ
ಜಯಕೆ ಸತ್ಯವಿಶಾಲ ಕೀರುತಿ
ಜಯಿಸಿಕೆ ಕರುಣಾಸಾಂದ್ರ ಬುಧಗಣ ವಿನುತ ಮಹಿತಯತಿ ।

ಜಯಿಕೆ ವಿದ್ಯಾಕೇಂದ್ರ ಗುಣತತಿ
ಜಯಿಕೆ ಶಿವರಾತ್ರೀಂದ್ರ ಯತಿಪತಿ
ಜಯಿಸಿ ವಜ್ರೋತ್ಸವದಿ ಬೆಳಗಲಿ ಭಕ್ತನಿರತನುತಿ ೮
ಧರ್ಮಾತ್ಮಾ ಜಯಚಾಮೇಂದ್ರೋ ವಿದ್ಯಾವಿನಯ ಭೂಷಿತಃ ।
ಯಶೋರಾಶಿಂ ಲಭೇನ್ನಿತ್ಯಂ ಕರ್ಣಾಟೇಸ್ಮಿನ್ ಶತಂ ಸಮಾಃ ೯

**ಭದ್ರಂ ಶುಭಂ ಮಂಗಳಂ**

ವೇ॥ ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯರಿಂದ ರಚಿತವಾದುದು.

॥ ಓಂ ॥

**ಶ್ರೀಮದ್ವೇದಾಗಮಾಂತ ಪ್ರತಿಪಾದಿತ ವಿಮಲ ವೀರಶೈವಾಚಾರ ಪ್ರತಿಷ್ಠಾಪನಾಚಾರ್ಯ ಶ್ರೀ ಜಗದ್ಗುರು ರೇಣುಕಾಚಾರ್ಯ ಪರಂಪರಾನುಗತ ಶ್ರೀ ಶಿವರಾತ್ರೀಶ್ವರ ಗುರುಚರಣಾನುಗತ ಶ್ರೀ ಪ್ರಣವ ಪಂಚಾಕ್ಷರೀ ಮಹಾಮಂತ್ರಸಮುದಿತ ಗುರುರಾಜ ಪರಮಹಂಸ ಶ್ರೀ ಸುತ್ತೂರು ವೀರಸಿಂಹಾಸನಾಧೀಶ್ವರರಾದ ಜಗದ್ಗುರು ಪಟ್ಟದ ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರ ದಿವ್ಯ ಚರಣಾರವಿಂದದಲ್ಲಿ ಚಿಕ್ಕಮಗಳೂರು ಜಿಲ್ಲಾ ಕಡೂರು ತಾಲ್ಲೂಕು ಹಿರೇನಲ್ಲೂರು ಹೋಬಳಿ ಗಿರಿಯಾಪುರ ಕೇಂದ್ರದಲ್ಲಿರುವ "ಶಿವಾದ್ವೈತ ತತ್ತ್ವ ಪ್ರಚಾರ ಸಮಿತಿಯು" ಭಕ್ತಿಪುರಸ್ಸರವಾಗಿ ಅರ್ಪಿಶಿದ ಬಿನ್ನವತ್ತಳೆ**

ಜಗದ್ಗುರು ಪೂಜ್ಯಪಾದರೇ,

ಕಣ್ಣಿನೊಳಗಣ ಬೊಂಬೆಯ ಸೂತ್ರದಂತೆ ನವನೀತದೊಳಡಗಿದ ಸಾರದ ಸವಿಯಂತೆ ಭಾವವಿಲ್ಲದ ಬಯಲಾಗಿ ಬೆಳಗಿನರಿವಿಂದ ಜ್ಯೋತಿಯಾಗಿ ಪ್ರಕಾಶಿಸುವ ಮಹಾನುಭಾವರುಗಳ ನಿಲುವನ್ನು ಅರಿಯುವುದು ಸುಲಭವಲ್ಲ. ಸಾಧನೆ ಬೇಕು ಸಿದ್ಧಿಯೂ ಬೇಕು ಸಂಕಲ್ಪ ಬದ್ಧರಾದವರು ಮಾತ್ರವೇ ಸಿದ್ಧಿ ಪಡೆಯುವರು. ಹಿಡಿದ ಕೃತಿಯನ್ನು ಕೈ ಬಿಡದೆ ದೃಢಚಿತ್ತರಾಗಿ ತಮ್ಮ ಸಂಕಲ್ಪವನ್ನು ಸಾಧಿಸುವವರು ಮಹಾನುಭಾವರು ಸಿದ್ಧಪುರುಷರಾಗಿ ಸಹಸ್ರಾರು ಮಂದಿ ಪಾಮರರ ಅಂತರಂಗವನ್ನು ಶುದ್ಧಿಗೊಳಿಸಿ ಅಜ್ಞಾನತಮವನ್ನು ಅಳಿಸಿ ಜ್ಞಾನ ಜ್ಯೋತಿಯನ್ನು ಬೆಳಗಿಸಿದ ಮಹಾನುಭಾವರಾದ ಶ್ರೀ ಮದುಜ್ಜಯಿನೀ ಮರುಳ ಸಿದ್ಧೇಶ್ವರನ ನೆಲವೀಡಾದ ಈ ಮಹಾಕ್ಷೇತ್ರದಲ್ಲಿ ಕೀರ್ತಿಪ್ರಕಾಶಕ್ಕೆ ಶರಣರ ಆಗಮನವೇ ಮಹದುಪಕಾರ ಹೀಗೆ ಸಂಕಲ್ಪ ಸಿದ್ಧರಾಗಿ ಸಮುಸಿದ್ಧಿಯನ್ನು ಪಡೆದು ಮಹಾನುಭಾವರೂ ಮೂರ್ತಿಗಳಲ್ಲಿ ಹಿರಿಯರೂ ಆದ ಜಗದ್ಗುರು ಮಹಾಸನ್ನಿಧಾನದವರು ಕೃಪೆಯಿಟ್ಟು ದಯಮಾಡಿಸಿರುವುದು ಭಕ್ತರ ಪುಣ್ಯವಿಶೇಷ. ಶರಣರ ಮಹಿಮೆ ಶರಣರಿಗಲ್ಲದೆ ಮತ್ತಾರಿಗೆ ಅರಿವು? ಮಹಿಮೆಗಳ ಸಂಗಮದಲ್ಲಿ ನಾವು ಸಮುವೇಶಗೊಂಡಿದ್ದೇವೆ. ಶ್ರೀ ಶಿವಯೋಗಿ ಮಂದಿರದ ಸಂಸ್ಥಾಪಕರೂ, ವೀರಶೈವ ಮಹಾಸಭೆಗೆ ಅಡಿಗಲ್ಲು ಹಾಕಿದವರೂ ಆದ ಲಿಂ॥ ಶ್ರೀ. ನಿ. ಪ್ರ.

ಕುಮಾರಸ್ವಾಮಿಗಳವರ ಪುಣ್ಯದಿನವಾದ ಈ ದಿನ ಅವರ ಸ್ಮಾರಕಕ್ಕಾಗಿಯೇ ಸಖರಾ
ಯಪಟ್ಟಣದ ಶ್ರೀ ಗುರುಹಾಲುಸ್ವಾಮಿ ಮಠದ ಪಟ್ಟಾಧ್ಯಕ್ಷರಾದ ಷ. ಬ್ರ. ಶ್ರೀ
ಸದಾಶಿವ ಶಿವಾಚಾರ್ಯ ಸ್ವಾಮಿಗಳವರಿಂದ ಸ್ಥಾಪನೆಯಾಗಿರುವ ಶ್ರೀಗುರುಕುಮಾರಾ
ಶ್ರಮದಲ್ಲಿ ಅವರ ಶ್ರಮದಿಂದಲೇ ಸ್ಥಾಪಿಸಲ್ಪಟ್ಟಿರುವ ಈ ಸಮಿತಿಯ ಆಶ್ರಯದಲ್ಲಿ ನಡೆ
ಯುತ್ತಿರುವ " **ಎಳನೆಯ ಶಿವಾನುಭವ ಸಮ್ಮೇಳನದ** " ಧಾರ್ಮಿಕ ಸಭೆಯ ಅಧ್ಯ
ಕ್ಷ ಸ್ಥಾನಕ್ಕೆ ದೀರ್ಘದಂಡ ಪ್ರಣಾಮಪೂರ್ವಕವಾಗಿ ಶ್ರೀ ಸನ್ನಿಧಿಯವರನ್ನು ಸ್ವಾಗತಿ
ಸಲು ಪರಮಾನಂದವಾಗಿದೆ.

ಯೋಗಿವರೇಣ್ಯರೇ,

ಜಗದಾಚಾರ್ಯರಾದ ರೇಣುಕ ಭಗವತ್ಪಾದರಿಂದ ಸ್ಥಾಪಿಸಲ್ಪಟ್ಟ ಶ್ರೀ
ವೀರಸಿಂಹಾಸನ ಮಹಾನುಭಾವರ ಪರಂಪರೆಯಲ್ಲಿ ಬಂದ ತಾವು ನಿಷ್ಠಾವಂತ ತಪಸ್ವಿ
ಗಳಾಗಿ ಅನೇಕ ಮಹತ್ಕಾರ್ಯಗಳನ್ನು ಸಾಧಿಸಿರುವಿರಿ. ಶಾಖಮಠಗಳನ್ನೂ, ಶಿಷ್ಯಸ
ಮುದಾಯವನ್ನೂ ವೃದ್ಧಿಗೊಳಿಸಿ **ಶ್ರೀ ಸುತ್ತೂರು** ವೀರಸಿಂಹಾಸನದ ಕೀರ್ತಿ ಇಡೀ
ಭರತಖಂಡದಲ್ಲೇ ಬೆಳಗುವಂತೆ ಮಾಡಿರುವಿರಿ ವಯೋಪರಿಮಿತಿಯನ್ನು ದಾಟಿದ್ದರೂ
ಎಳೆಯ ವಯಸ್ಸಿನ ಹುರುಪಿನಿಂದ ಭಕ್ತೋದ್ಧಾರ ಕಾರ್ಯದಲ್ಲಿ ನಿರತರಾಗಿ ಶ್ರಮಿಸು
ತ್ತಿರುವ ತಮ್ಮ ಪಾದ ದರ್ಶನದಿಂದ ನಾವು ಧನ್ಯರು.

**ಪ್ರಣವ ಪ್ರಭಾವಿತರೇ,**

ಭಾರತದ ಪ್ರಾಚೀನ ಸಂಸ್ಕೃತಿಯ ಜ್ಞಾನೋದಯವನ್ನುಂಟು ಮಾಡಲು
ಸಂಸ್ಕೃತ, ವೇದ, ಜ್ಯೋತಿಷ, ಯೋಗ, ಗಮಕವಿದ್ಯೆಗಳ ಶಿಕ್ಷಣ ಸಂಸ್ಥೆಯನ್ನು ಗುರು
ವರ್ಗದ ಶಿಕ್ಷಣಕೇಂದ್ರವನ್ನು ಸ್ಥಾಪಿಸಿ ಮಹದುಪಕಾರ ವಡಿರುವಿರಿ. ಮೈಸೂರು
ಜಿಲ್ಲೆಯ ನಾನಾಕಡೆಗಳಲ್ಲೂ ಮತ್ತು ನಗರದಲ್ಲಿಯೂ ಅನೇಕ ಪ್ರಸಾದ ನಿಲಯಗಳ
ನ್ನು ಸ್ಥಾಪಿಸಿ ಸಹಸಾರು ಮಂದಿಗೆ ವಿದ್ಯಾಮೃತ ಪಾನಮಾಡುವ ಸೌಭಾಗ್ಯವನ್ನು
ಕರುಣಿಸಿರುವಿರಿ. ತಮ್ಮ ಪ್ರತಿಭೆಗೆ ಯೋಗ್ಯವೆನಿಸುವಂತೆ ಮೈಸೂರು ರಾಜಮನೆತನ
ದವರು ಇಲ್ಲಿಯವರೆವಿಗೂ ಸಕಲ ಸನ್ಮಾನಗಳನ್ನೂ ದಯಪಾಲಿಸುತ್ತಲೇ ಬಂದಿರುವರು
ಮೈಸೂರು ಸರ್ಕಾರದವರು ಪ್ರಥಮ ದರ್ಜೆಯ ಗೌರವವನ್ನು ಇತ್ತಿರುವುದು ನಮ್ಮ
ದೇಶಕ್ಕೆ ಉಚಿತ ಸನ್ಮಾನವಾಗಿದೆ. ತಾವು ಪ್ರತಿನಿತ್ಯವೂ ಹನ್ನೆರಡು ಘಂಟೆಗಳವರೆಗೆ
ಪದ್ಮಾಸೀನರಾಗಿ ಮಹಾಮಂತ್ರ ಜಪಾನುಷ್ಠಾನದಲ್ಲಿ ತೊಡಗಿರುವುದಲ್ಲದೆ ಕೇವಲ
ಮೂರುವರೆ ವರ್ಷ ಅವಧಿಯಲ್ಲಿ ಎಪ್ಪತ್ತೈದು ಲಕ್ಷ ಮಹಾ ಮಂತ್ರವನ್ನು, ಒಂದು
ಲಕ್ಷ ದೇವೀಸಪಾರ್ಣವವನ್ನೂ ಮುತ್ತು ಪೋಣಿಸಿದಂತೆ ಲಿಖಿಸಿ ಜಗತ್ಕಲ್ಯಾಣಕ್ಕಾಗಿ
ಅರ್ಪಿಸಿರುವುದನ್ನು ಕಂಡು ಮೈಸೂರು ಧರ್ಮ ಪ್ರಭುಗಳಾದ **ಶ್ರೀ ಜಯಚಾಮ
ರಾಜೇಂದ್ರ** ಒಡೆಯರ್ ಬಹದ್ದೂರ್ ಅವರೇ ಮುಂತಾದ ಅನೇಕ ಮಹನೀಯರು
**ಸಂತೋಷಪಟ್ಟಿದ್ದಾರೆ.**

ರಾಷ್ಟ್ರಪತಿ ಡಾ|| ರಾಧಾಕೃಷ್ಣನ್‌ರವರು ಜಗದ್ಗುರುಗಳವರಿಂದ ರಚಿತವಾದ
ಮಂತ್ರಪುಸ್ತಕವನ್ನು ವೀಕ್ಷಿಸುತ್ತಿರುವುದು.



ರುಣಾಳುಗಳೇ,

ಇದ್ದೆಡೆಯಿಂದ ಚಲಿಸಲಾರದಂತಹ ವಯಸ್ಸಿನಲ್ಲೂ ನಮ್ಮ ಸಮಿತಿ ಮತ್ತು ಇತ್ತ ಡೆಯ ಸ್ತ್ರೀ ಪುರುಷ ಜನತೆಗೆ ದರ್ಶನಾಶೀರ್ವಾದ ನೀಡಲು ದಯಮಾಡಿಸಿರುವುದು ನಮ್ಮ ಭಾಗ್ಯೋದಯವಾಗಿದೆ. ವಿಶ್ವಧರ್ಮವಾದ ಶಿವಾದ್ವೈತ ತತ್ತ್ವಗಳನ್ನು ಪ್ರಚಾರ ಮಾಡಲು ಸ್ಥಾಪನೆಯಾಗಿರುವ ಈ ಸಮಿತಿಯು ಚಿರಸ್ಥಾಯಿಯಾಗಿ ನಡೆಯಲು ಸಂಸ್ಥಾನದ ಉದಾರ ಕೃಪಾಶೀರ್ವಾದದ ನೆರವನ್ನು ಬೇಡುತ್ತೇವೆ.

**ಶ್ರೀ ಗುರು ಕುಮಾರಾಶ್ರಮ.** **ಶಿವಾದ್ವೈತ ತತ್ತ್ವ ಪ್ರಚಾರ ಸಮಿತಿ ಸದಸ್ಯರು**

ಗಿರಿಯಾಪುರ

3-3-1956

॥ ಶ್ರೀ ಶಿವರಾತ್ರೀಶ್ವರ ಪ್ರಸನ್ನ ॥

ಶ್ರೀ ಸುತ್ತೂರು ವೀರಸಿಂಹಾಸನಾಸೀನ ಪಟ್ಟದ ಶಿವರಾತ್ರಿ ಸ್ವಾಮಿಗಳವರ ಸುವರ್ಣಮಹೋತ್ಸವ ಸಮಯದಲ್ಲಿ

ಶ್ರೀಮಠದ ಶಿಷ್ಯಮಂಡಳಿಯವರು ಶ್ರದ್ಧಾಭಕ್ತಿಪೂರ್ವಕವಾಗಿ ಶ್ರೀಗಳವರಿಗೆ ಅರ್ಪಿಸಿದ

## ವಿಜ್ಞಾಪನಾ ಪತ್ರಿಕೆ.

ಮಹಾಸ್ವಾಮಿ,

ತಾವು ವೀರಶೈವ ಸಮಾಜದ ಪ್ರಮುಖ ಪೀಠಗಳಲ್ಲೊಂದಾದ ಶ್ರೀ ಸುತ್ತೂರು ವೀರಸಿಂಹಾಸನವನ್ನು ಅಲಂಕರಿಸಿ ಅರ್ಧ ಶತಮಾನದಿಂದಲೂ ಶ್ರೀ ಮಠದ ಸ್ಥಾನಮಾನಗಳನ್ನು ಅಭಿವೃದ್ಧಿಪಡಿಸಿ ಸಮಾಜದ ಕ್ಷೇಮಚಿಂತನೆಗಾಗಿ ಅವಿಶ್ರಾಂತವಾಗಿ ದುಡಿಯುತ್ತಿದ್ದೀರಿ. ತಮ್ಮ ಅಪಾರವಾದ ಸಮಾಜಸೇವೆಯ ಕಾರ್ಯಗಳ ವಿಷಯದಲ್ಲಿ ನಮಗಾಗಿರುವ ಸಂತೋಷದ ಫಲವಾಗಿ ಕೃತಜ್ಞತೆಗಳನ್ನು ತಮ್ಮ ಸನ್ನಿಧಿಯಲ್ಲಿ ನಿವೇದಿಸಲು ಅಪ್ಪಣೆ ಬೇಡುತ್ತೇವೆ.

ವೀರಶೈವ ಸಮಾಜದ ವಿಷಯದಲ್ಲಿ ಬಹಳವಾಗಿ ಆದರಾಭಿಮಾನಗಳನ್ನು ತೋರುತ್ತಿರುವ ಘನ ಸರ್ಕಾರದ ದಿವಾನ್ ಸಾಹೇಬರವರಾದ 'ಪ್ರಧಾನ ಶಿರೋಮಣಿ' ಶ್ರೀಮಾನ್ ನ್ಯಾಯಮತಿ ಮಾಧವರಾಯರು, ಮಂತ್ರಿಗಳು, ನ್ಯಾಯಮೂರ್ತಿಗಳು, ಅಧಿಕಾರವರ್ಗದವರು ಮತ್ತು ಎಲ್ಲ ಮಾಹನೀಯರ ಸಮಕ್ಷಮದಲ್ಲಿ ನಮ್ಮ ಅಳಿಲಸೇವೆಯನ್ನು ತಮಗೆ ಅರ್ಪಿಸಲು ಸಂತೋಷಿಸುತ್ತೇವೆ.

ಪುಣ್ಯಭೂಮಿಯಾದ ಈ ಭರತಖಂಡದಲ್ಲಿ ಪ್ರಾಚೀನಕಾಲದಿಂದಲೂ ನೆಲೆಗೊಂಡಿರುವ ವೀರಶೈವ ಧರ್ಮವು ಆಯಾ ಕಾಲಗಳಲ್ಲಿ ಅವತರಿಸಿದ ಮತಾಚಾರ್ಯರಿಂದ ಉಜ್ಜೀವಿತವಾಗಿದೆ. ಇವರಲ್ಲೊಬ್ಬರಾದ ಭಗವತ್ಪಾದ ಶ್ರೀ ರೇಣುಕಾಚಾರ್ಯರು ಸ್ಥಾಪಿಸಿರುವ ಅನೇಕ ಪೀಠಗಳಲ್ಲಿ ಶ್ರೀ ಸುತ್ತೂರು ಪೀಠವೂ ಒಂದಾಗಿದೆ. ಇಂದಿಗೆ ಸುಮಾರು ಒಂಭೈನೂರು ವರ್ಷಗಳಿಗೆ ಪೂರ್ವದಲ್ಲಿ ಶ್ರೀ ರೇವಣಸಿದ್ದೇಶ್ವರ ಬೆಟ್ಟದಿಂದ

ಚಿತ್ರೈಸಿದ ಶ್ರೀ ಶಿವರಾತ್ರಿಸ್ವಾಮಿಗಳವರು ಶ್ರೀ ಸುತ್ತೂರು ವೀರಸಿಂಹಾಸನವ
ಅಲಂಕರಿಸಿದರು. ಅವರ ಅನಂತರ ಈ ಪೀಠವನ್ನಲಂಕರಿಸಿದ್ದ ಅನೇಕ ಗುರುವರ
ಕಾಲದಲ್ಲಿ ರಾಜೇಂದ್ರ ಚೋಳರು, ಹೊಯ್ಸಳರು, ವಿಜಯನಗರದ ಅರ
ಈ ಪೀಠಕ್ಕೆ ಅನೇಕ ಉಂಬಳಿಗಳನ್ನು ಹಾಕಿಕೊಟ್ಟಿರುವ ಸಂಗತಿಯು ಚರಿತ್ರೆಯಿಂದ
ಶಿಲಾಶಾಸನಗಳಿಂದಲೂ ವ್ಯಕ್ತಕಾಗಿದೆ. ಮತ್ತು ಈ ಪೀಠದ ಹಿಂದಿನ ಸ್ವಾಮಿಗ
ರಿಗೆ ಹಿಂದೆ ಕಾಶೀ, ರಂಭಾಪುರೀ, ಮೇಲಣಗವಿ, ರಾಜಾಪುರ ಮತ್ತು ಬಳ್ಳಿನಪು
ಮಠಾಧಿಪತಿಗಳು ಬರೆದುಕೊಂಡಿರುವ ಪತ್ರಗಳ ಒಕ್ಕಣೆಗಳಿಂದ ಈ ಪೀಠದ ಸ
ಮಾನಗಳು ಸ್ಥಿರಪಡುತ್ತವೆ. ಮತ್ತು ಈ ಪೀಠದಲ್ಲಿ ಮುಂಡಿಸಿದ್ದ ಅನೇಕಮೂರ್ತಿ
ಪ್ರೌಢವರ್ಗದ ಕವಿಗಳಾಗಿಯೂ ವಚನಕಾರರಾಗಿಯೂ ಇದ್ದ ಅಂಶವು ಇತಿಹ
ದಿಂದ ಸ್ಥಿರಪಟ್ಟದೆ.

ಶಾರದೆಯ ಮಣಿಪೀಠದಂತೆ ವಿರಾಜಿಸುತ್ತಿದ್ದ ಈ ಪೀಠವು ತಮ್ಮ ಅಧಿಕಾರ
ಧಿಯಲ್ಲಿ ಲಕ್ಷ್ಮಿಗೂ ನೆಲೆಯೆನೆಸಿ ಅಭೂತ ಪೂರ್ವವಾದ ತೇಜಸ್ಸಿನಿಂದ ಬೆಳಗುತ್ತಿ
ಇಂದಿಗೆ ಐವತ್ತುವರ್ಷಗಳಹಿಂದೆ ತಮ್ಮ ಬಾಲ್ಯವಯಸ್ಸಿನಲ್ಲಿಯೇ ಶ್ರೀ ಮಠದ ಅಧಿ
ಸೂತ್ರಗಳನ್ನು ಪರಿಗ್ರಹಿಸಿ ವಿದ್ಯಾಭ್ಯಾಸ ಮಾಡಿದುದಲ್ಲದೆ ಸುಮಾರು 7–8 ವರ್ಷ
ಕಾಲ ಕನ್ನಡನಾಡಿನ ಅನೇಕ ಭಾಗಗಳಲ್ಲಿ ದೇಶಸಂಚಾರಮಾಡಿ ಲೋಕಾನುಭವವ
ಪಡೆದು ಅಭ್ಯುದಯ ನಿಶ್ಶ್ರೇಯಸ್ಸುಗಳಿಗೆ ಬೇಕಾದ ಲೌಕಿಕ ಪರಮಾರ್ಥಗಳ ಸ
ಸಂಗ್ರಹಮಾಡಿರುತ್ತೀರಿ.

ತಾವು ಪೀಠಾರೋಹಣ ಮಾಡಿದನಂತರ ಅನೇಕ ಲಕ್ಷ ರೂಪಾಯಿಗಳ
ಬಾಳುವ ಆಸ್ತಿಗಳು ನೂತನವಾಗಿ ಸಂಪಾದಿಸಲ್ಪಟ್ಟವೆ. ತಮ್ಮ ಕಾಲದಲ್ಲಿ ಲಕ್ಷಾಂ
ದ್ರವ್ಯ ವ್ಯಯದಿಂದ ಮಠ, ಸೋಮೇಶ್ವರ ದೇವಸ್ಥಾನ ಮತ್ತು ಗದ್ದುಗೆಗಳ ಜೀರ್ಣೋ
ದ್ಧಾರವಾಗಿರುವುದಲ್ಲದೆ ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಆಸ್ಪತ್ರೆ, ವಿಶ್ರಾಂತಿ
(Rest House) ಪ್ರೈಮರಿಸ್ಕೂಲ್, ನಂಜನಗೂಡಿನಲ್ಲಿ ವೀರಶೈವ ವಿದ್ಯಾ
ನಿಲಯ ಮೈಸೂರಿನಲ್ಲಿ ಸ್ಥಾಪಿತವಾಗಿರುವ ಕ್ಯಾತನಹಳ್ಳಿ ಸಾಹುಕಾರ್ ಸಿದ್ದಲಿಂ
ನವರ ಸಂಸ್ಕೃತ ವೇದ ಪಾಠಶಾಲೆ ಮತ್ತು ಈಚೆಗೆ ವಿಶ್ವವಿದ್ಯಾನಿಲಯದ ವೀರ
ವಿದ್ಯಾರ್ಥಿಗಳಿಗಾಗಿ ರಚಿಸಿರುವ ನಿಲಯಗಳು ತಮಗಿರುವ ವಿದ್ಯಾಭಿಮಾನ ಎಲ್ಲಕ್ಕಿ
ಹೆಚ್ಚಾಗಿ ದೇಶಾಭಿಮಾನಗಳನ್ನು ವ್ಯಕ್ತಗೊಳಿಸುತ್ತವೆ.

ಈ ರೀತಿಯಾಗಿ ನಾನಾಮುಖವಾಗಿ ಎಸಗುತ್ತಿರುವ ತಮ್ಮ ಆದರ್ಶ ಕೆ
ಗಳನ್ನು ಪರಾಂಬರಿಸಿದ ಕೀರ್ತಿಶೇಷರಾದ ಶ್ರೀ ಮನ್ನಾಲ್ಕಡಿ ಕೃಷ್ಣರಾಜವಡೆಯ
ಬಹದ್ದೂರ್ ಮಹಾಪ್ರಭುಗಳವರು ತಮಗೆ ಸನ್ಮಾನ ಸಲ್ಲಿಸಿದುದಕ್ಕಾಗಿ ನಾವು ತುಂ
ಹೆಮ್ಮೆಪಡುತ್ತೇವೆ. ತಾವು ಅನೇಕ ಮಂದಿ ಪಂಡಿತರಿಗೂ ಕವಿಗಳಿಗೂ ಉದಾರ
ಯವಿತ್ತು ಗ್ರಂಥ ಸಂಪಾದನೆ ಮತ್ತು ಗ್ರಂಥ ಪ್ರಕಟಣೆಗಳನ್ನು ಮಾಡುತ್ತಿರುವ
ಗಮನಾರ್ಹವಾಗಿದೆ.

ತಮ್ಮ ಸ್ವಂತಪರಿಶ್ರಮದಿಂದ ವಿಶೇಷವಾದ ಈ ಆಸ್ತಿಯು ಸಮಾಜಕ್ಕೆ ನೆರವಾಗಬೇಕೆಂಬ ಮಹದುದ್ದೇಶದಿಂದ ತಾವು ಶಿಷ್ಯವರ್ಗದ ಮತ್ತು ಸರ್ಕಾರದವರ ಅವಗಾಹನೆಗೆ ಮಠದ ಆಯವ್ಯಯಗಳನ್ನು ಆಗಾಗ್ಗೆ ಪ್ರಕಟಮಾಡುತ್ತಿರುವುದು ಆದರ್ಶವಾಗಿದೆ. ಮುಡುಕುತೊರೆ ಮತ್ತು ಕಬ್ಬಳ್ಳಿಗಳಲ್ಲಿ ನೆರೆದಿದ್ದ ವೀರಶೈವ ಮಹಾಸಭೆಗಳಲ್ಲಿ ತಾವು ಅಗ್ರಾಸನವನ್ನಲಂಕರಿಸಿ ಅಪ್ಪಣೆ ಕೊಡಿಸಿರುವ ಹಿತವಚನಗಳಿಗನುಸಾರವಾಗಿ ತಮ್ಮ ಮಠದ ಸಹಾಯದಿಂದ ನಡೆಯುವ ಸಾವಿರಾರು ಧರ್ಮದೀಕ್ಷೆ, ವಿವಾಹ ಮತ್ತು ಆರಾಧನೆಗಳು ಅನೇಕ ಬಡಬಗ್ಗರ ಜೀವನವನ್ನು ಉಜ್ಜೀವನಗೊಳಿಸುತ್ತಿವೆ. ಮಠದ ಸುತ್ತ ಮುತ್ತಲಿನ ಯಾವ ಕಟ್ಟಡವಾಗಲಿ, ಸಂಸ್ಥೆಯಾಗಲಿ, ಉದ್ಯಮವಾಗಲಿ ಮಹಾತ್ಮರಾದ ತಮ್ಮ ವರದಹಸ್ತದ ಆಶ್ರಯದಿಂದ ತಪ್ಪಿಸಿಕೊಂಡಿಲ್ಲ.

ವ[illegible]ಯವಾದ ಈ ಪೀಠದ ಅಧಿಕಾರ ಸೂತ್ರಗಳನ್ನು ಹಿಡಿದು ನಡೆಯಿಸಿ …ಡುಬರಲು ತಾವು ದೂರದೃಷ್ಟಿಯಿಂದ ತಮ್ಮಂತೆಯೇ ಶಿವಪೂಜಾನಿಷ್ಠರೂ, ವಿದ್ಯಾವಿನಯ ಸೌಶೀಲ್ಯಾದಿ ಗುಣಪಂಡಿತರೂ ವರ್ಧಿಷ್ಣುಗಳೂ ಆದ ಶ್ರೀ ಶಿವರಾತ್ರಿರಾಜೇಂದ್ರಸ್ವಾಮಿಗಳವರಿಗೆ ಮಠದ ಉತ್ತರಾಧಿಕಾರವನ್ನು ವಹಿಸಿ ತಮ್ಮ ಉದಾತ್ತ ಮಾರ್ಗವಲ್ಲಿ ಅವರಿಗೆ ಶಿಕ್ಷಣಕೊಡಿಸುತ್ತಿರುವುದು ನಮ್ಮ ಸಮಾಜದ ಸೌಭಾಗ್ಯವೆಂದು ಭಾವಿಸಬೇಕಾಗಿದೆ.

ಸಮಾಜದ ಕಲ್ಪಕುಂಜದಂತೆ ಬೆಳಗುತ್ತಿರುವ ತಮಗೂ ಮತ್ತು ತಮ್ಮ ಕರಕಮಲ ಸಂಜಾತರಾದ ಶ್ರೀ ಮರಿಸ್ವಾಮಿಗಳವರಿಗೂ ಪರಮಾತ್ಮನು ದೀರ್ಘಾಯುರಾರೋಗ್ಯವನ್ನಿತ್ತು ತಮ್ಮಿಂದ ನಮ್ಮ ಸಮಾಜಕ್ಕೂ ನಾಡಿಗೂ ಸಲ್ಲಬೇಕಾದ ಎಲ್ಲಸೌಕರ್ಯಗಳೂ ಒದಗುವಂತೆ ಅನುಗ್ರಹಿಸಿ ಮುಂದಿನ ವಜ್ರಮಹೋತ್ಸವವು ಇತೋಪ್ಯತಿಶಯ ವೈಭವದಿಂದ ನೆರವೇರುವ ಸನ್ಮಂಗಲವನ್ನು ದಯಪಾಲಿಸಲೆಂದು ವಿಶ್ವಾತ್ಮನಲ್ಲಿ ಮೊರೆಯಿಡುತ್ತೇವೆ.

ಮೈಸೂರು,
30-9-1944

ಇಂತು
ಶ್ರೀ ಪೀಠದ ಪಾದಸೇವಕರಾದ
ವೀರಶೈವ ಶಿಷ್ಯಮಂಡಳಿ

ಕೊಯಮುತ್ತೂರು ಜಿಲ್ಲಾ ಕೊಂಡಯಂಪಾಳ್ಯದಲ್ಲಿ ನಡೆದ ಶಿವದೀಕ್ಷಾ
ಮಹೋತ್ಸವದ ಸಂದರ್ಭದಲ್ಲಿ
ಶ್ರೀಮದ್ವೇದಾಗಮನ್ತ ಪ್ರತಿಪಾದಿತ ವಿಮಲ ವೀರಶೈವಾಚಾರ ಪ್ರತಿಷ್ಠಾಪನಾಚಾಯ
ಶ್ರೀಮಜ್ಜಗದ್ಗುರು ಶ್ರೀ ರೇಣುಕಾಚಾರ್ಯಪರಂಪರಾನುಯಾತ
ಶ್ರೀ ಶಿವರಾತ್ರೀಶ್ವರ ಗುರುಚರಣಾನುಗತ ಸುತ್ತೂರು
ವೀರಸಿಂಹಾಸನಮಠಾಧೀಶ್ವರ
ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರ ದಿವ್ಯಸನ್ನಿಧಿಯಲ್ಲಿ
ಭಕ್ತ ಮಂಡಲಿಯವರು ಅರ್ಪಿಸಿದ

# ಬಿನ್ನವತ್ತಳಿಕೆ

ಮಹಾಸ್ವಾಮೀ,

ತಾವು ತಮ್ಮ ಘನವಾದ ಅಧ್ಯಕ್ಷತೆಯಲ್ಲಿ, ಲಿಂಗಾಯಿತ ಭಕ್ತರೆಂದು ಕರೆಯ ಡುತ್ತಿರುವ ನಮ್ಮ ಮತ್ತು ಇತರ ಸ್ವಜನರನೇಕರ ಪ್ರಾರ್ಥನೆಯಂತೆ ನಮ್ಮನ್ನು ವೀ ಶೈವದೀಕ್ಷೆಯಿಂದ ಪುನೀತರನ್ನಾಗಿ ಮಾಡಿದ ಈ ಸಂದರ್ಭದಲ್ಲಿ ನಾವು ತಮ್ಮ ಭ ವಾತ್ಸಲ್ಯಕರುಣಾನುಗ್ರಹ ಕಾರ್ಯಗಳ ಮಹಿಮೆಗಾಗಿ ನಮ್ಮೆಲ್ಲರ ಅನಂತಾನ ಪ್ರಣಾಮಪೂರ್ವಕ ಕೃತಜ್ಞತೆಯನ್ನು ಸಮರ್ಪಿಸುತ್ತೇವೆ.

ತಮ್ಮ ಪೀಠದ ಪರಂಪರೆಗೆ ತಕ್ಕಂತೆ ಶ್ರದ್ಧಾಭಕ್ತಿಜ್ಞಾನವೈರಾಗ್ಯಸನ್ನನ್ನರಾ ಸಮಾಜದ ಕಲ್ಯಾಣಕ್ಕಾಗಿ ಅನ್ನ ವಿದ್ಯಾ ವಿವೇಕದಾನಗಳಿಂದ ಶ್ರೀ ಮದ್ಬಸವಾ ಪ್ರಮಥರ ದಾಸೋಹಹಂಭಾವದಲ್ಲಿ ಮಗ್ನರಾಗಿ, ಅತ್ಯುಚ್ಚವಾದ ಆದರ್ಶದ ದಾರಿಯ ಪಾದಗಳನ್ನು ಬೆಳೆಯಿಸುತ್ತಿರುವ ತಮ್ಮ ಕಾರುಣ್ಯಕ್ಕೆ ಪಾತ್ರರಾಗಿರುವದು ನ ಪರಮಸೌಭಾಗ್ಯವೆಂದು ನಾವು ಭಾವಿಸುತ್ತೇವೆ.

ತಮ್ಮಂತಹ ಸದ್ಗುರುಗಳ ಕೃಪಾದೃಷ್ಟಿಗೆ ಸಂದಿರುವ ನಾವೂ ನಮ್ಮ ವಂಶಜರ ಇನ್ನು ನಮ್ಮ ಪೂರ್ವಜರಂತೆ ನಮ್ಮ ಆಚಾರವಿಚಾರಗಳನ್ನು ಸುಧಾರಿಸಿಕೊಂಡು ವಿ ಶೈವ ನಿಷ್ಠಾಪರರಾಗಿ ಜೀವನವನ್ನು ಸಾರ್ಥಕಪಡಿಸಿಕೊಳ್ಳುವಂತೆ ನಮ್ಮನ್ನು ಅನುಗ್ರ ಸುತ್ತಿರಬೇಕೆಂದು ಸಾಷ್ಟಾಂಗ ನಮಸ್ಕಾರಪೂರ್ವಕವಾಗಿ ಬೇಡಿಕೊಳ್ಳುತ್ತೇ ಮಹಾಸ್ವಾಮಿ.

ತಮ್ಮ ಭಕ್ತರಾದ

ಎಸ್.ಎಂ. ಸುಬ್ಬಯಗೌಡರು, ಎಂ. ನಂಜಪ್ಪಗೌಡ

ಕೊಂಡಯಂಪಾಳ್ಯ, ಬಿಳಿಕಲ್ಲಗೌಡರು, ಬಿ. ಮಹಿಪಿನಯ್ಯಗೌಡ

ತಾ|| 12-12-48 ಆಯ್ಯಾಸ್ವಾಮಿಗೌಡರು, ಕೆ. ಕೆಂಪಣ್ಣಗೌಡ

ಕಟ್ಟಿಮನೆ ಚನ್ನಪ್ಪಗೌಡರು, ಎಸ್.ಎಂ ಕೆಂಪೇಗೌಡ

ಮಾರಪ್ಪಗೌಡರು, ಕೆ.ಕಂದಸ್ವಾಮಿಗೌಡರು, ನಂಜುಂಡೇಗೌಡರು (ಇತ್ಯಾ

ಶ್ರೀ ಸುತ್ತೂರು ವೀರಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಧರ್ಮಸ್ಥಳ ದಲ್ಲಿ ಸೇರಿದ ಸರ್ವಧರ್ಮ ಸಮ್ಮೇಳನದಲ್ಲಿ ಒಪ್ಪಿಸಿದ

# ಬಿನ್ನವತ್ತಳೆ

ಪೂಜ್ಯ ಮಹಾಸ್ವಾಮಿಯವರೆ,

ಪರಮ ತಪೋಧನರೂ ವಿದ್ಯಾಭಿಮಾನಿಗಳೂ ಆದ ತಾವು ನಮ್ಮ ಪ್ರಾರ್ಥನೆ ಯನ್ನು ಮನ್ನಿಸಿ ಈ ಪವಿತ್ರ ಕ್ಷೇತ್ರಕ್ಕೆ ಆಗಮಿಸಿರುವುದಕ್ಕಾಗಿ ತಮಗೆ ಶ್ರದ್ಧಾಭಕ್ತಿ ಪೂರ್ವಕವಾದ ಅನಂತ ಪ್ರಣಾಮಗಳನ್ನು ಅರ್ಪಿಸುತ್ತೇವೆ.

ಪುಣ್ಯಭೂಮಿಯಾದ ಈ ಭರತಖಂಡದ ಶ್ರೇಷ್ಠ ಸಂಸ್ಕೃತಿಯ ಪ್ರತೀಕವಾಗಿರುವ ಅನೇಕ ಮತಧರ್ಮಗಳು ಅತ್ಯಂತ ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾಗಿವೆ. ಜನತೆಯ ಅಜ್ಞಾನಾಂಧಕಾರವನ್ನು ಅಂದಂದಿಗೆ ಹೋಗಲಾಡಿಸಿ ದಿವ್ಯಜ್ಞಾನಬೋಧ ನೆಯ ಮೂಲಕ ಸಂಸ್ಕೃತಿಯ ನಂದಾದೀವಿಗೆಯನ್ನು ನಂದದಂತೆ ಬೆಳಗಿಸುತ್ತ ಬಂದಿ ರುವ ಕೀರ್ತಿ ಮತಾಚಾರ್ಯರಿಗೆ ಮುಡುಪಾಗಿದೆ. ಮಹಾವೀರ, ಬುದ್ಧ, ರೇಣುಕ, ರಾಮಾನುಜ, ಮಧ್ವ, ದಯಾನಂದ ಮುಂತಾದ ಆಚಾರ್ಯರೂ, ಅಲ್ಲಮಪ್ರಭು, ಬಸವ, ಚನ್ನಬಸವ, ಅಕ್ಕಮಹಾದೇವಿ, ಮೀರಾ, ಚೈತನ್ಯ, ರಾಮಕೃಷ್ಣ ಪರಮಹಂಸ ವಿವೇಕಾನಂದ, ಅರವಿಂದ, ಮಹಾತ್ಮಾ ಗಾಂಧಿ ಮುಂತಾದ ಅನುಭಾವಿಗಳೂ ಈ ಜ್ಞಾನಮಾರ್ಗದ ಮೈಲುಗಲ್ಲುಗಳಾಗಿ ಅಂದಂದಿಗೆ ಅವತರಿಸಿ ಜನತೆಯ ಕೈಹಿಡಿದು ನಡೆಯಿಸಿದ ಮಾರ್ಗದರ್ಶಕರಾಗಿದ್ದಾರೆ.

ಪ್ರಾಚೀನವಾದ ಪ್ರಸಿದ್ಧ ವೀರಶೈವ ಮತಾಚಾರ್ಯ ಪೀಠಗಳಲ್ಲೊಂದಾದ ಸುತ್ತೂರು ವೀರಸಿಂಹಾಸನ ಮಠವು ಜಗದ್ಗುರು ಶ್ರೀ ರೇಣುಕಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಅನೇಕ ಧರ್ಮಪೀಠಗಳಲ್ಲಿ ಒಂದಾಗಿದೆಯೆಂದು ತಿಳಿದುಬಂದಿದೆ. ಸುಮಾರು ಒಂದು ಸಹಸ್ರ ವರ್ಷಗಳ ಹಿಂದಿನಿಂದ ಈ ಪೀಠದ ಆಚಾರ್ಯರು ರಾಜಾ ಧಿರಾಜಮಾನ್ಯರಾಗಿ ವಿರಾಜಿಸುತ್ತ ಬಂದಿರುವ ಅಂಶ ಶಿಲಾಶಾಸನಗಳಿಂದಲೂ ಸಾಹಿತ್ಯ ಚರಿತ್ರೆಯಿಂದಲೂ ವ್ಯಕ್ತವಾಗುತ್ತದೆ. ಕಂಚಿಯ ಒಂದನೆಯ ರಾಜೇಂದ್ರ ಚೋಳ, ಹೊಯ್ಸಳ, ವಿಜಯನಗರದ ಅರಸರು, ಉಮ್ಮತ್ತೂರು ಪಾಳೆಯಗಾರರು ಮತ್ತು ಮೈಸೂರು ರಾಜರು, ಈ ಪೀಠಕ್ಕೆ ಸಲ್ಲಿಸಿರುವ ಭಕ್ತಿಗೌರವಗಳು ಪೀಠದ ಹಿರಿಮೆಗೆ ನಿದರ್ಶನವಾಗಿವೆ.

ಅನೇಕ ಶತಮಾನಗಳಿಂದ ಸಿರಿಸರಸ್ವತಿಯರ ನೆಲೆವೀಡಾದ ಈ ಪುಣ್ಯಪೀಠ ವನ್ನು ಅಲಂಕರಿಸಿದ ಆಚಾರ್ಯರು ಕವಿಗಳೂ ವಚನಕಾರರೂ ಆಗಿರುವ ವಿಚಾರವು ಅತಿ ಮಹತ್ವವಾದುದು. "ವೃಷಭೇಂದ್ರ ಪುರಾಣ", "ಚೋಳ ರೇಣುಕ ಸಂವಾದ ಟೀಕೆ", "ಆಮುಗಿದೇವಯ್ಯನ ಸಾಂಗತ್ಯ" ಮುಂತಾದ ಗ್ರಂಥಗಳನು

ರಚಿಸಿದ ಕವಿವರ್ಯರೂ, ವಚನಶಾಸ್ತ್ರವಿಶಾರದರಾದ ಘನಲಿಂಗಿಗಳೂ ಈ ಪೀಠಾಧಿಪತಿಗಳಾಗಿದ್ದುದು ಗಮನಾರ್ಹವಾದ ಅಂಶವಾಗಿದೆ. ಮಹಾಮಹಿಮರಾಗಿದ್ದ ಮಲೆಯ ಮಾದೇಶ್ವರ ಶಿವಯೋಗಿಗಳು ಈ ಪೀಠಾಚಾರ್ಯರ ಅನುಗ್ರಹಕ್ಕೆ ಪಾತ್ರರಾಗಿದ್ದರೆಂಬುದು ಈ ಪೀಠಾಧಿಪತಿಗಳ ತಪೋನಿಷ್ಠೆಯನ್ನು ಸಾರುತ್ತದೆ. ಇಂಥ ಮಹಿಮಾಯುತವಾದ ಪುಣ್ಯಪೀಠವನ್ನು ಅಲಂಕರಿಸಿ ತಾವು ಅರವತ್ತು ವರ್ಷಗಳಿಂದ ಅವ್ಯಾಹತವಾಗಿ ಆತ್ಮಕಲ್ಯಾಣ ಲೋಕೋದ್ಧಾರಕ್ಕಾಗಿ ಶ್ರಮಿಸುತ್ತಿರುವುದನ್ನು ತಿಳಿದು ನನಗೆ ಮಹದಾನಂದವಾಗಿದೆ. ತಾವು ಪ್ರತಿನಿತ್ಯವೂ ಹನ್ನೆರಡು ಗಂಟೆಗಳವರೆಗೆ ಪದ್ಮಾಸನಾಸೀನರಾಗಿ ಮಹಾಮಂತ್ರ ಜಪಾನುಷ್ಠಾನದಲ್ಲಿ ತೊಡಗಿರುವುದಲ್ಲದೆ, ಕೇವಲ ಮೂರು ವರ್ಷಗಳಲ್ಲಿ ಹನ್ನೆರಡು ಲಕ್ಷ ಶಿವಪಂಚಾಕ್ಷರ ಮಹಾಮಂತ್ರವನ್ನೂ ಸಹಸ್ರಾರು ಸಂಖ್ಯೆ ದೇವೀಮಹಾಮಂತ್ರಾರ್ಣವವನ್ನೂ ಮುತ್ತು ಪೋಣಿಸಿದಂತೆ ಲಿಖಿಸಿ ಜಗತ್ಕಲ್ಯಾಣಕ್ಕಾಗಿ ಅರ್ಪಿಸಿರುವುದನ್ನು ಕಂಡು ಮೈಸೂರು ಧರ್ಮಪ್ರಭುಗಳಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಅವರೇ ಮುಂತಾದ ಅನೇಕ ಮಹನೀಯರು ಸಂತೋಷಪಟ್ಟಿರುತ್ತಾರೆ.

ಲೋಕೋದ್ಧಾರಕ್ಕಾಗಿ ಹಗಲಿರುಳೂ ಶ್ರಮಿಸುತ್ತಿರುವ ತಮ್ಮ ಕಾರ್ಯಕ್ಷೇತ್ರ ಅನುಪಮವಾದುದು. ಮೈಸೂರು ಜಿಲ್ಲೆಯ ಅನೇಕ ನಗರಗಳಲ್ಲಿಯೂ ಮತ್ತು ನೀಲಗಿರಿಯಲ್ಲಿಯೂ ಸುಮಾರು ಹತ್ತು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿ 1600 ಮಂದಿ ವಿದ್ಯಾರ್ಥಿಗಳಿಗೆ ಜಾತಿಮತ ಕೋಮುಗಳ ಗಣನೆಯಿಲ್ಲದೆ ಉಚಿತ ಅಶನ ವಸತಿಗಳನ್ನು ಏರ್ಪಡಿಸಿರುವ ತಮ್ಮ ಉದಾತ್ತ ಧ್ಯೇಯವು ಸರ್ವಧರ್ಮಸಮನ್ವಯದ ಬುನಾದಿಯೆಂದು ಹೇಳುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ನಾಡು ಜಾತ್ಯತೀತವಾಗುವುದರ ಜೊತೆಗೆ ಭಾರತದ ಉಚ್ಚ ಸಂಸ್ಕೃತಿ ಸಂರಕ್ಷಕವೂ ಆಗಬೇಕೆಂಬ ಶ್ರೇಷ್ಠತತ್ವವನ್ನು ತಮ್ಮ ಆದರ್ಶಕೃತಿಯು ಸಾರುವುದೆಂದರೆ ಅತಿಶಯೋಕ್ತಿಯಲ್ಲ.

ಭಾರತ ಸಂಸ್ಕೃತಿಯ ಬಾಂಬೆಳಗೆನಿಸಿರುವ ಸಂಸ್ಕೃತ ವಿದ್ಯಾ ಪ್ರೋತ್ಸಾಹಕ್ಕಾಗಿ ತಾವು ಸ್ಥಾಪಿಸಿರುವ ಸಂಸ್ಕೃತ ಪಾಠಶಾಲೆ. ಮತ್ತು ಆದರ್ಶ ಮಠಾಧಿಪತಿಗಳ ಶಿಕ್ಷಣ ಕೇಂದ್ರವಾದ ಗುರುಕುಲಗಳೂ ಅಲ್ಲಿ ಏರ್ಪಟ್ಟಿರುವ ಯೋಗಾಭ್ಯಾಸಾದಿ ಕಾರ್ಯಕ್ರಮಗಳೂ ನಾಡಿಗೆ ಮಾರ್ಗದರ್ಶಕವಾಗಿವೆ. ತಮ್ಮ ವಿಶಾಲವಾದ ಕಾರ್ಯಕ್ಷೇತ್ರದಲ್ಲಿ ಲೋಕೋದ್ಧಾರಕ್ಕಾಗಿ ಹಗಲಿರುಳೂ ಅವಿಶ್ರಾಂತವಾಗಿ ದುಡಿಯುತ್ತಿರುವ ಕಿರಿಯ ಗುರುವರ್ಯರಾದ ಶ್ರೀ ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಯವರಿಗೆ ತಮ್ಮ ದಿವ್ಯ ತಪೋಬಲ ಹಾಗೂ ಅಮೃತಾಶೀರ್ವಾದವೇ ದಿವ್ಯ ರಕ್ಷಣೆಯೆಂದರೆ ಅತಿಶಯೋಕ್ತಿಯಲ್ಲ. ಕನ್ನಡನಾಡಿನ ಶ್ರೇಷ್ಠ ಮಠಾಧೀಶ್ವರರಾಗಿ, ಆದರ್ಶ ಮಠಾಧಿಪತಿಗಳಾಗಿ ತಪೋಧನರಾಗಿ, ಸರ್ವಧರ್ಮಸಮನ್ವಯಾಚಾರ್ಯರಾಗಿ ಮತ್ತು ವಿದ್ಯಾಪ್ರೋತ್ಸಾಹಕರಾಗಿ ವಿರಾಜಿಸುತ್ತಿರುವ ತಮಗೆ ಮೈಸೂರು ಘನ ಸರ್ಕಾರದವರು ಪ್ರಥಮ

ದರ್ಜೆಯ ಬಿರುದಾವಳಿಗಳನ್ನು ದಯಪಾಲಿಸಿರುವುದನ್ನು ಮನಗಂಡ ಭಕ್ತಕೋಟಿಯು ತಮ್ಮ ಪೀಠಾಧಿಕಾರದ ರಜತೋತ್ಸವ ಮತ್ತು ಸ್ವರ್ಣೋತ್ಸವಗಳನ್ನು ಅಭೂತಪೂರ್ವವಾಗಿ ನೆರವೇರಿಸಿದುದಲ್ಲದೆ ಇದೇ ವರ್ಷ ರಾಜಧಾನಿಯಲ್ಲಿ ತಮ್ಮ ದಿವ್ಯ ವಜ್ರಮಹೋತ್ಸವವನ್ನೂ ಸಹ ಅತ್ಯಂತ ವೈಭವದಿಂದ ನೆರವೇರಿಸಬೇಕೆಂದು ಸಂಕಲ್ಪಿಸಿರುವುದನ್ನು ಕೇಳಿ ನಮಗೆ ಅತ್ಯಂತ ಸಂತೋಷವಾಗಿದೆ. ಈ ಮಹೋತ್ಸವವು ಯಶಸ್ವಿಯಾಗಿ ನಡೆದು ಚಿರಕಾಲ ತಮ್ಮ ದಿವ್ಯಾನುಗ್ರಹವು ನಾಡಿಗೆ ಲಭಿಸಿ, ಜನತೆ ಧನ್ಯವಾಗಲೆಂದು ಅನನ್ಯಭಾವದಿಂದ ಪ್ರಾರ್ಥಿಸುತ್ತೇವೆ.

ಪರಮಪವಿತ್ರವಾದ ಈ ಪುಣ್ಯಕ್ಷೇತ್ರದಲ್ಲಿ ಪ್ರತಿವರ್ಷ ಕಾರ್ತೀಕ ಮಾಸದಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಯುತ್ತಿರುವ ಶ್ರೀ ಮಂಜುನಾಥೇಶ್ವರಸ್ವಾಮಿಯ ಲಕ್ಷದೀಪೋತ್ಸವದ ಅಂಗವಾಗಿ ಲಕ್ಷಾಂತರ ಮಂದಿ ಭಕ್ತರು ಇಲ್ಲಿಗೆ ಆಗಮಿಸುತ್ತಾರೆ. ಇಂಥ ಶುಭಸನ್ನಿವೇಶದಲ್ಲಿ ಭಾರತೀಯ ಸಂಸ್ಕೃತಿಯ ಹೆಚ್ಚಳವನ್ನು ಜನಸಾಮಾನ್ಯರಲ್ಲಿ ಉಂಟುಮಾಡಿ, ಅವರ ಧಾರ್ಮಿಕ ಭಾವನೆಯನ್ನು ಪ್ರಚೋದಿಸುವುದರ ಮೂಲಕ ಪರಸ್ಪರ ಧಾರ್ಮಿಕ ಸೌಹಾರ್ದತೆಯನ್ನು ನೆಲೆಗೊಳಿಸುವ ಸತ್ಸಂಕಲ್ಪದಿಂದ ಈ ಕ್ಷೇತ್ರದಲ್ಲಿ ಸರ್ವಧರ್ಮ ಸಮ್ಮೇಳನವನ್ನು ನಡೆಯಿಸುತ್ತಿರಲಾಗಿದೆ. ಈ ಉತ್ಸವದ ಅಂಗವಾಗಿ ಸಾಹಿತ್ಯ ಮತ್ತು ಕಲೆಗಳ ಪ್ರೋತ್ಸಾಹಕ್ಕೆ ಅವಕಾಶವನ್ನೂ ಕಲ್ಪಿಸಲಾಗಿದೆ.

ಅಧ್ಯಾತ್ಮಯೋಗನಿಷ್ಠರಾಗಿಯೂ ಲೋಕೋದ್ಧಾರಕಾರ್ಯದಲ್ಲಿ ಬದ್ಧಕಂಕಣರಾಗಿಯೂ ಅವಿಶ್ರಾಂತವಾಗಿ ದುಡಿಯುತ್ತಿರುವ ತಾವು ಕಿರಿಯ ಗುರುವರ್ಯರೊಂದಿಗೆ ಬಿಡುವುಮಾಡಿಕೊಂಡು ಈ ಸಮ್ಮೇಳನಕ್ಕೆ ಆಗಮಿಸಿ ಅಧ್ಯಕ್ಷಪೀಠವನ್ನು ಅಲಂಕರಿಸಿ ತಮ್ಮ ದಿವ್ಯೋಪದೇಶದಿಂದ ನಮ್ಮನ್ನು ಕೃತಾರ್ಥರನ್ನಾಗಿ ಮಾಡಿ ಹರಸಬೇಕೆಂದು ಕ್ಷೇತ್ರದ ವಸತಿಯಿಂದಲೂ ಮಹಾಜನರ ಪರವಾಗಿಯೂ ಶ್ರದ್ಧಾಭಕ್ತಿಪೂರ್ವಕವಾಗಿ ಪ್ರಾರ್ಥಿಸುತ್ತೇವೆ. ತಮಗೂ ಕಿರಿಯ ಗುರುವರ್ಯರಿಗೂ ಭಗವಾನ್ ಮಂಜುನಾಥೇಶ್ವರಸ್ವಾಮಿಯು ಚಿರಾಯುರಾರೋಗ್ಯ ತಪಸ್ಸಾಮ್ರಾಜ್ಯ ವೈಭವಗಳನ್ನು ಕರುಣಿಸಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ತಾ|| 23-11-1954 ಇಂತು ಸನ್ನಿಧಿಯ ಕೃಪಾಪಾತ್ರರಾದ

**ಧರ್ಮಸ್ಥಳದ ಧರ್ಮಸಮ್ಮೇಳನದ ಸ್ವಾಗತಮಂಡಲಿಯ ಸದಸ್ಯರು**

———

॥ ಓಂ ಶ್ರೀ ಗುರುಸಿದ್ಧ ಪ್ರಭುವೇ ನಮಃ ॥

ಶ್ರೀ ಸುತ್ತೂರು ವೀರಸಿಂಹಾಸನಾಧೀಶ್ವರರಾದ
ಶ್ರೀ ಜಗದ್ಗುರು ಪಟ್ಟದ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರ
ದಿವ್ಯ ಚರಣ ಸನ್ನಿಧಿಗೆ
ಅನನ್ಯ ಭಕ್ತಿಯಿಂದ ಅರ್ಪಿಸಿದ

# ಬಿನ್ನವತ್ತಳೆ

ಮಹಾನುಭಾವರೆ,

ಶ್ರೀಮನ್ನಿರಂಜನ ಜಗದ್ಗುರು ಶ್ರೀ ಗುರುಸಿದ್ಧ ಪ್ರಭುದೇವರು ನವಕಲ್ಯಾಣಮಠ ಧಾರವಾಢ ಇವರ ಪ್ಲ್ಯಾಟಿನಂ (Platinum Jubilee) ಉತ್ಸವಕ್ಕೆ ದಯಮಾಡಿಸಿ ಅದರಕಾರ್ಯಕ್ರಮಗಳನ್ನು ನಿರ್ವಹಿಸಿ ಸಾಂಗಗೊಳಿಸಿಕೊಡಬೇಕೆಂದು ತಮ್ಮ ಅಡಿದಾವರೆಗಳಲ್ಲಿ ಮಾಡಿಕೊಂಡ ಮನವಿಯನ್ನು ಮನ್ನಿಸಿ, ಸಮಾಜೋದ್ಧಾರದ ಹಲವಾರು ಕಾರ್ಯಗಳನ್ನು ಸ್ಥಗಿತಗೊಳಿಸಿ, ಇಲ್ಲಿಗೆ ದಯಮಾಡಿಸಿ, ಈ ಶುಭಸನ್ನಿವೇಶದಲ್ಲಿ ಅಧ್ಯಕ್ಷತೆ ವಹಿಸುವ ತಮಗೆ ತುಂಬು ಹೃದಯದಿಂದ ಕೃತಜ್ಞತೆಗಳನ್ನು ವ್ಯಕ್ತಪಡಿಸಿ ಸ್ವಾಗತವನ್ನು ಕೋರಿ, ನಮ್ಮ ಪ್ರೇಮಪೂರ್ವಕವಾದ ಈ ಬಿನ್ನವತ್ತಳೆಯನ್ನು ತಮಗೆ ಅರ್ಪಿಸಲು ನಮಗೆ ಅತ್ಯಾನಂದವಾಗುತ್ತಿದೆ.

ಇಂದು ಇಲ್ಲಿ ನಡೆಯಲಿರುವ ಉತ್ಸವದ ಸಲುವಾಗಿ ಸಾಧಿಸಿದ ಗುರುಮನೆ-ಅರಮನೆಗಳ ಸಂಯೋಗವು ಇಂದು ಅಪೂರ್ವ ಯೋಗವೆಂದರೆ ಪ್ರಾಯಶಃ ತಪ್ಪಾಗಲಾರದು. ರಾಜ್ಯಭಾರದಲ್ಲಿ ನಿಷ್ಣಾತರಾದ ರಾಜ್ಯಪಾಲರಾದರೂ ಅಧ್ಯಾತ್ಮ ವಿಕಾಸಕ್ಕಾಗಿ ಅಹರ್ನಿಸಿ ಹಂಬಲಿಸುತ್ತಿರುವ ಜಿಜ್ಞಾಸುಗಳು, ನಮ್ಮೀ ಉತ್ಸವದ ಉದ್ಘಾಟಕರು. ಲೌಕಿಕ ವ್ಯವಹಾರಗಳಿಂದ ಅತೀತರಾಗಿ, ತಪೋಧನರಾದ, ರಾಷ್ಟ್ರದಲ್ಲಿ ಶಿಕಣ ಪ್ರಸಾರಕ್ಕಾಗಿ ಬದ್ಧಕಂಕಣರಾದ ತಾವು ಅಧ್ಯಕ್ಷರು. ಇಂತಹ ಸುವರ್ಣ ಮತ್ತು ಸೌರಭಗಳಂತಹ ಮಧುರ ಸಮ್ಮಿಲನ ನಮ್ಮ ನಾಡಿನ ಪ್ರತಿಯೊಂದು ರಂಗದಲ್ಲಿಯೂ ಆಗಬೇಕಾಗಿದೆ. ಸರ್ವರೂ ಸದಾ ಹಂಬಲಿಸುವ ನಾಡಬಯಕೆ ಈಡೇರುವ ಮುನ್ಸೂಚನೆಯೇ ಎನ್ನುವಂತೆ ಇಂದಿನ ಸಮಾಗಮ ಶುಭಸೂಚನೆಯಾಗಿದೆಯಲ್ಲದೆ, ಅದನ್ನು ಅನಾದಿ ನಿರಂಜನ ಶರಣ ಶ್ರೀ ಗುರುಸಿದ್ಧಪ್ರಭುದೇವರೇ ಅನುಗ್ರಹಿಸಿರಬೇಕೆಂದು ನಮ್ಮೆಲ್ಲರ ತುಂಬುನಂಬಿಕೆಯಾಗಿದೆ.

ಶ್ರೀ ಗುರುಸಿದ್ಧಪ್ರಭುದೇವರು ಕ್ರಿ. ಶ. 1885ಕ್ಕೆ ಸಲ್ಲುವ ಶಾಲಿವಾಹನ ಶಕೆ 1807ನೆಯ ತಾರಣ ಸಂವತ್ಸರದಲ್ಲಿ ಹುಬ್ಬಳ್ಳಿ ನಗರದಲ್ಲಿ ಜನಿಸಿದರು. ಅವರು ವೀರಶೈವ ಷಟ್‌ಸ್ಥಲಜ್ಞಾನಿಗಳೂ, ಅನುಷ್ಠಾನದಲ್ಲಿ ಹೆಸರುಪಡೆದ ಅನುಭಾವಿಗಳೂ, ತತ್ವವೇತ್ತರೂ, ಯೋಗಕುಶಲರೂ, ಘನತಪಸ್ವಿಗಳೂ, ಸಿದ್ಧಶಿವಾನುಭವಿಗಳೂ ಆಗಿದ್ದರಲ್ಲದೆ ತಮ್ಮ ತಪಸ್ಸಿನ ಫಲವನ್ನು ಬಹು ಜನ ಭಕ್ತರಿಗೆ ನೀಡಿ ಕ್ರಿ. ಶ. 1920ರಲ್ಲಿ

[illegible] (34) [illegible]

| ಪುಸ್ತಕಗಳ ನಂಬರು | ಮಂತ್ರಗಳ ಸಂಖ್ಯೆ | | ಪುಸ್ತಕಗಳ ನಂಬರು | ಮಂತ್ರಗಳ ಸಂಖ್ಯೆ |
|---|---|---|---|---|
| 1 | 6,73,080 | | 18 | 6,41,520 |
| 2 | 8,41,824 | | 19 | 7,15,548 |
| 3 | 6,74,496 | | 20 | 5,32,176 |
| 4 | 1,56,144 | | 21 | 7,38,504 |
| 5 | 1,32,912 | | 22 } | |
| 6 | 6,54,240 | | 23 } | 9,57,792 |
| 7 | 7,18,044 | | 24 | 5,28,606 |
| 8 | (2) 10,65,744 | | 25 | 5,44,704 |
| 9 | 6,97,626 | | 26 | 4,22,316 |
| 10 | 4,66,608 | | 27 | 5,28,400 |
| 11 | 4,58,448 | | 28 | 3,59,082 |
| 12 | 10,49,952 | | 29 | 5,40,594 |
| 13 | 1,53,456 | | 30 | 7,01,190 |
| 14 | 6,97,680 | | 31 | 5,81,280 |
| 15 | 8,83,056 | | 32 | 6,61,392 |
| 16 | 8,88,042 | | 33 | 6,29,208 |
| 17 | 5,85,648 | | 34 | 2,88,252 |
| ಜುಮ್ಲಾ | 1,08,00,000 | ಜುಮ್ಲಾ | | 93,63,564 |

ಒಟ್ಟು ಜುಮ್ಲಾ 2,01,63,564

[illegible] (28-6-1951) [illegible] (19-10-1962) [illegible] (201635 64) [illegible]

[illegible]

19-10-1962

ಜಗದ್ಗುರುಗಳವರ ಮಂತ್ರಲೇಖನ ತಪಸ್ಸಿನಿಂದ ರಚಿತವಾಗಿರುವ 2 ಕೋಟಿ ಮಂತ್ರದ ಸಂಖ್ಯಾ ವಿವರಣೆ.

ಈ ಧಾರವಾಡನಗರದಲ್ಲಿಯೇ ತಮ್ಮ ಪ್ರಸಾದಕಾಯವನ್ನಿರಿಸಿ ಬಯಲಾದರು. ಅಂದಿನಿಂದ ಇಂದಿನವರೆಗೆ ತಮ್ಮ ಚೈಂದ್ವಾತ್ಮಕ ಶರೀರದಿಂದ ನವಕಲ್ಯಾಣಮಠದ ಸೂತ್ರಾನುಯಾಯಿಗಳ ಮುಖಾಂತರ ಲೋಕದೊಡನೆ ಸಂಬಂಧವನ್ನಿಟ್ಟುಕೊಂಡಿದ್ದಾರೆ.

ಪ್ರಾರ್ಥನೆಗೆ ಒಂದು ಯೌಗಿಕ ಸ್ವರೂಪವನ್ನುಕೊಟ್ಟು, ಎಲ್ಲ ಯೋಗಿಗಳಿಗಿಂತ, ಸಕಲರಿಗೆ ಸುಲಭವೂ, ಸುಗಮವೂ ಆದ ಪ್ರಾರ್ಥನಾಯೋಗಕ್ಕೆ ಮೂರ್ತಸ್ವರೂಪವನ್ನು ಕೊಟ್ಟು ಪ್ರಪ್ರಥಮವಾಗಿ ಜೋಡಿಸಿದವರು ಅನುಭಾವಿಗಳಾದ ಶ್ರೀ ಕುಮಾರಸ್ವಾಮಿಗಳವರು. ಗ್ರಾಮ ನಗರ ಮೊದಲಾಗಿ ಸಂಚರಿಸಿದೆಡೆಯಲ್ಲೆಲ್ಲ, ಮಾನವಕಲ್ಯಾಣದ ದೃಷ್ಟಿಯಿಂದ ಪ್ರಾರ್ಥನಾಯೋಗದ ಮಹಿಮೆಯನ್ನು ಜನರಿಗರುಹಿದರು. ಅವರ ವಿಚಾರಧಾರೆಗೆ ಹಾಗೂ ಪ್ರಾರ್ಥನಾಯೋಗದ ಪ್ರಭೆಗೆ ಮಾರುಹೋದ ಜನರು, ಶ್ರೀಗಳವರ ಅಪ್ಪಣೆ ಪಡೆದು ಕರ್ನಾಟಕದಲ್ಲಿ ಅಷ್ಟೇ ಅಲ್ಲದೆ, ಮಹಾರಾಷ್ಟ್ರ, ಆಂಧ್ರ, ಸೌರಾಷ್ಟ್ರ ಮುಂತಾದ ಪ್ರದೇಶಗಳಲ್ಲಿ ಪ್ರಾರ್ಥನಾಯೋಗ ಮಂಡಲಗಳನ್ನು ಸ್ಥಾಪಿಸಿಕೊಂಡಿದ್ದಾರೆ. “ಅಖಿಲ ಭಾರತ ಪ್ರಾರ್ಥನಾಯೋಗ ಮಂಡಲ” ಪ್ರತಿನಿಧಿಗಳು ಶಿವರಾತ್ರಿಯ ಶುಭಸಮಯದಲ್ಲಿ ನವಕಲ್ಯಾಣಮಠಕ್ಕೆ ಬರುತ್ತಲಿರುವರು. ಮಹಾಮಹಿಮರಾದ ಶ್ರೀ ಗುರುಸಿದ್ಧ ಪ್ರಭುಗಳ ಪ್ಲ್ಯಾಟಿನಂ ಉತ್ಸವವೂ, ನವಕಲ್ಯಾಣಮಠದ ಬೆಳ್ಳಿಯಹಬ್ಬದ ಉತ್ಸವವೂ ಮತ್ತು ಅಖಿಲಭಾರತ ಪ್ರಾರ್ಥನಾಯೋಗಮಂಡಲದ ತೃತೀಯ ಸಮ್ಮೇಲನವೂ ತಮ್ಮ ಘನ ಅಧ್ಯಕ್ಷತೆಯಲ್ಲಿ ನಡೆಯುವುದು ಯತೋಚಿತವಾಗಿದೆ.

ತಪೋಮಹಿಮರೇ,

ಆದಿಗುರು ಶ್ರೀ ಶಿವರಾತ್ರೀಶ್ವರರಿಂದ ಆರಂಭವಾದ ತಮ್ಮ ಗುರುಪರಂಪರೆ ಪ್ರಾಚೀನವಾದುದಲ್ಲದೆ ಕರ್ನಾಟಕದ ಆಧ್ಯಾತ್ಮಿಕ ಇತಿಹಾಸದಲ್ಲಿ ಒಂದು ವೈಶಿಷ್ಟ್ಯಪೂರ್ಣ ಸ್ಥಾನವನ್ನು ಪಡೆದಿದೆ. ಸುತ್ತೂರು ಪರಂಪರೆಯವರು ಆಧ್ಯಾತ್ಮಿಕ ಪ್ರಗತಿಗಷ್ಟೇ ಅಲ್ಲದೆ ಸಾಹಿತ್ಯಕ್ಕೂ ಸೇವೆಸಲ್ಲಿಸಿದ್ದಾರೆ. ಆಮುಗಿದೇವರ ಸಾಂಗತ್ಯ, ಜೋಳರೇಣುಕ ಸಂವಾದ ಟೀಕೆ, ಘನಲಿಂಗ ಶಿವಯೋಗಿವರ್ಯರ ವಚನಗಳು ಮೊದಲಾದ ಕೃತಿಗಳು ಶ್ರೀ ಮಠದ ಅಧಿಪತಿಗಳಿಂದ ರಚಿತವಾದುವು. ಒಟ್ಟಿನಲ್ಲಿ ಶ್ರೀ ಗುರುಮೂರ್ತಿಗಳು ಆಧ್ಯಾತ್ಮದ ಪರಿಮಳವನ್ನು ಎಲ್ಲೆಡೆ ಬೀರುತ್ತಾ ಬಂದಿದ್ದಾರೆ. ಪರಮಪೂಜ್ಯ ಹಿರಿಯಜಗದ್ಗುರುಗಳಾದ ಶಿವರಾತ್ರೀಶ್ವರಸ್ವಾಮಿಗಳವರು ಹಲವು ಭವ್ಯಕಟ್ಟಡಗಳನ್ನು ನಿರ್ಮಿಸಿ, ಹಲವಾರು ವರುಷಗಳಿಂದ ತಮ್ಮ ಸರ್ವಕಾಲವನ್ನೂ ಮಹಾಮಂತ್ರವನ್ನು ಬರೆಯುವುದರಲ್ಲಿ ಮುಡಿಪಾಗಿರಿಸಿ, ಬಾಹ್ಯ ಪ್ರಪಂಚದ ಅರಿವೇ ಇಲ್ಲದೆ ತನ್ಮಯರಾಗಿ, ಇದುವರೆವಿಗೆ ಎರಡುಕೋಟಿಗಳಿಗಿಂತ ಹೆಚ್ಚು ಮಂತ್ರಗಳನ್ನು ಬರೆದಿದ್ದಾರೆ. ಅಲ್ಲದೆ “ಶಿವ ಮಂತ್ರಮಹಿಮೆ” ಎಂಬ ಗ್ರಂಥವನ್ನು ಪ್ರಕಟಿಸಿದ್ದಾರೆ. ತಪೋಧನರಾದ

ಜಗದ್ಗುರುಗಳವರ ಮಹಾ ಮಂತ್ರಶಕ್ತಿಯು ಸಮಾಜವನ್ನೂ ಹಾಗೂ ದೇಶವನ್
ಸನ್ಮಾರ್ಗದಲ್ಲಿ ನಡೆಸಲಿ.

ಸತ್ಯಶುದ್ಧ ಕಾಯಕ ಪ್ರೇಮಿಗಳೆ,

ವಿದ್ಯಾಸಂಸ್ಥೆಗಳಿದ್ದ ಮಾತ್ರಕ್ಕೆ ಬಡವರಾದವರು ಅಶನವಿಲ್ಲದೆ ಅಭ್ಯಾಸಮಾ
ಲಾದೀತೇ ? ದೇಶದಲ್ಲಿ ಅಧಿಕ ಸಂಖ್ಯೆಯಲ್ಲಿರುವ ಬಡವರ ಈ ಭವಣೆಯನ್ನು ಮ
ದಂದು ಹೃದಯ ಮಮ್ಮಲನೆ ಮರುಗಿ ಕರುಣಾಳುವಾದ ತಾವು ಜಿಲ್ಲೆಯ ಮುಖ
ನಗರಗಳಲ್ಲೆಲ್ಲಾ ಉಚಿತ ಪ್ರಸಾದ ನಿಲಯಗಳನ್ನು ಸ್ಥಾಪಿಸಿ, ಎಲ್ಲ ವಿದ್ಯಾರ್ಥಿ
ವೃಂದಕ್ಕೂ ಆಶ್ರಯ ನೀಡಿ ಬಡವರ ಕೈವಾರಿಗಳೆಂದು ಸುಪ್ರಸಿದ್ಧರಾಗಿರುವುದು ಇಂದ
ಕರ್ಣಾಟಕದಲ್ಲೆಲ್ಲ ಮನೆಮನೆಯ ಮಾತಾಗಿದೆ. ವಿದ್ಯಾರ್ಥಿಗಳ ಸರ್ವತೋಮು
ಪ್ರಗತಿಯನ್ನು ಹಾರೈಸಿ, ಅವರಿಗಾಗಿ ಅಹರ್ನಿಶಿ ಶ್ರಮಿಸುವುದೇ ಪರಮಪೂಜ್ಯರಾ
ತಮ್ಮ ಸತ್ಯ ಶುದ್ಧ ಕಾಯಕವಾಯಿತು. ಕಳೆದ ಮಹಾಯುದ್ಧದ ಪರಿಣಾಮವಾ
ದೇಶದಲ್ಲಿ ಆಹಾರದ ಪರಿಸ್ಥಿತಿ ತೀವ್ರ ಮುಗ್ಗಟ್ಟಿನಲ್ಲಿದ್ದು ಇಡೀ ದೇಶದಲ್ಲಿಯೇ ಸವ
ವ್ಯಾಪಿಯಾಗಿ ಆಹಾರ ನಿಯಂತ್ರಣ ಪದ್ಧತಿ ಜಾರಿಯಲ್ಲಿದ್ದರೂ, ತಮ್ಮ ಪ್ರಸಾ
ನಿಲಯಗಳಲ್ಲಿ ಮಾತ್ರ ಪ್ರಸಾದಕ್ಕೆ ಯಾವ ನಿಯಂತ್ರಣವೂ ಬಾರದೆ ಗಂಗಾಪ್ರವಾ
ದಂತೆ ನಿರರ್ಗಳವಾಗಿ ಸಾಗಿದುದು ದಯಾಮಯರಾದ ತಮ್ಮ ಕಾಯಕದ ಪವಾ
ವೆಂದರೆ ಅತಿಶಯೋಕ್ತಿಯಾಗಲಾರದು. ಇಂತಹ ಅಭೂತಪೂರ್ವಸತ್ಯಶುದ್ಧ ಕಾ
ಕದಿಂದ ಮಹಾವಿಭೂತಿಗಳಾದ ತಮ್ಮ ಪ್ರಸಾದ ನಿಲಯಗಳಲ್ಲಿ ಉಚಿತ ಪ್ರಸಾದ ಪ
ಯುತ್ತಿರುವವರ ಸಂಖ್ಯೆ ಈಗ ದಿನವಹಿ ಸುಮಾರು ಮೂರು ಸಹಸ್ರವೆಂದರೆ ಯಾ
ಶಿಕ್ಷಣ ಪ್ರೇಮಿಗೆ ಅಭಿಮಾನವಾಗಲಿಕ್ಕಿಲ್ಲ! ಮತ್ತೆ ಯಾವ ಸಮಾಜ ಪ್ರೇಮಿಗೆ ಹ
ಹೆಮ್ಮೆಯಾಗಲಿಕ್ಕಿಲ್ಲ!

ಉಜ್ವಲ ಶಿಕ್ಷಣಾಭಿಮಾನಿಗಳೆ,

ತಮ್ಮ ಉದಾರಾಶ್ರಯದಿಂದ ಮೈಸೂರಿನಲ್ಲಿ ನಡೆಯುತ್ತಿರುವ ಸಂಸ್ಕೃತ ಪಾ
ಶಾಲೆಯು ಸರ್ವರಿಗೂ ಉಚಿತ ಪಾಠ ಪ್ರವಚನಗಳನ್ನು ಒದಗಿಸಿಕೊಡುತ್ತಿದೆ ಅ
ಅಲ್ಲದೆ ಸಂಸ್ಕೃತವನ್ನಭ್ಯಸಿಸುವವರು ಆಧುನಿಕ ಶಿಕ್ಷಣ ಕಲಿಯಲು ಅವಕಾಶ ಕಲ್ಪಿ
ಕೊಟ್ಟಿದೆ. ತಮ್ಮ ಸಂಸ್ಥೆಯ ವತಿಯಿಂದ ನಡೆಯುತ್ತಿರುವ ಎರಡು ಮೂಲ ಶಿಕ್ಷ
ವಿದ್ಯಾಪೀಠಗಳು ಮತ್ತು ನಾಲ್ಕಾರು ಪ್ರೌಢಶಾಲೆಗಳು ತಮ್ಮ ಉದಾರಾಶ್ರಯ
ಉಜ್ವಲ ನಿದರ್ಶನಗಳಾಗಿವೆ.

ಶಿವಾನುಭವ ವಿದ್ಯಾಪ್ರೇಮಿಗಳೆ,

'ಹರಪದವನೇರುವದಕ್ಕೆ ಶ್ರೀ ಗುರು ಹೇಳಿದ ಉಪದೇಶವೇ ಸೋಪಾನವಯ
ಎಂಬು ಶಿವಶರಣರು ಹೇಳಿದ್ದಾರೆ. ಶ್ರೀಗುರುವು ಅಂತಹ ಸೋಪಾನವನ್ನು ಶರ
ಬಂದ ಭಕ್ತವೃಂದಕ್ಕೆ ಕರುಣಿಸಬೇಕಾದರೆ ಗುರುಮೂರ್ತಿಗಳಾದವರೂ ಸಹ ಶಿವಾ

ಭವದಲ್ಲಿ ತೇಜ್ಞರಾಗಬೇಕಷ್ಟೆ. ಆದುದರಿಂದ ಭಕ್ತವೃಂದವನ್ನು ಉದ್ಧಾರ ಮಾಡಲು ಬದ್ಧ ಕಂಕಣರಾದ ಮಠಾಧಿಪತಿಗಳು ವಿಶೇಷ ಪರಿಣತರ ನೆರವಿನಿಂದ ವೀರಶೈವ ದರ್ಶನ ಶಾಸ್ತ್ರವನ್ನಭ್ಯಾಸಿಸಿ, ಅಧ್ಯಾತ್ಮಮಾರ್ಗದಲ್ಲಿ ಸಾಗಲು ಸಾಧನವಾಗುವಂತೆ ತಾವು 'ಜಗದ್ಗುರು ಶ್ರೀ ಶಿವರಾತ್ರೀಶ್ವರ ಗುರುಕುಲ,ವನ್ನು ಮೈಸೂರಲ್ಲಿ ಸ್ಥಾಪಿಸಿ, ಸಾಧಕರ ಯೋಗಮಾಡಲಿಕ್ಕೆ ವ್ಯವಸ್ಥೆಗೊಳಿಸಿ, ತನ್ಮೂಲಕ ಭಕ್ತವೃಂದದ ಆಧ್ಯಾತ್ಮಿಕ ಪ್ರಗತಿಗೆ ಅನುವುಮಾಡಿಕೊಟ್ಟಿರುವ ತಮ್ಮ ಮಹತ್ತರ ಕಾರ್ಯವು ಸ್ತುತಿಗೆ ಅರ್ಹವಾದುದಲ್ಲದೆ ಮತ್ತೇನು?

ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂ ಗಮಯ

ಧಾರವಾಡ
16-11-1961



ತಮ್ಮ ವಿಶ್ವಾಸ ಪಾತ್ರರಾದ
ಜ್ಯುಬಿಲಿ ಉತ್ಸವದ ಸ್ವಾಗತಾಧ್ಯಕ್ಷರು
ಮತ್ತು
ಪ್ರಾರ್ಥನಾಯೋಗ ಮಂಡಲಗಳ ಕಾರ್ಯಾಧ್ಯಕ್ಷರು

—ಶ್ರೀ ಸಿದ್ಧಲಿಂಗ ಪ್ರಸೀದ—

**ಶ್ರೀಮತ್ ಸುತ್ತೂರ ವೀರಸಿಂಹಾಸನಾಧೀಶ್ವರರೂ, ಶಿವಮಂತ್ರಿಶಕ್ತಿ ಮಹಿಮಾನ್ವಿತರೂ, ತಪೋಧನರೂ ಆದ ಶ್ರೀ ಜಗದ್ಗುರು ಪಟ್ಟದ ಶ್ರೀ ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಯಲ್ಲಿ ಶ್ರದ್ಧಾ ಭಕ್ತಿ ಪುರಸ್ಸರವಾಗಿ ಸಮರ್ಪಿಸಿದ**

## ಬಿನ್ನಹ ಪತ್ರ

ಪರಮ ಪೂಜ್ಯರೇ—

ತಾವು ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಮಹಾಮಂತ್ರವನ್ನು ಬರೆಯುವುದಕ್ಕಾಗಿ ಮುಡುಪಾಗಿರಿಸಿದ ತಮ್ಮ ಸತ್ಕಾಲವನ್ನು ಬದಿಗಿರಿಸಿ ಇಲ್ಲಿಗೆ ದಯಮಾಡಿಸಿ ಶ್ರೀ ಜಗದ್ಗುರು 'ರೇಣುಕಮಂದಿರದ' ಅಡಿಗಲ್ಲನ್ನಿರಿಸಿ ದರ್ಶನಾಶೀರ್ವಾದವನ್ನಿತ್ತುದಕ್ಕಾಗಿ ನಮ್ಮ ನವಲುಗುಂದ ಪ್ರದೇಶದ, ಮತ್ತು ನವಿಲೂಗುಂದ ನಗರದ ನಾವು ಭಕ್ತಿ-ಭಾವದಿಂದ ಬಿನ್ನಹ ಪತ್ರವನ್ನು ಸನ್ನಿಧಿಯಲ್ಲಿ ಅರ್ಪಿಸಲು ಸಾತಿಶಯ ಸಂತೋಷವಾಗಿದೆ.

ಶ್ರೀ ಸುತ್ತೂರಮಠವು ವೀರಶೈವ ಮಠಚರಿತ್ರೆಯಲ್ಲಿ ಅತ್ಯಂತ ಪ್ರಾಚೀನವೂ, ಪ್ರಖ್ಯಾತವೂ ಆಗಿದೆ. ರಾಜ-ಮಹಾರಾಜರುಗಳಿಂದ ಮಾನ-ಮನ್ನಣೆಯನ್ನು ಪಡೆದಿದೆ. ಈ ಪೀಠದ ಸ್ವಾಮಿಗಳು ವಿದ್ವಾಂಸರಾಗಿ, ತತ್ವಜ್ಞಾನಿಗಳಾಗಿ, ತಪೋಧನ

ರಾಗಿ, ಶಾಪಾನುಗ್ರಹ ಸಾಮರ್ಥ್ಯವುಳ್ಳವರಾಗಿ ಹೋಗಿದ್ದಾರೆ. ಇವರುಗಳಲ್ಲಿ ಸಿದ್ಧ ನಂಜದೇಶಿಕರು "ಪರಮ ಶಿಖಾಮಣಿ" ಎಂಬ ಗ್ರಂಥವನ್ನು, ಇಮ್ಮಡಿ ಶಿವರಾತ್ರೀಶ್ವರರು "ವೃಷಭೇಂದ್ರ" ಪುರಾಣವನ್ನು, ಶಿವಲಿಂಗಾರ್ಯರು, "ಆಮುಗಿದೇವ" ಸಾಂಗತ್ಯವನ್ನು, ಚೆನ್ನಬಸವದೇವರು "ಚೋಳರೇಣುಕ ಸಂವಾದ" ವೆಂಬ ಗ್ರಂಥಕ್ಕೆ ಮಹತ್ವದ ಕನ್ನಡ ಟೀಕೆಯನ್ನು ಬರೆದಿದ್ದಾರೆ. ಹದಿನೈದನೇ ಶತಮಾನದಲ್ಲಿ ಪ್ರಖ್ಯಾತರಾಗಿದ್ದ ಸುತ್ತೂರು ಮಠಾಧ್ಯಕ್ಷರಾದ ಶ್ರೀ ಘನಲಿಂಗದೇವರು ಪ್ರಸಿದ್ಧ ವಚನಕಾರರಾಗಿ ತತ್ವಜ್ಞಾನಿಗಳಾಗಿದ್ದಾರೆ.

ಈಗ ಸುತ್ತೂರು ವೀರಸಿಂಹಾಸನ ಮಠಕ್ಕೆ ಅಧ್ಯಕ್ಷರಾಗಿರುವ ಇಪ್ಪತ್ತೊಂದನೆ ಶ್ರೀ ಜಗದ್ಗುರು ಪಟ್ಟದ ಶ್ರೀ ಶಿವರಾತ್ರೀಶ್ವರ ಸ್ವಾಮಿಗಳಾಗಿರುವ ತಾವು ಶಿವಯೋಗ ಸಂಪನ್ನರಾಗಿಯೂ, ಮತ್ತು ವೇದಶಾಸ್ತ್ರ, ಸಾಹಿತ್ಯಪ್ರೇಮಿಗಳಾಗಿಯೂ, ವಿದ್ಯಾಪಕ್ಷಪಾತಿಗಳಾಗಿಯೂ, ಇರುವರಲ್ಲದೆ ತಾವು ಇದುವರೆವಿಗೆ ಎರಡುಕೋಟಿಗಿಂತಲೂ ಹೆಚ್ಚು ಮಹಾಮಂತ್ರ ಬರೆದು ಎಲ್ಲರನ್ನೂ ಮಂತ್ರ ಮುಗ್ಧರನ್ನಾಗಿ ಮಾಡಿರುವಿರಿ. ಆದುದರಿಂದ ತಮ್ಮ ಇಂದ್ರಿಯ, ಮನ, ಭಾವಗಳೆಲ್ಲವೂ ಮಂತ್ರಮಯವಾಗಿ ತಾವು ಮಂತ್ರಮಯ ಶರೀರಿಗಳಾಗಿದ್ದೀರಿ. ಇಂತಹ ತಮ್ಮ ದರ್ಶನದಿಂದ ನಾವು ಪುನೀತರಾಗಿದ್ದೇವೆ.

ಇಂದಿನ ನವೀನ ಸ್ಥಿತಿಗಳನ್ನು ಗುರುತಿಸಿ ಅದಕ್ಕನುಗುಣವಾದ ವಿಧಾನದಲ್ಲಿ ನೀತಿ-ಧರ್ಮಗಳನ್ನು ವ್ಯಕ್ತಿ ಸಮಾಜಗಳ ಜೀವನದಲ್ಲಿ ರೂಪಿಸಲು ಹವಣಿಸುವವರೇ ಇಂದಿನ ನಿಜವಾದ ಕಾರ್ಯಕರ್ತರು. ಭಾರತದಲ್ಲಿ ಅನೇಕ ಪುಣ್ಯ-ಪುರುಷರು ಇಂತಹ ಕಾರ್ಯವನ್ನು ನಿರ್ವಹಿಸುತ್ತ ಬಂದಿದ್ದಾರೆ. ಅನೇಕ ಉತ್ತಮ ಕಾರ್ಯಕರ್ತರು ಇದಕ್ಕಾಗಿ ತಮ್ಮ ಜೀವನವನ್ನು ಸವಿಸುತ್ತಲಿದ್ದಾರೆ. ಕರ್ನಾಟಕದಲ್ಲಿಯೂ ಇಂತಹ ಪೂಜ್ಯರು ಅಲ್ಲಲ್ಲಿ ಕಾಣಿಸಿಕೊಳ್ಳುತ್ತಲಿದ್ದಾರೆ. ಇಂಥವರಲ್ಲಿ ಶ್ರೀಮಂತ್ ಸುತ್ತೂರ ವೀರಸಿಂಹಾಸನಾಧೀಶ್ವರರಾದ, ಶ್ರೀ ಜಗದ್ಗುರು ಪಟ್ಟದ ಶ್ರೀ ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರಾದ ತಮಗೂ ಉನ್ನತವಾದ ಸ್ಥಾನವದೆ. ಇದು ನಮ್ಮೆಲ್ಲರಿಗೂ ಹರ್ಷದಾಯಕವಾಗಿದೆ.

ತಾವು ಶ್ರೀ ಪೀಠದ ಸೂತ್ರವನ್ನು ಸ್ವೀಕರಿಸಿದ ಮೇಲೆ ಅದರ ಸಂಪತ್ತನ್ನು ಅಭಿವೃದ್ಧಿಗೊಳಿಸಿ ಸಂಪತ್ತಿನ ಆಗರವನ್ನಾಗಿ ಮಾಡಿರುವಿರಿ. ಆದುದರಿಂದ ಸಮಾಜದ ನಾನಾವಿಧವಾದ ಕಾರ್ಯಗಳು ಜರುಗಲು ಸಹಾಯವಾಗಿದೆ. ತಮ್ಮ ಕರಕಮಲ ಸಂಜಾತರಾದ ಶ್ರೀ ಜಗದ್ಗುರು ಪಟ್ಟದ ಶಿವರಾತ್ರಿ ರಾಜೇಂದ್ರಸ್ವಾಮಿಗಳು ತಮ್ಮ ಛಾಯಾನುವರ್ತಿಗಳಾಗಿ ತಮ್ಮ ಅನುಜ್ಞೆಯಂತೆ ಸಮಾಜದ ಎಷ್ಟೋ ಕೆಲಸಕಾರ್ಯಗಳನ್ನು ನೆರವೇರಿಸುತ್ತಲಿರುವುದು ಸರ್ವವೇದ್ಯವಾಗಿದೆ. ವಿದ್ಯಾಪ್ರೇಮಿಗಳಾಗಿ, ದಯಾದಾಕ್ಷಣ್ಯಪರರಾಗಿ, ವಿದ್ಯಾವಿನಯಸಂಪನ್ನರಾಗಿರುವ ಇವರು ತಮ್ಮ ತಪಸ್ಸಿನ

ಪ್ರಭಾವದಿಂದ ಪ್ರಾಪ್ತರಾಗಿದ್ದಾರೆ ಎಂದು ಅರಿಕೆ ಮಾಡಿಕೊಳ್ಳಲು ಮಹದಾನಂದ ವಾಗಿದೆ. ಈಗ ಮೈಸೂರು, ನಂಜನಗೂಡು, ಚಾಮರಾಜನಗರ, ಗುಂಡಲಪೇಟೆ, ಯಳಂದೂರು, ಹೆಗ್ಗಡದೇವನಕೋಟೆ, ಟಿನರಸೀಪುರ, ಸರಗೂರು, ಕುದೇರು ಮೊದಲಾದ ಸ್ಥಳಗಳಲ್ಲಿ ಉಚಿತ ವಿದ್ಯಾರ್ಥಿ ನಿಲಯಗಳನ್ನು, ಮೈಸೂರಿನಲ್ಲಿ ಒಂದು ಸಂಸ್ಕೃತ ಪಾಠಶಾಲೆ ಮತ್ತು ಒಂದು ಹೈಸ್ಕೂಲನ್ನು ನಡೆಸುತ್ತ ವಿದ್ವಾಂಸರಿಗೆ ಪ್ರೋತ್ಸಾಹ ವೀಯುತ್ತಾ ತಾವು ಆದರ್ಶ ಗುರುಗಳಾಗಿರುವಿರಿ. ತಮ್ಮ ಉದಾರ ಧೋರಣದ ಫಲವಾಗಿ ಮೂರು ಸಹಸ್ರ ಜನ ವಿದ್ಯಾರ್ಥಿಗಳು ತಮ್ಮ ಕೃಪಾಶ್ರಯದಲ್ಲಿ ಅಭ್ಯಾಸ ಮಾಡುತ್ತಲಿದ್ದಾರೆ. ಇದುವರೆಗೆ ತಮ್ಮ ಉಚಿತ ಪ್ರಸಾದನಿಲಯದಲ್ಲಿ ಆಶ್ರಯ ಪಡೆದ ಹನ್ನೆರಡು ಸಹಸ್ರ ವಿದ್ಯಾರ್ಥಿಗಳು ವಿವಿಧ ಕ್ಷೇತ್ರದಲ್ಲಿ ಸೇರಿ ನಮ್ಮ ನಾಡಿನ ರಾಷ್ಟ್ರದ ಸೇವೆಯನ್ನು ಮಾಡ ತ್ತಲಿದ್ದಾರೆ.

ಸಮಾಜಸೇವೆ, ಸಾಹಿತ್ಯಸೇವೆ, ವಿದ್ಯಾಭಿಮಾನ, ತತ್ವನಿಷ್ಠೆ, ದಾಸೋಹಂಭಾವ ಪರೋಪಕಾರಬುದ್ಧಿ, ಕಾರ್ಯಕೌಶಲ್ಯ, ಸತ್ಕಾಲಕ್ಷೇಪ ಇವು ತಮ್ಮಲ್ಲಿ ಮೂರ್ತಿವತ್ತಾಗಿ ತಮ್ಮ ಪುಣ್ಯಮಯ ಕೀರ್ತಿಯು ನಾಡಿನ ತುಂಬ ಪಸರಿಸಿದೆ. ಪುಣ್ಯ ಪುರುಷರಾದ ತಮ್ಮಿಂದ ನಮ್ಮ ನಾಡಿಗೆ ಶುಭವೂ, ಶ್ರೇಯಸ್ಸೂ, ಶೋಭೆಯೂಪ್ರಾಪ್ತವಾಗಿದೆ.

ಶಿವಲಿಂಗಾರ್ಚನೆ ಮತ್ತು ಶಿವ ಮಹಾಮಂತ್ರವನ್ನು ಬರೆಯುವುದರಲ್ಲಿಯೇ ತಮ್ಮ ಸಮಯವನ್ನೆಲ್ಲಾ ಬಿಡುಪಾಗಿಟ್ಟ ತಾವು ನಮ್ಮ ಭಕ್ತಿಯುತವಾದ ಪ್ರಾರ್ಥನೆಯನ್ನು ಮನ್ನಿಸಿ, ನಮ್ಮೆಲ್ಲರಿಗೂ ದರ್ಶನಾಶೀರ್ವಾದಗಳನ್ನು ಅನುಗ್ರಹಿಸಿ, ಪುನೀತರನ್ನಾಗಿ ಮಾಡಿದುದರಿಂದ ಶ್ರದ್ಧಾ ಭಕ್ತಿಪುರಸ್ಸರವಾಗಿ ಈ ಬಿನ್ನಹ ಪತ್ರವನ್ನು ಸನ್ನಿಧಿಯಲ್ಲಿ ಸಮರ್ಪಿಸುತ್ತೇವೆ ಮಹಾಸ್ವಾಮಿ.

ತಮ್ಮ ಕೃಪಾಪಾತ್ರರಾದ

**ನವಿಲುಗುಂದ** **ನವಿಲುಗುಂದ ತಾಲ್ಲೂಕ ಮತ್ತು ನವಿಲಗುಂದ**

**೧೭-೧೧-೧೯೬೧** **ನಗರದ ಸಮಸ್ತ ಭಕ್ತರು**

**ಸುತ್ತೂರು ಸಂಸ್ಥಾನಾಧಿಪತಿಗಳಾದ ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳವರಿಗೆ ಉಡುಪಿ ನಗರಸಭೆಯವರು ಸಮರ್ಪಿಸಿದ**

## ಮಾ ನ ಪ ತ್ರ

ಪೂಜ್ಯರೇ,

ಧರ್ಮಪೀಠವೊಂದರಲ್ಲಿ ವಿರಾಜಮಾನರಾಗಿದ್ದು ಧರ್ಮ-ಸಂಸ್ಕೃತಿಗಳ ರಕ್ಷಣೆಯಲ್ಲೂ ವಿದ್ಯಾಪ್ರಚಾರದಲ್ಲೂ ಅತಿಶಯ ಶ್ರದ್ಧೆಯಿಂದ ಕಾರ್ಯವೆಸಗುತ್ತಲಿರುವ ತಮ್ಮನ್ನು ಶಿಕ್ಷಣ ಕ್ಷೇತ್ರವೂ ಧರ್ಮಕ್ಷೇತ್ರವೂ ಎನಿಸಿದ ನಮ್ಮಿ ಉಡುಪಿ ನಗರಕ್ಕೆ ಸ್ವಾಗತಿಸಲು ಪರಮಸಂತೋಷವಾಗುತ್ತಿದೆ.

ಭಾರತ ದೇಶದ ಪ್ರಮುಖ ದರ್ಶನಾಚಾರ್ಯರಲ್ಲಿ ಒಬ್ಬರಾದ ಆಚಾರ್ಯ ಮಧ್ವರ ಅವತಾರದಿಂದ ಪವಿತ್ರವಾದ ಹಾಗೂ ಅವರು ಪ್ರತಿಷ್ಠಿಸಿದ ಶ್ರೀ ಕೃಷ್ಣನ ಸನ್ನಿಧಾನದಿಂದ ಪ್ರಸಿದ್ಧವಾದ ಉಡುಪಿಯು ಶ್ರೀ ಮಧ್ವಾಚಾರ್ಯರ ಶುಭ ಸಿದ್ಧಾಂತ ಗಳನ್ನು ಪ್ರಖ್ಯಾಪಿಸುತ್ತ ವಿಖ್ಯಾತವಾಗಿರುವ ವಿಚಾರವು ತಮಗೆ ತಿಳಿದದ್ದೆ. ಈಚೆಗೆ ಡಾ|| ಟಿ. ಮಾಧವಪೈಗಳವರ ಸಾಹಸದ ಫಲವಾಗಿ ಅನೇಕ ವಿದ್ಯಾಸಂಸ್ಥೆಗಳು ತಲೆ ಯೆತ್ತಿ ರಾಷ್ಟ್ರದ ಮಹತ್ವದ ವಿದ್ಯಾನಗರಿಯಾಗಿಯೂ ಉಡುಪಿ ಹೆಸರುಗಳಿಸಿದೆ ಯೆಂದು ತಿಳಿಸಲು ಆನಂದಪಡುತ್ತೇವೆ.

ತಾವು ನಂಜನಗೂಡು, ಚಾಮರಾಜನಗರ, ಟಿ. ನರಸೀಪುರ, ಮೈಸೂರು, ಮುಂತಾದ ಸ್ಥಳಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿ ಅಲ್ಲಿ ಮೂರುಸಾವಿರಕ್ಕೂ ಮೇಲ್ಪಟ್ಟ ವಿದ್ಯಾರ್ಥಿಗಳಿಗೆ ಊಟ–ವಸತಿ ಮೊದಲಾದ ಸೌಕರ್ಯವೊದಗಿಸಿ ಕೊಡು ತ್ತಿರುವುದು ತಮ್ಮ ವಿದ್ಯಾಪಕ್ಷಪಾತಕ್ಕೊಂದು ಹಿರಿಯ ನಿದರ್ಶನವಾಗಿದೆ.

ಜನತೆಯನ್ನು ವಿದ್ಯಾವಂತರಾಗಿ ಮಾಡುವುದು ಬಹು ದೊಡ್ಡ ತಪಸ್ಸು. ಅನೇಕ ವಿದ್ಯಾರ್ಥಿಗಳು ಆಶ್ರಯವಿಲ್ಲದೆಯೆ ತಮ್ಮ ವಿದ್ಯಾಭ್ಯಾಸಂಗವನ್ನು ಬಿಡಬೇಕಾಗುವು ದುಂಟು. ಇಂಥ ಸಂದರ್ಭದಲ್ಲಿ ತಾವು ಅಲ್ಲಲ್ಲಿ ವಿದ್ಯಾರ್ಥಿನಿಲಯಗಳನ್ನು ಕಟ್ಟಿಸಿ ಅಲ್ಲಿ ಅವರಿಗೆ ಎಲ್ಲ ನೆರವನ್ನು ಕರುಣಿಸುತ್ತಿರುವುದು ಅತ್ಯಂತ ಶ್ಲಾಘ್ಯವಾದ ವಿಚಾರ ವಾಗಿದೆ. ಜೊತೆಗೆ ಹೈಸ್ಕೂಲುಗಳು, ಸಂಸ್ಕೃತಪಾಠಶಾಲೆಗಳನ್ನು ನಡೆಸುತ್ತಿರುವು ದಲ್ಲದೆ ಚಾಮರಾಜನಗರದಲ್ಲಿ ಒಂದು ಇಂಟರ್‌ಮೀಡಿಯೇಟ್ ಕಾಲೇಜನ್ನೂ, ಮೈಸೂರಿನಲ್ಲಿ ಒಂದು ಮೂಲಶಿಕ್ಷಣ ವಿದ್ಯಾಪೀಠವನ್ನೂ ನಡೆಯಿಸಿಕೊಂಡು ಬರುವು ದರ ಮೂಲಕ ಅನೇಕ ಮಂದಿಗೆ ವಿದ್ಯಾದಾನ ನೀಡುತ್ತಿರುವಿರಿ.

ತಾವು ಸ್ವತಃ ವಿದ್ವಾಂಸರಾಗಿದ್ದು ಲೋಕ ಕಲ್ಯಾಣದೀಕ್ಷಾ ಬದ್ಧರಾಗಿದ್ದೀರಿ. ಸಮಾಜ ಕಲ್ಯಾಣದಲ್ಲಿ ಅತ್ಯಾಸಕ್ತಿಯುಳ್ಳ ಇಂಥ ಹಿರಿಯರು ಧರ್ಮನೇತಾರ ಪದವಿ ಯಲ್ಲಿರುವುದು ರಾಷ್ಟ್ರದ ಪುಣ್ಯವೆ ಸರಿ. ಇಂಥ ಉದಾರಮತಿಗಳೂ ಜನಪ್ರೇಮಿಗಳೂ ಆದ ತಮ್ಮ ಜೀವನವು ಆದರ್ಶವಾಗಿದೆಯೆನ್ನಲಡ್ಡಿಯಿಲ್ಲ.

ಇಂದು ನಮ್ಮ ದೇಶದಲ್ಲಿ ಅಜ್ಞಾನ-ಬಡತನಗಳೂ ಅದರಿಂದಾಗಿ ಪರಸ್ಪರ ಕಲಹ ಕಿನಿಸುಗಳೂ ತುಂಬಿ ರಾಷ್ಟ್ರದ ಪ್ರಗತಿಗೆ ಅಡ್ಡಿಯಾಗಿವೆ. ಧರ್ಮಪೀಠದಲ್ಲಿರತ್ಕ ವರು ಜನರಲ್ಲಿರಬಹುದಾದ ಈ ದೋಷಗಳನ್ನು ಪರಿಹರಿಸಿ ವಿಶಾಲಬುದ್ಧಿಯನ್ನೂ ಕಾರ್ಯೋತ್ಸಾಹವನ್ನೂ ಧರ್ಮಶೀಲತೆಯನ್ನೂ ಪ್ರಚೋದಿಸಬೇಕಾಗಿದೆ. ತಾವು ಅಂಥ ಕಾರ್ಯವನ್ನೆ ಮಾಡುತ್ತಿರುವುದು ಉಲ್ಲಾಸಕರವಾಗಿದೆ.

ಉಡುಪಿಯೂ ವಿದ್ಯಾದಾನ–ಧರ್ಮಪ್ರಸಾರ ಕ್ಷೇತ್ರಗಳಲ್ಲಿ ಸಾಕಷ್ಟು ಶ್ರದ್ಧೆ ಯಿಂದ ಪರಿಶ್ರಮಿಸುತ್ತಿರುವುದನ್ನು ತಾವು ಈಗಾಗಲೆ ಅರಿತಿರಬಹುದು. ಈಶ್ವರಾನು

ಗ್ರಹದಿಂದಲೂ ತಮ್ಮಂಥವರ ಸಹಕಾರ–ಸಹಾಯಗಳಿಂದಲೂ ಈ ಕಾರ್ಯವು ಇನ್ನೂ ಶ್ರೇಯಸ್ಕರವಾಗಿ ನಡೆಯಬಲ್ಲುದೆಂದು ನಾವು ನಂಬಿರುತ್ತೇವೆ.

ಉಡುಪಿಯ ನಾಗರಿಕರ ಪರವಾಗಿ ತಮಗೆ ಇನ್ನೊಮ್ಮೆ ಸ್ವಾಗತಬಯಸಿ, ತಮ್ಮ ತಪಸ್ಸು ನಿರಂತರವೂ ವೃದ್ಧಿಸುತ್ತಿರಲೆಂದೂ, ತಮ್ಮಿಂದ ಇನ್ನೂ ನೂರಾರು ಲೋಕ ಸೇವಾ ಕಾರ್ಯಗಳು ನಡೆದು ರಾಷ್ಟ್ರವು ಉಪಕೃತವಾಗಲೆಂದೂ ಶ್ರೀ ಕೃಷ್ಣನಲ್ಲಿ ಪ್ರಾರ್ಥಿಸುತ್ತೇವೆ.

ಇಂತು,
ಅಧ್ಯಕ್ಷ ಮತ್ತು ಸದಸ್ಯರು
ನಗರಸಭೆ

ಉಡುಪಿ,
ತಾ॥ 3-2-1960

§ಶ್ರೀ§

## ರಾಜಗೌರವಗಳು

ಸುತ್ತೂರು ವೀರಸಿಂಹಾಸನದ ಕಾರ್ಯಬಾಹುಳ್ಯವನ್ನು ಶ್ರೀ ಮಠದ ಹಿರಿಮೆಯನ್ನು ಮನಗಂಡು ಮೈಸೂರು ಘನಸರ್ಕಾರದವರೂ ಶ್ರೀಮನ್ಮಹಾರಾಜರವರೂ ಶ್ರೀಮಠದ ವೈಭವವು ರಾಜಯೋಗ್ಯವಾಗಿರಬೇಕೆಂದು ಈ ಕೆಳಗೆ ಕಂಡ ಗೌರವಗಳನ್ನೂ ಮಂಜೂರುಮಾಡಿರುತ್ತಾರೆ.

### ಬಿರುದಾವಳಿಗಳು

ಪಟ್ಟದ ಶಿವರಾತ್ರಿ ರಾಜೇಂದ್ರಸ್ವಾಮಿಗಳು
ಆರ್ಡರ್ ನಂ. R. 8660—82/ ಮುಜರಾಯಿ 162-46-3.
ಬೆಂಗಳೂರು, 14ನೇ ಮಾರ್ಚಿ 1947

ಶ್ರೀ ಸುತ್ತೂರು ವೀರಸಿಂಹಾಸನ ಮಠವು ಅಸಂಖ್ಯಾತ ಶಿಷ್ಯ ಸಮುದಾಯವನ್ನೊಳಗೊಂಡು ಸಾರ್ವಜನಿಕರ ಭಕ್ತಿ, ಗೌರವಗಳಿಗೆ ಪಾತ್ರವಾಗಿರುವ ಒಂದು ಭವ್ಯವಾದ ಪುರಾತನ ಧರ್ಮಸಂಸ್ಥೆಯಾಗಿದೆ. ಶ್ರೀ ಮಠವು ಅಭಿವೃದ್ಧಿ ಸ್ಥಿತಿಯಲ್ಲಿದ್ದು, ಈಗಿರುವ ಶ್ರೀ ಸ್ವಾಮಿಗಳವರು ವಿದ್ಯಾಪ್ರಗತಿಗಾಗಿ ಅದರಲ್ಲೂ ವೀರಶೈವರ ವಿದ್ಯಾಭಿವೃದ್ಧಿಗಾಗಿ, ಮಹತ್ತರವಾದ ಸೇವೆಯನ್ನು ಸಲ್ಲಿಸುತ್ತಾ ಇದ್ದಾರೆ. ಅನೇಕ ವಿದ್ಯಾರ್ಥಿ ನಿಲಯಗಳು ನಾನಾ ಕಡೆಗಳಲ್ಲಿ ಸ್ಥಾಪಿಸಲ್ಪಟ್ಟು ಉಚಿತ ಅಶನ, ವಸತಿಗಳ ಸೌಲಭ್ಯಗಳನ್ನು ಹೊಂದಿವೆ. ಶ್ರೀ ಮಠದಿಂದ ಸಂಸ್ಕೃತ ಪಾಠಶಾಲೆಯೊಂದನ್ನು ಮೈಸೂರಿನಲ್ಲಿ ನಡೆಸಲಾಗುತ್ತಿದೆ. ಸುತ್ತೂರು ಗ್ರಾಮಕ್ಕೆ ಅನೇಕ ಸೌಲಭ್ಯಗಳನ್ನು ಶ್ರೀಮಠವು ಒದಗಿಸಿಕೊಟ್ಟಿದೆ. ಆ ಧರ್ಮಸಂಸ್ಥೆಯು ತನ್ನ ಧರ್ಮವನ್ನು ಕಾಪಾಡುತ್ತಾ, ಅದಕ್ಕೆ ಬರುವ ವರಮಾನದ ಹೆಚ್ಚಿನ ಭಾಗವನ್ನು ವಿದ್ಯಾಪ್ರಗತಿಗೂ ಮತ್ತು ಸಮಾಜೋ

ದ್ಧಾರಕ್ಕೂ ಉಪಯೋಗಿಸುತ್ತಿರುವುದು ಬಹು ಶ್ಲಾಘನೀಯವಾಗಿಯೂ ಮತ್ತು ಕಾ
ಧರ್ಮಕ್ಕನುಸಾರವಾಗಿಯೂ ಇದೆ.

ಮಠವು ಪುರಾತನವಾದ, ಪ್ರಭಾವಶಾಲಿಯಾದ ಮತ್ತು ಪ್ರಗತಿಯನ
ಹೊಂದುತ್ತಿರುವ ಧರ್ಮಸಂಸ್ಥೆಯಾಗಿ ದೇಶದ ನಾನಾಕಡೆಗಳಲ್ಲಿ ಅಸಂಖ್ಯಾತ ಶಿ
ಸಮುದಾಯವನ್ನೊಳಗೊಂಡಿದೆ. ಮತ್ತು ಎಲ್ಲಾ ಗೌರವ, ಪ್ರೋತ್ಸಾಹಗಳನ
ಹೊಂದಲು ಅರ್ಹತೆಯನ್ನ ಪಡೆದಿದೆ. ಆದುದರಿಂದ ಘನ ಸರ್ಕಾರದವರು ಶ್ರ
ಸ್ವಾಮಿಗಳವರು ಬೆಂಗಳೂರಿಗೆ ದಯಮಾಡಿಸಿದಾಗ ಪ್ರಥಮದಿನದ ಭಿಕ್ಷೆ 75ರೂ
(ಎಪ್ಪತ್ತೈದು ರೂ. ಗಳು)ಗಳನ್ನು ನೀಡತಕ್ಕದ್ದೆಂದು ಮತ್ತು ಈ ಕೆಳಗೆ ಕಂಡ ವಿಶೇ
ರಾಜಮರ್ಯಾದೆಗಳನ್ನು ಕೊಡತಕ್ಕದೆಂದು ತೀರ್ಮಾನಿಸಿದ್ದಾರೆ.

ಈ ರೀತಿಯ ಮರ್ಯಾದೆಗಳನ್ನು ತೋರಿಸುವುದರಿಂದ ಉತ್ಸಾಹವು ಹೆ
ಶ್ರೀ ಮಠವು ಇನ್ನೂ ಹೆಚ್ಚಿನ ಮಟ್ಟದಲ್ಲಿ ತನ್ನ ಪುರೋಭಿವೃದ್ಧಿಯನ್ನು ಸಾಧಿಸಲ
ಒಂದು ಕ್ರಿಯಾಬಲವೂ ಉಂಟಾಗುತ್ತದೆ ಎಂದು ಘನ ಸರ್ಕಾರವು ಮನಗಂಡಿದೆ.

(ಸಹಿ) **ಕೆ. ಬಾಲಸುಬ್ರಹ್ಮಣ್ಯಮ್**
ಗೌರ್ನಮೆಂಟ್ ಲಾ ಡಿಪಾರ್ಟ್‌ಮೆಂಟಿನ ಕಾರ್ಯದರ್ಶಿಗಳ ಪರವಾ

ಆರ್ಡರ್ ನಂ. R. 175—187/ಮುಜರಾಯಿ 162-46-7
ಬೆಂಗಳೂರು, 4ನೇ ಜುಲೈ 1947

ಶ್ರೀ ಮುರುಘಾಮಠಕ್ಕೆ ಮುಂಜೂರು ಮಾಡಿರುವ ಎಲ್ಲಾ ಸಾಮಾನ್ಯ ಗೌರ
ಗಳನ್ನು ಅಂದರೆ ಆರುಜನ ಸಿಲ್ಲೇದಾರುಳ್ಳ ಸೈನ್ಯ ಪಹರೆಯನ್ನು ಬ್ಯಾಂಡು ಮತ್ತು
ಇಸ್ತಕಬಾಲ್ ಗೌರವವನ್ನು ಸಹ ನಂಜನಗೂಡು ತಾಲ್ಲೂಕು ಸುತ್ತೂರು ಶ್ರೀ ವೀ
ಸಿಂಹಾಸನ ಮಠದ ಶ್ರೀ ಸ್ವಾಮಿಗಳವರು ಬೆಂಗಳೂರಿಗೆ ದಯಮಾಡಿಸಿದಾಗ ಕೊಡು
ರಹದಾರಿಯಲ್ಲಿ ಸೇರಿಸತಕ್ಕದೆಂದು ಈ ಮೂಲಕ ಘನ ಸರ್ಕಾರದವರು ಮುಂಜೂರ
ಮಾಡಿದ್ದಾರೆ.

(ಸಹಿ) **ಕೆ. ಬಾಲಸುಬ್ರಹ್ಮಣ್ಯಮ್**
ಗೌರ್ನಮೆಂಟ್ ಲಾ ಡಿಪಾರ್ಟ್‌ಮೆಂಟಿನ ಕಾರ್ಯದರ್ಶಿಗಳ ಪರವಾ

No. 1531/41 The Palace, Mysor
28-11-1950

ನಂಜನಗೂಡು ತಾಲ್ಲೂಕು ಸುತ್ತೂರು ಗ್ರಾಮದಲ್ಲಿರುವ ಶ್ರೀ ಗುರು ಶಿವರಾತ್ರಿ
ಶ್ವರ ಪ್ರಸನ್ನ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯೇತ್ಯಾದಿ ಬಿರುನಾಂಕಿತರಾ
ಶ್ರೀ ವೀರಸಿಂಹಾಸನ ಮಠದ ಪಟ್ಟದ ಶ್ರೀ ಶಿವರಾತ್ರಿರಾಜೇಂದ್ರಸ್ವಾಮಿಗಳವರ ಸ
ಧಾನಂಗಳಿಗೆ—

ದಿವಾನ್ ಆರ್ಕಾಟ್ ರಾಮಸ್ವಾಮಿಮೊದಲಿ
ಯಾರ್ ಮತ್ತು ಶ್ರೀ ತಂಬೂಚೆಟ್ಟಿಯವರು
ಸಂಸ್ಥೆಗೆ ಭೇಟಿಯಿತ್ತಾಗ.





ಸುತ್ತೂರು ವೀರಸಿಂಹಾಸನ ಮಠದ ಮುಂಭಾಗದ ದೃಶ್ಯ

ಕ್ಷಿಪ್ರವಲ್ಲಿಯೇ ಮಠದ ಮರ್ರ್ಯಾದೆಗಳೊಡನೆ ರಾಜಧಾನಿಗೆ ದಯಮಾಡಿಸಲು ಸಂಕಲ್ಪಮಾಡಿರುವುದಾಗಿಯೂ, ಮತ್ತು ಮೇಲ್ಕಂಡ ಸಂದರ್ಭದಲ್ಲಿ ಶ್ರೀ ಬಾಳೆಹೊನ್ನೂರು ಶ್ರೀ ವೀರಸಿಂಹಾಸನ ಮಠದ ಶ್ರೀಗಳವರು ಮತ್ತು ಚಿತ್ರದುರ್ಗದ ಶ್ರೀಮನ್ನಿರಂಜನ ಮುರುಘರಾಜೇಂದ್ರ ಮಠದ ಶ್ರೀಗಳವರು ರಾಜಧಾನಿಗೆ ದಯಮಾಡಿಸಿದ್ದ ವೇಳೆಯಲ್ಲಿ ಅರಮನೆಯಿಂದ ದಯಪಾಲಿಸಿದ್ದ ಸಮಸ್ತ ಮರ್ಯಾದೆಗಳನ್ನು ಈಗಲೂ ಅಪ್ಪಣೆ ಮಾಡಿಸಬೇಕೆಂದು, ಅಪೇಕ್ಷಿಸಿ ತಾ॥ 3-7-50 ರಲ್ಲಿ ಸನ್ನಿಧಾನದಿಂದ ಅಪ್ಪಣೆ ಕೊಡಿಸಿದ ಪತ್ರ ಶೃತವಾಯ್ತು.

ಸದರಿ ತಮ್ಮ ಕೋರಿಕೆಯಂತೆ, ಶ್ರೀಮನ್ನಿರಂಜನ ಮುರುಘರಾಜೇಂದ್ರ ಸ್ವಾಮಿಗಳವರು ರಾಜಧಾನಿಗೆ ಚಿತ್ತೈಸಿದಾಗ ಮಲಪೂಪಿ ಪಟ್ಟಿಯಲ್ಲಿ ನಮೂದಿಸಿರುವಂತೆ, ಅರಮನೆಯಿಂದ ಸಂದಾಯವಾಗುವ ಮರ್ಯಾದೆಗಳನ್ನು, ತಮ್ಮ ಮಠಕ್ಕೂ ಮುಂಜೂರಾಗಿದೆಯೆಂದು ಹುಜೂರ್ಕ್ರಾಸನ್ನಿಧಾನದಿಂದ ಅಪ್ಪಣೆಯಾಗಿರುವ ಅಂಶ ಅರಿಕೆಮಾಡಲು ಸಂತೋಷಪಡುತ್ತೇನೆ.

H.N. Pallegar,
Huzur Secretary

28-11-50

### ಸುತ್ತೂರು ಶ್ರೀ ವೀರಸಿಂಹಾಸನಾಧೀಶ್ವರರಾದ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ಮೈಸೂರಿಗೆ ದಯಮಾಡಿಸುವ ಸಂಧರ್ಭದಲ್ಲಿ ಕೊಟ್ಟಿರುವ ಅರಮನೆಯ ಮರ್ಯಾದೆಗಳನ್ನೊಳಗೊಂಡ ಒಂದು ಪಟ್ಟಿ

1. ಓಲಗ ಸೆಟ್ ಒಂದು.
2. ಕಟ್ಟಿಗೆಗಳು ಎರಡು
3. ಚೌಘ್ರರ್ ಒಂದು
4. ಕಂಭಗಳು ಒಂದು ಜತೆ
5. ಚಾಮರಗಳು ಒಂದು ಜತೆ
6. ಜೆಳ್ಳಿನಗಾರಿ ಒಂದು
7. ಸಾದಾ ನಗಾರಿ ಒಂದು
8. ಬಿಸ್ಟಾರ್ಸ್ ಎಂಟು
9. ಕಿರ್ಕಾಪು ಛತ್ರಿ
10. ಹರಿಕುದಗಳು ಎರಡು
11. ದೀವಟಿಗೆಗಳು ನಾಲ್ಕು
12. ಸಿಲ್ವರ್ ಭೇಲ್ಸ್ ಹನ್ನೆರಡು
13. ಗರಿ ಭೇಲ್ಸ್ ಹನ್ನೆರಡು
14. ರಾಜಾವಾರ್ ಭೇಲ್ಸ್‌ಹನ್ನೆರಡು
15. ಶಂಖು ಒಂದು
16. ತಸಮಾರ್ಫಿ ಎರಡು
17. ರಾಜೆವಾರ್ ಮೇಜರ್ ಒಂದು
18. ಕರ್ಣಾಟಿಕ್ ಬ್ಯಾಂಡ್ (ಹನ್ನೆರಡ ಜನರು)
19. ಸಿಲ್ಲೇದಾರ್ ಒಂದು
20. ಥಿಸಲ್‌ದಾರ್ ಒಂದು
21. ದಫೇದಾರ್ ಒಂದು
22. ನಾಯ್ಕ ಒಂದು
23. ಹೋಬಳಿದಾರರು ಎರಡು
24. ಗಾನ್‌ಸೆಟ್ ಬಾಜಾ (ನಾಲ್ಕು

25. ಸಿಪಾಯಿಗಳು ಹನ್ನೆರಡುಮಂದಿ)
26. ಸುಬೇದಾರ್ ಒಂದು
27. ಪಂಡಿತರು ಒಂದು
28. ಚೌರಿ ಒಂದು ಜತೆ
29. ನಿಶಾನಿ ಆನೆಗಳು ಎರಡು
30. ನಗಾರಿ ಆನೆಗಳು ಎರಡು
31. ಜೇಫಿ ಕುದುರೆಗಳು ನಾಲ್ಕು
32. ಪೆಂಡಾಯ್ ಮತ್ತು ದೀಪದ ಅಲಂಕಾರ
33. ಪೂವಿನಸೊಪ್ಪು ಮತ್ತು ಗರಿಗಂ

28-11-50

(ಸಹಿ) ಕೆ. ನರಸಿಂಹ ಐಯ್ಯಂಗಾರ್,
ಹುಜೂರ್
ಸೆಕ್ರೆಟರಿಗಳ ಪರವಾಗಿ

No. R. Dis. $M_1$ $M_2$ 1060—53—54

**ಮೈಸೂರು ಸೀಮೆಯ ಮುಜರಾಯಿ ಕಮಿಷನರವರ ಆಫೀಸಿನಿಂದ.**

ಮೈಸೂರು ಸೀಮೆಯ ಎಲ್ಲಾ ತಾಲ್ಲೂಕು ಅಮುಲ್ದಾರರು ವಗೈರೆ ಅವರಿಗೆ ಬರೆ ಕಳುಹಿಸಿದ ನಿರೂಪ ಅದಾಗಿ:-

ನಂಜನಗೂಡು ತಾಲ್ಲೂಕು ಸುತ್ತೂರು ಗ್ರಾಮದಲ್ಲಿರುವ ಶ್ರೀಗುರು ಶಿವರಾತ್ರಿ ಪ್ರಸನ್ನ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯೇತ್ಯಾದಿ ಬಿರುದಾಂಕಿತರಾದ ಶ್ರೀ ವೀರ ಸಿಂಹಾಸನದ ಮಠದ ಪಟ್ಟದ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳವರು ವೀರಶೈವ ಮತದ ಆಚಾರ ವಿಚಾರ ಮತ್ತು ಶಿಷ್ಯಾರ್ಜನೆ ಉದ್ದಿಶ್ಯ ಮೈಸೂರು ಸೀಮೆಯಲ್ಲಿ ಸಂಚಾರ ಮಾಡುವುದರಿಂದ ಸದರಿ ಸ್ವಾಮಿಗಳವರು ನಿಮ್ಮ ನಿಮ್ಮ ಗರಿ ಗಳ ಮಾರ್ಗವಾಗಿ ಬಂದಲ್ಲಿ ಅಟಕಾಯಿಸದೆ ಬಿಟ್ಟುಬಿಡುವುದು, ಮತ್ತು ಶ್ರೀ ಸ್ವಾಮಿ ಗಳವರಿಗೂ ಅವರ ಪರಿವಾರಕ್ಕೂ ವಾಜಿಬಿ ಖರೀದಿಗೆ ಬೇಕಾದ ಸಾಮಾನು ಕೊಡಿಸಿ ಕೊಡಬೇಕಲ್ಲದೆ ಖೈದುವಾರು ಜಾಗದಲ್ಲಿ ಇಳಿಸಿ, ರಾತ್ರಿವೇಳೆ ಕಳ್ಳಕಾಕರ ಉಪದ್ರವ ವಿಲ್ಲದಂತೆ ಖಬರುದಾರ್ ಮಾಡಿಸಿ ಮರ್ಯಾದೆಯಿಂದ ನಡೆದುಕೊಂಡು ಬರುವುದು.

ಇವರ ಮಠಹ ಈ ಕೆಳಗೆ ನಮೂದಿಸಿರುವ ಬಿರುದು ಬಾವಲಿಗಳು ಇರುತ್ತಾದ ದರಿಂದ ನಿಮ್ಮ ನಿಮ್ಮ ಸರಹದ್ದುಗಳಲ್ಲಿ ತಡೆಯದೆ ಬಿಟ್ಟು ಬಿಡುವುದು.

ರಾಜ ಬಿರುದುಗಳು

1) ಅಡ್ಡಪಲ್ಲಕ್ಕಿ (ಪಂಚಕಲಶ ಸಹಿತ)
2) ಮಕರತೋರಣ
3) ಹಗಲು ದೀವಟಿಗೆ
4) ಆನೆಯಮೇಲೆ ಅಂಬಾರಿ
5) ಪಂಚಕಲಶದ ಶ್ವೇತ ಛತ್ರಿ
6) ಮೊಹರ್ ಚಾಲ್
7) ಹಸುರು, ಕೆಂಪು, ಹಳದಿ ಆಪ್ತಗಿ
8) ಧವಳ ಶಂಖ
9) ಸೂರೇಪಾನ
10) ನವಬತ್

## ವಿಶೇಷ ಬಿರುದುಗಳು

1) ಶ್ವೇತ ಛತ್ರ
2) ಕುದುರೆಮೇಲೆ ಡಂಕ
3) ಸೂರ್ಯವಾದ್ಯ
4) ಚಂದ್ರವಾದ್ಯ
5) ಚಾಮರ
6) ಕಾವಿ ನಿಶಾನಿ
7) ಒಂಟೆಯಮೇಲೆ ನಗಾರಿ
8) ಭೂಚಕ್ರದ ಕೊಡೆ
9) ಹಸರು ಛತ್ರಿ

## ಸಾಧಾರಣ ಬಿರುದುಗಳು

1) ಅಯ್ಯನವರು 100
2) ಶೂದ್ರಜವಾನರು 150
3) ಆನೆ 2
4) ಒಂಟೆ 4
5) ಕುದುರೆಗಳು 25
6) ಬೆಳ್ಳಿ ಪಲ್ಲಕ್ಕಿ 1
7) ಸಾದಾಪಾಲಕಿ 1
8) ಮ್ಯಾನಾ 1
9) ಭಿಜಫಿರಂಗು 2
10) ಕವಡು 5
11) ಕೆಂಪು ಕಲಾಬತ್ತು ಛತ್ರಿ 1
12) ತಲೆಗೆಕಟ್ಟಿ ಬಾರಿಸುವ ಚಂದ್ರ
13) ತಲೆಗೆಕಟ್ಟಿಗೆ 2 ವಾದ್ಯ
ಬಾರಿಸುವ ಸೂರ್ಯವಾದ್ಯ 2
14) ಬೆಳ್ಳಿ ಸೋಟಾಗಳು 2
15) ಚಂದ್ರಗಾವಿ ಉಡಾಸು 2
16) ಬೆಳ್ಳಿಭಡಿಚಿತ್ತಗಳು 2
17) ಜಾಗಟೆ 2
18) ಕತ್ತಿಗಳು 2
19) ನಂದೀಧ್ವಜ 1
20) ಉಡುಮವಾದ್ಯ 2
21) ಪೆಟ್ಟಿಗೆಗಾಡಿ 1
22) ಕುದುರೆಗಾಡಿ 1
23) ಮೋಟಾರುಕಾರು 2
24) ಮೊಟಾರ್‌ಬಸ್ 1
25) ಚಕ್ಕಡಾಗಾಡಿಗಳು 10
26) ಪಂಚದೀವಟಿಗೆಗಳು 2
27) ತೇವೆ ಪಾವಡಿ 2
28) ಮಾಯಮುರತಾಬು
29) ಶಂಖ
30) ಕಾವಿಝೂಂಡಾ 2
31) ಪಟ್ಟಾವಳಿಝೂಂಡಾ 2
32) ಬೆಳ್ಳಿಕಟ್ಟಿಗೆ 50
33) ಹಸರು ಕಟ್ಟಿಗೆ 50
33) ಚಕ್ಕಡಾಬಂಡಿಗಳು 30
35) ಬಿಲ್ಲೆ ಡವಾಲಿಯುವರು 40
36) ವೇದಘೋಷಕರು 4
37) ಪಂಡಿತರು 4

## ವಾದ್ಯಗಳು

1) ಕರಡಿಸಮ್ಮೇಳ
2) ಡೋಳು
3) ತಮ್ಮಟೆಗಳು
4) ಕೊಂಬುಗಳು
5) ತಾಳಸಾಮುರ್ಫ
6) ಬಾಜಾ ಭಜಂತ್ರಿ ವಗೈರೆ ವಾದ್ಯಗಳು

This Rahadari is issued under the authority of-

1. G. G. No. R 8670-82--Muz: 162-46-3, Dated 14th March 1947.
2. G. O. No. R. 175-187-Muz. 162-46-7, Dated 4th July 1947.
3. G. O. No, R. 68-79-Muz I40-50 4, Dated 2nd April 1953
4. G. O. No. R. 18531-43-Muz 22-53-4, Dated 16th February 1954

Items 9 and 18 in the Rahadari not to be used free of License vide letter No. H A. 3002 11 Pol 63-53-4, dated 8-8-53 from the under Secretary to Government of Mysore. Home Department, Bangalore, to the Muzarai Commissioner in Mysore.

*Dated 15th March 1954* — G. N. Nagaraja Rao

BANGALORE — *Muzrai Commissioner*

ಮೇಲ್ಕಂಡ ಬಿರುದಾವಳಿಗಳೊಡನೆ ಜಗದ್ಗುರುಗಳವರು ತಮ್ಮ ಕರಕಮ
ಸಂಜಾತರಾದ ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರ ರಜತಾಂಧೋ
ಕೋತ್ಸವ ಸಮಾರಂಭಗಳಿಗೆ ಅನುಗ್ರಹವಿತ್ತಿರುತ್ತಾರೆ. ಲಕ್ಷಾಂತರ ರೂಪಾಯಿಗ
ವೆಚ್ಚದಲ್ಲಿ ರಚಿತವಾಗಿರುವ ಬೆಳ್ಳಿಯ ಪಲ್ಲಕ್ಕಿಯಲ್ಲಿ ರತ್ನಖಚಿತವಾದ ಕಿರೀಟಧಾರ
ಯೊಂದಿಗೆ ಭಕ್ತರ ಅಭೀಷ್ಟದಂತೆ ನಾನಾ ಕಡೆಗಳಲ್ಲಿ ಜಗದ್ಗುರು ಶ್ರೀ ಶಿವರಾ
ರಾಜೇಂದ್ರ ಮಹಾಸ್ವಾಮಿಗಳವರ ಅಡ್ಡಪಲ್ಲಕ್ಕಿ ಮಹೋತ್ಸವವು ನೆರವೇರುತ್ತೆ. ನಂ
ನಗೂಡು ತಾಲ್ಲೂಕು ದೇವನೂರು, ಟಿ. ನರಸೀಪುರದ ತಾಲ್ಲೂಕು ಬಿನಕನಹಳ್ಳಿ
ಹಿರಿಯೂರು, ಕಳ್ಳೀಪುರ, ಬೂವಳ್ಳಿ, ಮಳವಳ್ಳಿ ತಾಲ್ಲೂಕು ರಾಗಿಬೊಮ್ಮನಹಳ್ಳಿ
ಕೊಳ್ಳೇಗಾಲದತಾಲ್ಲೂಕು ಗೋಪಿಶೆಟ್ಟಿಯೂರು, ನಂಜನಗೂಡುತಾಲ್ಲೂಕು ಕಲ್ಲ
ಮುಂತಾದ ಕಡೆಗಳಲ್ಲಿ ಅತಿವಿಜೃಂಭಣೆಯಿಂದ ಅಡ್ಡಪಲ್ಲಕ್ಕಿ ಮಹೋತ್ಸವವನ್ನು ಭಕ್ತ
ನೆರವೇರಿಸಿರುತ್ತಾರೆ. ಪ್ರತಿವರ್ಷವೂ ನಾಲ್ಕಾರು ಕಡೆ ಭಕ್ತರ ಅಭಿಲಾಷೆಯಂತೆ
ಉತ್ಸವವು ಅತ್ಯಂತ ವೈಭವದಿಂದ ಜರುಗಿಸಲ್ಪಡುತ್ತದೆ.

ಜನಹಿತಸಾಧನೆಯೇ ಸರ್ವಜೀವನ ತಂತ್ರವಾಗಿಟ್ಟುಕೊಂಡು ಸಾರ್ವಜನಿಕರಿ
ಉಪಯುಕ್ತ ಕಾರ್ಯಗಳನ್ನು ನೆರವೇರಿಸುತ್ತಾ ಲೋಕವಿಖ್ಯಾತವಾಗುತ್ತಿರುವ ಶ್ರೀ

ಸುತ್ತೂರು ವೀರಸಿಂಹಾಸನಮಠದ ಸ್ಥೂಲಚಿತ್ರವನ್ನು ನಿರೂಪಿಸಲು ಈ ಕೃತಿಯಲ್ಲಿ ಯತ್ನಿಸಿದೆ. ಇದು ಶ್ರೀಮಠದ ಪೂರ್ಣಚರಿತ್ರೆಯಲ್ಲ. ಇದುವರೆಗೆ ನಮ್ಮ ಅವಗಾಹ ನೆಗೆ ನಿಲುಕಿದ ಕಾರ್ಯವೈಖರಿಯ ಸಂಗ್ರಹರೂಪಣೆ ಮಾತ್ರ. ಜನಪ್ರಿಯವಾದ ಸಂಸ್ಥೆಯ ರೂಪುರೇಷೆಗಳನ್ನು ತಿಳಿಯಬಯಸುವ ಸಹೃದಯರಿಗಾಗಿ ಈ ಕೃತಿಯು ರಚನೆಯಾಗಿದೆ. ಆದುದರಿಂದ ಕನ್ನಡನಾಡಿನ ಐತಿಹಾಸಿಕ ವೈಭವಗಳಲ್ಲೊಂದಾದ ಈ ಪುಣ್ಯಸಂಸ್ಥೆಯ ವಿಹಂಗಮಚಿತ್ರ ಓದುಗರಿಗೆ ಆನಂದ ಆಸಕ್ತಿಗಳನ್ನು ಒದಗಿಸ ಬಹುದೆಂದು ಆಶಿಸಿದೆ. ಈ ಸಂಸ್ಥೆಯು ಭಾರತದಲ್ಲೆ ಭವ್ಯಸಂಸ್ಥೆಯಾಗಿ ಮಾರ್ಪಟ್ಟು ಲಕ್ಷಾಂತರ ಜನರ ಅಭ್ಯುದಯಕ್ಕೆ ಸಾಧನವಾಗುವ ಸಿದ್ಧಿನಿಲಯವಾಗಲೆಂದು ಆಶಿಸುವ ಆಸ್ತಿಕಮಹನೀಯರ ಔದಾರ್ಯವನ್ನು ಸದಾ ಸ್ವಾಗತಿಸುತ್ತಾ ಈ ಕೃತಿಯನ್ನು ಸಮರ್ಪಿಸುತ್ತಿದ್ದೇವೆ.

ನಮಗೆ ದೊರೆತ ಹಲವಾರು ಸಾಧನಗಳಿಂದ ಮಾತ್ರ ಈ ಕೃತಿ ಹೆಣೆಯಲಾಗಿದೆ. ಇಲ್ಲಿರುವ ಕೆಲವು ಭಾಗಗಳು ಜಗದ್ಗುರುಗಳವರ ದೃಷ್ಟಿಯಿಂದ ಅನಪೇಕ್ಷಿತವಾದಗೂ ಸಂಸ್ಥೆಯ ಅಭಿಮಾನಿಗಳ ದೃಷ್ಟಿಯಿಂದ ಅವಶ್ಯಕವೆಂದು ಭಾವಿಸಿ ಬರೆಯಲಾಗಿದೆ. ವಾಸ್ತವಾಂಶಗಳು ಪ್ರಿಯವಾಗಲಿ ಅಪ್ರಿಯವಾಗಲಿ ಬಹಿರಂಗವಾಗುವುದು ಲೇಸು. ಸದಾ ಲೋಕಕಲ್ಯಾಣದ ಹಿತಚಿಂತಕರಿಗೆ ಅದೇ ತಮ್ಮ ಆದ್ಯ ಕರ್ತವ್ಯವೆಂದು ಭಾವಿಸಿ ದವರಿಗೆ ಪ್ರಶಂಸೆಗಳ ಲಾಲಸೆ ಇರುವುದಿಲ್ಲ ಅಂತೆಯೇ ಜಗದ್ಗುರುಗಳವರು ಪ್ರಶಂಸಾ ತ್ಮಕ ವಿಷಯಗಳ ಪ್ರಕಟಣೆಗೆ ಒಪ್ಪದಿದ್ದರೂ ಸಹ ಪ್ರಶಂಸೆಗೆ ಅರ್ಹವಾದುದನ್ನು ಪ್ರಕಟಗೊಳಿಸಿದೆ. ಅದಕ್ಕಾಗಿ ಜಗದ್ಗುರುಗಳವರ ದಿವ್ಯಸನ್ನಿಧಿಯಲ್ಲಿ ಈ ಮೂಲಕ ಕ್ಷಮೆಯನ್ನು ಪ್ರಾರ್ಥಿಸುವುದು ಅನಿವಾರ್ಯ. ಐತಿಹಾಸಿಕ ಸಂಗತಿಗಳಲ್ಲಿ ಅಥವಾ ವ್ಯಾವಹಾರಿಕ ಪ್ರಸಂಗಗಳಲ್ಲಿ ಅರಿಯದೇ ಅಪರಾಧವೆಸಗಿದ್ದರೆ ಆದಿಗುರು ಶ್ರೀ ಶಿವ ರಾತ್ರೀಶ್ವರರು ಮನ್ನಿಸಿ ಅನುಗ್ರಹಿಸಬೇಕೆಂದು ಬೇಡುತ್ತಾ ಈ ಕೃತಿಯನ್ನು ಅವರ ಪಾದಾರವಿಂದಗಳಲ್ಲಿ ಅರ್ಪಿಸಿರುತ್ತೇವೆ.

ಪ್ರಸ್ತಾವನೆ ಮುಗಿಯುವ ಮುನ್ನ ಈ ಕೃತಿ ಪ್ರಕಾಶನಕ್ಕೆ ನೆರವಾದ ಮಹನೀ ಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯ. ಹಿರಿಯ ಜಗದ್ಗುರುಗಳವರು ಸದಾ ಮಂತ್ರ ತಪಸ್ಸಿನಲ್ಲಿ ನಿರತರಾಗಿ ತಮ್ಮ ವೃದ್ಧಾಪ್ಯ ಜೀವನವನ್ನು ಶಿವಸಾಮರಸ್ಯಸಾಧನೆ ಯಲ್ಲಿ ಸಾಗಿಸುತ್ತಿದ್ದಾರೆ. ಈ ಕೃತಿರಚನೆಯ ಕಾಲದಲ್ಲಿ ಅನೇಕ ವೇಳೆ ಅವರಿಂದ ಸಲಹೆಗಳನ್ನೂ ಸಾಧನ ಸಂಗ್ರಹಗಳನ್ನೂ ಒದಗಿಸಲು ಒತ್ತಾಯಮಾಡಿದೆವು. ಆದರೂ ಶ್ರೀಗಳವರು ಕೃಪೆಯಿಂದ ಅನುಗ್ರಹಿಸಿರುವುದನ್ನು ಈ ಸಮಯದಲ್ಲಿ ಭಕ್ತಿ ಯಿಂದ ಸ್ಮರಿಸುತ್ತೇವೆ. ಮೈಸೂರಿನಲ್ಲಿರುವ "ಫೈನ್ ಆರ್ಟ್ಸ್ ಸ್ಟುಡಿಯೋ ಮಾಲಿಕ ರಾದ ಶ್ರೀ ಮಲ್ಲಿಕಾರ್ಜುನಪ್ಪನವರು ನಮ್ಮ ಸಂಸ್ಥೆಯ ಅಭಿಮಾನಿಗಳಲ್ಲೊಬ್ಬರು. ಅವರು ನಾವು ಕೇಳಿದ ಭಾವಚಿತ್ರಗಳನ್ನು ಒದಗಿಸಿ ಸಹಾಯಮಾಡಿದರು. ಅಂತೆಯೇ

ಗೀತಾ ಸ್ಟುಡಿಯೋ ಮಾಲೀಕರಾದ ಶ್ರೀ ಲಕ್ಷ್ಮಣ್‌ರವರು ಸಂಸ್ಥೆಯ ಕಾರ್ಯಕ್ರಮ
ಗಳನ್ನು ಛಾಯಾಚಿತ್ರಣಗೊಳಿಸಿ ಈ ಗ್ರಂಥಕ್ಕೆ ಕೆಲವು ಚಿತ್ರಗಳನ್ನು ಒದಗಿಸಿದರು.
ಇವರಿಗೆ ನಮ್ಮ ಕೃತಜ್ಞತೆಯು ಸಲ್ಲುತ್ತದೆ. ನಮ್ಮ ಸಂಸ್ಥೆಯ ಅನೇಕ ಮಂದಿ ಕಾರ್ಯ
ಕರ್ತರು ಈ ಗ್ರಂಥಪ್ರಕಟಣಾ ಕಾರ್ಯದಲ್ಲಿ ಶ್ರಮವಹಿಸಿದ್ದಾರೆ ಅವರಿಗೆ ಶ್ರೀ ಗುರು
ವಿನ ಅನುಗ್ರಹವನ್ನು ಪ್ರಾರ್ಥಿಸುತ್ತೇವೆ. ಈ ಗ್ರಂಥವು ಇಷ್ಟು ಶೀಘ್ರ ಪ್ರಕಟವಾಗಲು
ನೆರವಾದ ಶ್ರೀ ನಂದಿಕೇಶ್ವರ ಮುದ್ರಣಾಲಯದ ಒಡೆಯರಿಗೆ ನಮ್ಮ ಅಭಿನಂದನೆಗಳು
ಈ ಕೃತಿಯಲ್ಲಿ ಕಂಡುಬರುವ ಸಂಸ್ಥೆಯ ಅಭಿಮಾನಿಗಳೆಲ್ಲರಿಗೂ ಪರಮಾತ್ಮನು ಸರ್ವ
ಸನ್ಮಂಗಳವನ್ನುಂಟುಮಾಡಲೆಂದು ಹಾರೈಸಿ ಪ್ರಸ್ತಾವನೆಯನ್ನು ಮುಗಿಸಿದೆ.

ಶ್ರೀಗುರುಕರುಣಾಭಿಲಾಷಿ
**ಹೆಚ್. ಗಂಗಾಧರನ್**
(ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ
ಪ್ರಕಾಶಕರ ಪರವಾಗಿ)

ತಾ॥ 9-10-62
ವಿಜಯದಶಮಿ
ಮೈಸೂರು

---

# ಅನುಕ್ರಮಣಿಕೆ

(ಪುಟ)



ಮಂತ್ರಕೃತಿಗಳ ಮಹಾಪೂಜೆಯಲ್ಲಿ ಉಭಯ ಜಗದ್ಗುರುಗಳವರು



ರಾಜ್ಯಪಾಲರು ಜಗದ್ಗುರುಗಳವರಿಗೆ ಪ್ರಣಾಮವನ್ನೆಸಗುತ್ತಿರುವುದು.

॥ ಓಂ ॥

# ಆಶೀರ್ವಾದ



ವೀರಸಿಂಹಾಸನಾಸೀನಃ ಶಿವರಾತ್ರೀಶ್ವರೋವಿಭುಃ ।
ದದ್ಯಾತ್ ವಿಶ್ವಸ್ಯ ಜಗತಃ ಶಾಂತಿಭಿಕ್ಷಾಂ ಕೃಪಾನಿಧಿಃ ॥

ಮೈಸೂರು ಜಿಲ್ಲಾ ನಂಜನಗೂಡು ತಾಲ್ಲೂಕು ಸುತ್ತೂರು ವೀರಸಿಂಹಾಸನ ಮಠದ ಸಂಸ್ಥಾಪಕರೂ, ಶಿವಯೋಗೀಂದ್ರರೂ, ಅವತಾರಿಗಳೂ ಆದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಪ್ರಭುಗಳ ಸಹಸ್ರ ವರ್ಷದ ಜಯಂತಿ ಉತ್ಸವ ಮತ್ತು ಪೀಠದ ಅಧಿಪತಿಗಳಿಂದ ಅನುಗೃಹೀತವಾದ ಆಶೀರ್ವಾದ ಇವು ಈ ಕೃತಿಯ ಸಾಹಿತ್ಯ ವಸ್ತುಗಳು.

ಮಹಾನುಭಾವರ ಮಹಿಮೆ ಮತ್ತು ಪ್ರಭಾವದಿಂದ ನಡೆಯುತ್ತಿರುವ ಜನಸೇವಾ ಕ್ಷೇತ್ರದ ಹಿರಿಮೆಯನ್ನು ಕೃತಿರೂಪದಲ್ಲಿ ಓದುಗರ ಮುಂದಿಡುವುದೇ ಈ ಆಶೀರ್ವಾದ ಗ್ರಂಥದ ಉದ್ದಿಶ್ಯ.

ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರ ಸಹಸ್ರ ವಾರ್ಷಿಕ ಜಯಂತಿ ಮಹೋತ್ಸವದಲ್ಲಿ ಸಮರ್ಪಿಸಿದ ಕವನ ಕಾಣಿಕೆ.

## ಅವತರಿಸಿ ಬಾ ಶ್ರೀ ಜಗದ್ಗುರು

ಓಂ ನಮೋ ನಮೋ ಶ್ರೀ ಜಗದ್ಗುರು
ಶ್ರೀ ಜಗದ್ಗುರುಽಶಿವರಾತ್ರೀಶ್ವರಾಽ
ಬಾರ ಬಾರ ಬಾರಾ
ಇನ್ನೊಮ್ಮೆ ಅವತರಿಸಿ ಬಾರಾ
ಬಾರಸ್ವಾಮಿ ಧರ್ಮಪ್ರೇಮಿ
ಭುವಿಗೆ ಇಳಿದು ಬಾ
ಕರ್ಮ ಭೂಮಿಯಲ್ಲಿ ನವೆವ
ಜನವನೆತ್ತ ಬಾ

ಕೈಲಾಸದಿಂದ ಶಿವನ ಬಳಿಯಿಂದ
ಶರಣ ಜನವೃಂದ ಉದ್ಧರಿಸ ಬಾ
ಬಸವ ಅಲ್ಲಮರ ಎಲ್ಲ ಜಂಗಮರ
ಬಾಳ ತತ್ವವನು ಬಿತ್ತರಿಸ ಬಾ
ಓಂ ನಮೋ ನಮೋ ಶ್ರೀ ಜಗದ್ಗುರು

ಶ್ರೀ ಜಗದ್ಗುರುಽಶಿವರಾತ್ರೀಶ್ವರಾ
ಹರನ ಹಿರಿಶರಣ
ವಿಮಲ ಅಂತಃಕರಣ
ಇನ್ನೊಮ್ಮೆ ಅವತರಿಸಿ ಬಾ
ಆ ಯಾವ ಮಾತೆ ಪೂತೆ
ಇನ್ನೊಮ್ಮೆ ಜನ್ಮವೀಯಳೇಕೆ
ನ್ಯಾಯ ಇಲ್ಲಿಲ್ಲ–ಅನ್ಯಾಯವೆಲ್ಲ
ಮರೆತಿಹರು ಧರ್ಮ ಕಚ್ಚಾಟಬರಿ
ಸ್ವಾರ್ಥ ನೋಟ

ಬಂದಾರೆ ಬಾರ, ಕಿವಿಯಾರ ಕೇಳ
ಕೂಳಕೂಗಽಽ
ವಿದ್ಯಾವತಾರ ಶಿವಲೋಕವೀರಬಾರಽ
'ಕಾಯಕವೆ ಕೈಲಾಸ'ವೆಂದಚ್ಚರಿಸು ಬಾರಽ

3

ಹೇ ! ಅನ್ನದಾನದ ಮೂಲಗುರು
ಹೀಗೆ ಮಾಡದಿರು ಅಲ್ಲಬಾ
ಓಂ ನಮೋ ನಮೋ ಶ್ರೀ ಜಗದ್ಗುರು
ಶಿವರಾತ್ರೀಶ್ವರಾಽ

ಶಿವಶುಭ್ರಕರುಣ ರೇಣುಕರ ಕಿರಣ
ಶರಣ ಗಣ ಪ್ರಾಣಽ

ನೀನೆ ತಾಯಿ, ತಂದೆ ಬಾರಽ
ಬಂದಾರೆ ಬಾರಽ ಕಣ್ತೆರೆದು ನೋಡ
ಕಂಗೆಟ್ಟ ಜಗವ
ಬಾರ ಬಾರ ಬಾರಾಽ
ಇನ್ನೊಮ್ಮೆ ಅವತರಿಸಿ ಬಾರಽ

ಕೈಯಲ್ಲಿ ಇರುವ ಕಿರುನೆಲ್ಲಿಫಲವ
ಕಾಂಬಷ್ಟು ಸುಲಭದಲ್ಲೆ
ಕೈಲಾಸವನ್ನ ನೀಕಂಡೆ ಗುರುವೆ
ತನಜೀವ ಮಾನದಲ್ಲೇ

ಧರ್ಮ ನಂಬಿಕೆಯ ಕಳೆದುಕೊಂಡ ನ
ಮ್ಮೆದೆ ಹೊಕ್ಕು ನಿಂತು ನೀನು
ಷಟ್ಸ್ಥಲವ ಕಂಡ ಗುರುದೇವ ಬೆಳಗು
ಭುವಿ ಬೆಳಗುವಂತೆ ಭಾನು

ಓಂ ನಮೋ ನಮೋ ಶ್ರೀ ಜಗದ್ಗುರು
ಶಿವರಾತ್ರೀಶ್ವರಾಽ
ಬಾರ ಬಾರ ಬಾರಾ
ಇನ್ನೊಮ್ಮೆ ಅವತರಿಸಿ ಬಾರಾ

**ನಾಯಕ ಶಾಂತರಾಮು**
ಶ್ರೀ ಶಿವರಾತ್ರೀಶ್ವರ ವಿದ್ಯಾಪೀಠದ ವಿದ್ಯಾರ್ಥಿ

# ಶ್ರೀ ಸುತ್ತೂರು ವೀರಸಿಂಹಾಸನ ಮಠ
## (ಐತಿಹಾಸಿಕ ವಿಹಂಗಮ ದೃಶ್ಯ)

ಶ್ರೀ ಸುತ್ತೂರು ವೀರಸಿಂಹಾಸನಮಠವು ವೀರಶೈವ ಮಠಾಚಾರ್ಯ ಪೀಠಗಳ ಲ್ಲೊಂದಾದ ಶ್ರೀ ರೇಣುಕಾಚಾರ್ಯ ಪರಂಪರೆಗೆ ಸೇರಿದುದು. ಜಗದ್ಗುರು ಶ್ರೀ ರೇಣುಕಾ ಚಾರ್ಯರ ಕೃಪಾ ಪಾತ್ರರಾದ ಶ್ರೀ ಶಿವರಾತ್ರೀಶ್ವರಸ್ವಾಮಿಗಳು ರಾಜೇಂದ್ರ ಚೋಳ ಭೂಪಾಲನ ಪ್ರಾರ್ಥನೆಯಂತೆ ಶ್ರೀ ರೇವಣಸಿದ್ದೇಶ್ವರ ಬೆಟ್ಟ (ರಾಮನಗರ ತಾಲ್ಲೂಕು) ದಿಂದ ಆಗಮಿಸಿ ಕಪಿಲಾ ತೀರದ ಈಗಿನ ಪವಿತ್ರಕ್ಷೇತ್ರದಲ್ಲಿ ನೆಲಸಿದಂತೆ ತಿಳಿದು ಬರುತ್ತದೆ.

ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರ ಕಾಲಮಾನಗಳು ಚಾರಿತ್ರಿಕವಾಗಿ ನಿರ್ಧರಿಸುವುದು ಕಷ್ಟ. ಆದರೆ ಸುಪ್ರಸಿದ್ಧ ಪಾಲ್ಕುರಿಕೆ ಸೋಮನಾರಾಧ್ಯರ (1195) 'ಗಣಸಹಸ್ರನಾಮ'ದಲ್ಲಿ ಶಿವರಾತ್ರಿ ಎಂಬ ಹೆಸರಿನ ಮೂವರು ವ್ಯಕ್ತಿಗಳು ಉಲ್ಲಿಖಿತ ರಾಗಿರುವುದರಿಂದಲೂ, ಶಿವರಾತ್ರೀಶ್ವರರ ತರುವಾಯ ಈ ಪೀಠಾರೋಹಣ ಮಾಡಿದ ಈಶಾನೇಶ್ವರ ಒಡೆಯರ ಕಾಲದಲ್ಲಿ ರಾಜೇಂದ್ರ ಚೋಳಭೂಪಾಲನು(1012-1048) ಈ ಪೀಠದ ಮೂಲಸ್ಥಾನೇಶ್ವರನಿಗೆ ಅನೇಕ ದತ್ತಿಗಳನ್ನು ದಾನಮಾಡಿರುವಂತೆ ಶಿಲಾ ಶಾಸನಗಳಿಂದ ತಿಳಿದುಬರುವುದರಿಂದಲೂ ಆದಿಗುರು ಶಿವರಾತ್ರೀಶ್ವರರು ಸು. 10 ನೇ ಶತಮಾನಕ್ಕಿಂತ ಹಿಂದಿನವರೆಂದು ಊಹಿಸಬಹುದಾಗಿದೆ.

ಈಶಾನೇಶ್ವರರ ತರುವಾಯ ಈ ಪೀಠದಲ್ಲಿ ಆಗಿಹೋದ ಮೂರ್ತಿಗಳ ಚರಿತ್ರೆಗಳು ಐತಿಹಾಸಕ ದೃಷ್ಟಿಯಿಂದಲೂ ಸಮರ್ಥಿಸಲು ಬರುತ್ತವೆ. ಕ್ರಿ. ಶ. ಸು. 1169 ವೀರಗಂಗ ಪ್ರತಾಪ, ಹೊಯ್ಸಳ ನಾರಸಿಂಹದೇವ ತತ್ಪಾದಪದ್ಮೋಪಜೀವಿ ಮಹಾ ಪ್ರಧಾನಿ ದಂಡನಾಯಕ ಲಕ್ಷ್ಮಯ್ಯ ಇವರ ಕಾಲದಲ್ಲಿ 'ಸೊತ್ತಿಯೂರು ರಾಜಧಾನಿ ಯೂ ಆಗಿದ್ದಂತೆ ತಿಳಿದುಬರುತ್ತದೆ. ಆಗ್ಗೆ ಸುತ್ತೂರು ಪೀಠಾಧಿಪತಿಗಳಾಗಿದ್ದ ಶ್ರೀ ನಿಜಲಿಂಗದೇಶಿಕೇಂದ್ರರು ಮಹಾಪ್ರಭಾವಶಾಲಿಗಳಾಗಿದ್ದರು. ಇವರು 'ಪರಮ ಶಿವಾಧಿಕ್ಯ ಶಿಖಾಮಣಿ' (ಕ. ಚ. III ಪು. 425) ಎಂಬ ಗ್ರಂಥವನ್ನು ರಚಿಸಿ ಪ್ರಖ್ಯಾತರಾಗಿದ್ದರು. ಕಲ್ಯಾಣದ ಕ್ರಾಂತಿಯ ತರುವಾಯ ಶಿವಶರಣ ಮಡಿವಾಳ ಚೌಡಯ್ಯನು ಸುತ್ತೂರಿಗೆ ಆಗಮಿಸಿ ನೆಲೆಸಿದುದರ ಪರಿಣಾಮವಾಗಿ ರೇಣುಕಾಚಾರ ಉಪಪೀಠಗಳಲ್ಲೊಂದಾದ ಸುತ್ತೂರಿಗೆ 'ಮುಸುಡಿಬಗೆ' ಎಂಬ ಉಪನಾಮವುಂಟಾ ದಂತೆ ತಿಳಿದುಬರುತ್ತದೆ.

ಮೇಲಾಗಿ ಶ್ರೀಮನ್ನಿರಂಜನ ಜಗದ್ಗುರು ಪೀಠಾಚಾರ್ಯರೆನಿಸಿದ್ದ ಮಲೆಯ ಮಾದೇಶ್ವರರು ಮೊದಲು ಇಲ್ಲಿ ರಾಗಿ ಬೀಸುವ ಕಾಯಕದಲ್ಲಿ ನಿರತರಾಗಿದ್ದ ವಿಷಯ

ಪೀಠದ ಪವಿತ್ರತೆಯನ್ನು ಹೆಚ್ಚಿಸಿದೆ. ಶಿವಶರಣರಲ್ಲೊಬ್ಬರಾದ 'ಆಮುಗಿದೇವಯ್ಯ' ಸಹ ಸುತ್ತೂರು ಪೀಠಾಧೀಶ್ವರರ ಶಿಷ್ಯನೆನಿಸಿದ್ದ ಅಂಶವು ಗಮನಾರ್ಹವಾದುದು.

ಮಹಾಮಹಿಮರಾದ ತೋಂಟದ ಸಿದ್ದಲಿಂಗೇಶ್ವರರ ಕೃಪಾಪಾತ್ರರಾಗಿದ್ದ ಸಿದ್ದಮಲ್ಲ ಶಿವಾಚಾರ್ಯರು, ವಚನಕಾರ ಘನಲಿಂಗಿದೇಶೀಕೇಂದ್ರರು ಈ ಪೀಠಾರೋಹಣ ಮಾಡಿದವರಲ್ಲಿ ಮುಖ್ಯರು. ಪೀಠದ 9ನೆಯ ಪಟ್ಟ ಭದ್ರರಾಗಿ ಇದ್ದ ಭಂಡಾರಿ ಬಸವಪ್ಪ ಒಡೆಯರು (1515) ಮತ್ತು 12ನೆಯ ಇಮ್ಮಡಿ ಶಿವರಾತ್ರೀಶ್ವರರ ಕಾಲದಲ್ಲಿ ಪೀಠದ ಕೀರ್ತಿಯು ವಿಜಯನಗರದ ಅರಸು ಮನೆತನದವರ ಪ್ರೀತಿ ಗೌರವಗಳಿಗೂ ಪಾತ್ರವಾಗಿದ್ದ ಅಂಶವು ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಮೈಸೂರಿನ ಮಹಾ ಪ್ರಭುಗಳಾಗಿದ್ದ ಮುಮ್ಮಡಿ ಕೃಷ್ಣರಾಜೇಂದ್ರ ಒಡೆಯರವರ ಪ್ರೀತಿಗೌರವಗಳಿಗೆ ಪಾತ್ರರಾಗಿದ್ದ ಶ್ರೀ ಮಹಾಂತ ದೇಶೀಕೇಂದ್ರರು ಸುಪ್ರಸಿದ್ಧರೇ ಆಗಿರುತ್ತಾರೆ.

ಇಂತಹ ಪ್ರಭಾವಯುತವಾದ ಸುತ್ತೂರು ವೀರಸಿಂಹಾಸನವನ್ನು ಅಲಂಕರಿಸಿ ಸಿರುವ ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು ಮತ್ತು ಇವರ ಕರಕಂಜಾತ ರಾದ ಜಗದ್ಗುರು ಶ್ರೀ ಶಿವರಾತ್ರಿರಾಜೇಂದ್ರಮಹಾಸ್ವಾಮಿಗಳವರ ಕಾಲದಲ್ಲಿ ಬಿದಿಗೆಯ ಚಂದ್ರನಂತೆ ವರ್ಧಿಸುತ್ತಿರುವ ಪೀಠದ ಕೀರ್ತಿಯು ದಿಗಂತ ವಿಶ್ರಾಂತವಾಗುತ್ತಿದೆ. ಮೈಸೂರು ನಗರ ಮತ್ತು ಡಿಸ್ಟ್ರಿಕ್ಟ್ ಆಮಳೆ ಪೀಠದ ಆಶ್ರಯದಲ್ಲಿ ಸ್ಥಾಪಿತವಾಗಿರುವ ಹತ್ತಾರು ವಿದ್ಯಾರ್ಥಿನಿಲಯಗಳಲ್ಲಿ ಎಲ್ಲ ಜಾತಿಮತಗಳ ಸಹಸ್ರಾರು ಮಂದಿ ವಿದ್ಯಾರ್ಥಿಗಳು ವಸತಿ, ಪ್ರಸಾದಗಳನ್ನು ಪಡೆಯುತ್ತಿರುವುದಲ್ಲದೆ ಈಚೆಗೆ ಸ್ಥಾಪಿತ ವಾಗಿರುವ ಅನೇಕ ಶಾಲಾ ಕಾಲೇಜುಗಳು, ಸ್ತ್ರೀ' ಪುರುಷರ ಮೂಲಶಿಕ್ಷಣ ವಿದ್ಯಾ ಕೇಂದ್ರಗಳು ಮತ್ತ ಸಂಸ್ಕೃತ ಪಾಠಶಾಲೆ, ಗುರುಕುಲಗಳಲ್ಲಿ ಅಭ್ಯಾಸಮಾಡುತ್ತಿರುವ ವಿದ್ಯಾರ್ಥಿಗಳು ಅಸಂಖ್ಯಾತರಾಗಿರುತ್ತಾರೆ, ಭಾರತ ಸಂಸ್ಕೃತಿಯ ನಂದಾದೀವಿಗೆ ಯನ್ನು ಪ್ರತಿ ಭಾರತೀಯನ ಹೃದಯಮಂದಿರದಲ್ಲಿ ಅಖಂಡವಾಗಿ ಬೆಳಗಿಸುವ ದಿವ್ಯ ಸಂಕಲ್ಪವನ್ನು ತಳೆದಿರುವ ಈ ಸಂಸ್ಥೆಗಳಿಗೆ ರಾಷ್ಟ್ರ ಸರ್ಕಾರ ಮತ್ತು ಮಹಾಜನತೆ ನೀಡುತ್ತಿರುವ ಸಹಾಯ ಸಾರ್ಥಕ ಮತ್ತು ಸೂಕ್ತ. ಭಾರತದ ಮಠಗಳಿಗೆ ಮಾದರಿ ಯಾಗಿರುವ ಪೀಠದ ಕಾರ್ಯಕಲಾಪಗಳನ್ನು ಇತೋಪ್ಯತಿಶಯವಾಗಿ ಅಭಿವೃದ್ಧಿ ಗೊಳಿಸುವುದರ ಮೂಲಕ ಪೀಠಾಧೀಶ್ವರರಾದ ಉಭಯ ಜಗದ್ಗುರುಗಳಿಗೆ ಭಗವಂತ ನಾದ ಆದಿಗುರು ಶಿವರಾತ್ರೀಶ್ವರನು ಚಿರಾಯುರಾರೋಗ್ಯ ಶಿವಯೋಗ ಸಾಮ್ರಾಜ್ಯ ವೈಭವಗಳನ್ನು ಅನುಗ್ರಹಿಸಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಇಂತು
ಶ್ರೀ ಶಿವರಾತ್ರೀಶ್ವರ ಜಯಂತಿ
ಮಹೋತ್ಸವ ಸಮಿತಿ

# ಶ್ರೀ ಸುತ್ತೂರು ವೀರಸಿಂಹಾಸನ ಮಠದ ವೀರಸಂದೇಶ

---

ಭಾರತ ದೇಶವು ಪ್ರಾಚೀನಕಾಲದಿಂದಲೂ ಪ್ರಪಂಚದಲ್ಲಿ ತನ್ನದೇ ಆದ ಪ್ರತ್ಯೇ ಸ್ಥಾನವನ್ನು ಕಾಪಾಡಿಕೊಂಡು ಬಂದಿದೆ. ಧರ್ಮದ ಭದ್ರವಾದ ಬುನಾದಿಯ ಮೇ ಬಿತ್ತಿದ ಸಂಸ್ಕೃತಿಯ ಶ್ರೇಷ್ಠ ಬೀಜ ಮೊಳೆತು, ಬೆಳೆದು ವಿಶಾಲವಾದ ವಟ ವೃಕ್ಷವಾ ನಿಂತಿದೆ. ಈ ಭರತಖಂಡದ ಭವ್ಯ ಸಂಸ್ಕೃತಿ ನೆರಳಲ್ಲಿ ಇಡೀ ಮಾನವ ಲೋಕ ತಂಪನ್ನು ಪಡೆಯಬಹುದು. ಪ್ರಪಂಚದ ಪ್ರಕ್ಷುಬ್ಧ ವಾತಾವರಣದಲ್ಲಿ ಶಾಂತಿಯ ಸೊಡರನ್ನು ಹಚ್ಚಿ ಮುನ್ನಡೆದ ಸಾಹಸದಿಂದಲೇ ಇಂದು ಆದರ್ಶರಾಷ್ಟ್ರ ವೆನ್ನಿಸಿಕೊಳ್ಳುವ ಕೀರ್ತಿಗೆ ಭಾಜನವಾಗಿದೆ. ಈ ಸಾಹಸದ ಹಿನ್ನೆಲೆಯಲ್ಲಿ ಅನೇ ಶಕ್ತಿಗಳೂ ಕೆಲಸ ಮಾಡಿವೆ. ಸನಾತನ ಕಾಲದಿಂದಲೂ ಭಾರತೀಯ ಧಮನಿಗಳಲ್ಲಿ ಹರಿದು ಬಂದ ಸತ್ಯ, ಧರ್ಮ, ನ್ಯಾಯ, ನೀತಿಗಳನೆತ್ತರೂ ಮುಂದೇದೂ ಅವರನ್ನು ಆದರಣೀಯರನ್ನಾಗಿಯೇ ಮಾಡುವಂಥ ಪ್ರೇರಕಶಕ್ತಿಗಳಲ್ಲಿ ಗುರುಮಠಗಳ ಪಾತ್ರವು ಹಿರಿದಾದುದೆನ್ನಬೇಕು. ಅನಾದಿಕಾಲದಿಂದಲೂ ಭಾರತ ಸಂಸ್ಕೃತಿಯನ್ನು ರೂಪಿಸುತ್ತಾ ಬಂದ ಗುರುಮಠಗಳ ಇತಿಹಾಸದ ಪುಟಗಳನ್ನು ತೆರೆದು ನೋಡಿದರೆ ಅಲ್ಲಿನ ಅಧ್ಯಕ್ಷ ಪೀಠವನ್ನಲಂಕರಿಸಿ ಅಂಧಕಾರ ಕವಿದ ಜನತೆಯ ಮನೋಭೂಮಿಕೆಗೆ ಪ್ರಶಾಂತ ಬೆಳದಿಂಗಳನ್ನು ಚೆಲ್ಲಿ ಬದುಕಿನಲ್ಲಿ ಅವರಿಗೆ ಹೊಸ ಚೇತನವನ್ನು ತುಂಬಿ ಮುನ್ನಡೆಸಿದ ಕೀರ್ತಿವಂತ ಧರ್ಮ ಗುರುಗಳು ನಮಗೆ ಗೋಚರಿಸುತ್ತಾರೆ. ಒಂದೊಂದು ಮಠದ ಸ್ಥಾಪನೆಯ ಹಿನ್ನೆಲೆಯಲ್ಲಿಯೂ ಒಬ್ಬೊಬ್ಬ ಮಹಾವ್ಯಕ್ತಿಯ ತಪೋಧನದ ಸೇವೆಯ ಚಿರಮುದ್ರೆಗಳು ಬಿದ್ದಿರುತ್ತವೆ. ಅವರ ಉಜ್ವಲ ತಪಃಫಲದ ಶಾಂತಿ ಮುಂದಿನ ಗುರು ಪರಂಪರೆಯ ಮೇಲೂ ಚೆಲ್ಲಿ ಚಿರಕಾಲ ಗುರುಮಠಗಳು ಜನತೆಗೆ ದಾರಿತೋರಿಸುವ ದೀಪಸ್ತಂಭಗಳಾಗಿ ನಿಲ್ಲುತ್ತವೆ. ಅಂಥ ಆದಿಗುರುಗಳ ಅಗ್ರಪಂಕ್ತಿಯಲ್ಲಿ ಕರ್ನಾಟಕದ ಪ್ರಮುಖ ಶ್ರೀಮಠಗಳಲ್ಲೊಂದಾದ ಶ್ರೀ ಸುತ್ತೂರು ವೀರಸಿಂಹಾಸನ ಮಠದ ಸಂಸ್ಥಾ ಪಕರಾದ ಶ್ರೀ ಶಿವರಾತ್ರೀಶ್ವರ ಶಿವಯೋಗಿಗಳೂ ಒಬ್ಬರು.

ಪ್ರಭಾವಯುತವಾದ ವೀರಶೈವ ಮಠಾಚಾರ್ಯ ಪೀಠಗಳಲ್ಲಿ ಶ್ರೀ ಸುತ್ತೂರು ವೀರಸಿಂಹಾಸನ ಮಠವೂ ಒಂದಾಗಿದೆ. ಒಂದು ಸಹಸ್ರ ವರ್ಷಗಳ ಸುಮಾರಿನಲ್ಲಿ ನಂಜನಗೂಡು ಸಮೀಪದಲ್ಲಿರುವ ಸುತ್ತೂರು ಗ್ರಾಮಕ್ಕೆ ಆಗಮಿಸಿದ ಆದಿಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರು ಅಲ್ಲಿ ಆಶ್ರಮವನ್ನು ಸ್ಥಾಪಿಸಿದರು. ಅವರ ತಪಃಫಲದ ಪ್ರಭಾವದಿಂದ ಇಂದು ಸುತ್ತೂರಿನ ಗುರು ಪರಂಪರೆ ಕರ್ನಾಟಕಕ್ಕೆ ಅಮೂಲ್ಯ ರೀತಿಯ ಸೇವೆಯನ್ನೆಸಗಿ ಉಜ್ವಲ ಇತಿಹಾಸವನ್ನೊಳಗೊಂಡು ಕಂಗೊಳಿ ಸುತ್ತಿದೆ. ಈ ಪೂಜ್ಯಪಾದರ ಪವಿತ್ರ ನಾಮವು ವೀರಶೈವ ಪುರಾತನರ ಸಂಕೀರ್ತನೆ

ಯಲ್ಲಿ ಅಲಂಕೃತವಾಗಿದೆ. ಅವರ ತರುವಾಯ ಪಟ್ಟಾಭಿಷಕ್ತರಾದ ಶ್ರೀ ಈಶಾನೇಶ್ವರ ಒಡೆಯರಿಗೆ ರಾಜೇಂದ್ರ ಚೋಳಭೂಪಾಲ (1012–1048) ನು ಬರೆದು ಒಪ್ಪಿಸಿರುವ ಅನೇಕ ದಾನಶಾಸನಗಳು ಶಾಸನ ಇಲಾಖೆಯಲ್ಲಿ ಪ್ರಕಟವಾಗಿವೆ. ಅನೇಕ ಯೋಗೀಶ್ವರರೂ, ತಪಸ್ವಿಗಳೂ, ವಿದ್ವಾಂಸರೂ, ಕವಿವರೇಣ್ಯರೂ ಆಳಿಹೋದ ಶ್ರೀ ಸುತ್ತೂರಿನ ಗುರುಪರಂಪರೆಯ ಭವ್ಯಗೋಪುರದ ಎರಡು ಅಮೂಲ್ಯ ರತ್ನಗಳಾಗಿ ಬೆಳಗುತ್ತಿರುವ ಈಗಿನ ಹಿರಿಯಗುರುಗಳಾದ ಶ್ರೀ ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರೂ ಅವರ ಕರಕಮಲ ಸಂಜಾತರಾದ ಶ್ರೀ ಶಿವರಾತ್ರಿರಾಜೇಂದ್ರಸ್ವಾಮಿಗಳವರೂ ಕರ್ಣಾಟಕದ ಕಲ್ಯಾಣಕ್ಕಾಗಿ ತಮ್ಮ ತಪಸ್ಸನ್ನು ಧಾರೆಯೆರೆಯುತ್ತಿರುವುದು ಕನ್ನಡಿಗರು ಹೆಮ್ಮೆಪಡಬಹುದಾದ ವಿಷಯ. ಪಂಚಾಕ್ಷರಿ ಮಂತ್ರ ಯಜ್ಞವನ್ನು ಹನ್ನೆರಡು ವರ್ಷಗಳಿಂದ ಸತತವಾಗಿ ನಡೆಸುತ್ತ ಬಂದಿರುವ ಹಿರಿಯ ಶ್ರೀ ಶ್ರೀ ಯವರು ಮೂಲ ಮೂರ್ತಿಯಾಗಿ ಮೌನ ತಪಸ್ಸಿನಲ್ಲಿ ತೊಡಗಿದ್ದರೆ ಉತ್ಸವಮೂರ್ತಿಯಾಗಿ ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಗಳು ಕರ್ಮಯೋಗವನ್ನು ಕೈಗೊಂಡು ವಿದ್ಯಾರ್ಥಿಗಳ ಏಳಿಗೆಗೆ ಅವಿಶ್ರಾಂತವಾಗಿ ಶ್ರಮಿಸುತ್ತಿರುವ ಅವರಿಗೆ ನಾಡು ಋಣಿಯಾಗಿರುತ್ತದೆ. ಮೈಸೂರು, ನಂಜನಗೂಡು, ಚಾಮರಾಜನಗರ, ತಿರುಮಕೂಡಲು ನರಸೀಪುರ, ಸಂತೆಸರಗೂರು, ಯಳಂದೂರು, ಕೆ. ಆರ್ ನಗರ ಮುಂತಾದಕಡೆಗಳಲ್ಲಿ ವಿದ್ಯಾರ್ಥಿನಿಲಯಗಳು, ಶ್ರೀ ಶಿವರಾತ್ರೀಶ್ವರ ಪ್ರೌಢಶಾಲೆ, ಮೈಸೂರುನಗರದಲ್ಲಿ ಶ್ರೀ ಕ್ಯಾತನಹಳ್ಳಿ ಸಾಹುಕಾರ್ ಸಿದ್ದಲಿಂಗಯ್ಯನವರ ಸಂಸ್ಕೃತ ಪಾಠಶಾಲೆ, ಶ್ರೀ ಶಿವರಾತ್ರೀಶ್ವರ ಗುರುಕುಲ, ಶ್ರೀ ಶಿವರಾತ್ರೀಶ್ವರ ಮೂಲಶಿಕ್ಷಣಶಾಲೆ ಮುಂತಾದುವುಗಳನ್ನು ಸ್ಥಾಪಿಸಿ ಸಹಸ್ರಾರು ಮಂದಿ ವಿದ್ಯಾರ್ಥಿಗಳಿಗೆ ಜ್ಞಾನದ ಬೆಳಕನ್ನು ತೋರುತ್ತಿರುವ ಅವರ ಸೇವೆ ಅಮೂಲ್ಯವಾದುದು. ಈ ವಿದ್ಯಾರ್ಥಿನಿಲಯಗಳಲ್ಲಿ ಕೇವಲ ವೀರಶೈವ ಜನಾಂಗದ ವಿದ್ಯಾರ್ಥಿಗಳು ಮಾತ್ರವಲ್ಲದೆ ಇತರ ಎಲ್ಲಾ ಜನಾಂಗಗಳ ವಿದ್ಯಾರ್ಥಿಗಳೂ ಅವಕಾಶವನ್ನು ಪಡೆಯುತ್ತಿರುವುದು ಪ್ರಗತಿಸೂಚಕವಾಗಿದೆ.

ನಾಡಿನ ಹಾಗೂ ಸಮಾಜದ ಅಭಿವೃದ್ಧಿಗೆ ವೈದಿಕ ಲೌಕಿಕ ವಿದ್ಯೆಗಳೆರಡು ಎರಡು ಕಣ್ಣುಗಳಿದ್ದಂತೆ. ಭಾರತದ ಸಂಸ್ಕೃತಿಗೆ ಗಣಿಯಂತಿರುವ ವೇದ, ಮತ್ತು ಸಂಸ್ಕೃತ ಅಧ್ಯಯನವು ಅತ್ಯವಶ್ಯಕ. ಇದರ ಜೊತೆಗೆ ಲೌಕಿಕವಾದ ಕನ್ನಡ ಮತ್ತು ಇಂಗ್ಲಿಷ್ ವಿದ್ಯಾಭ್ಯಾಸವು ಜನತೆಗೆ ಅತ್ಯವಶ್ಯಕವಾಗಿ ಬೇಕೆಂದು ಮಹಾಸ್ವಾಮಿಗಳವರ ಮುಖ್ಯಧ್ಯೇಯವಾಗಿದೆ. ಆಧ್ಯಾತ್ಮ ವಿದ್ಯಾರ್ಜನೆಗಾಗಿ ಸ್ಥಾಪಿತವಾಗಿರುವ "ಶ್ರೀ ಶಿವರಾತ್ರೀಶ್ವರ ಗುರುಕುಲವು" ಸಮಾಜಕ್ಕೆ ಆದರ್ಶಪ್ರಾಯರಾದ ಗುರುವಿರಕ್ತ ಮೂರ್ತಿಗಳ ಶಿಕ್ಷಣಕ್ಕಾಗಿ ಸ್ಥಾಪಿತವಾಗಿದೆ.

## ಶ್ರೀ ಶಿವರಾತ್ರೀಶ್ವರ ಗುರುಕುಲ, ಮೈಸೂರು

ಪರಮಪೂಜ್ಯರಾದ ಸುತ್ತೂರಿನ ವೀರಸಿಂಹಾಸನಾಧೀಶ್ವರ ಶ್ರೀ ಶಿವರಾತ್ರೀಶ್ವ ಮಹಾಸ್ವಾಮಿಯವರ ಪವಿತ್ರ ನಾಮಾಂಕಿತದಲ್ಲಿ ನಡೆಯುವ ಅನೇಕ ಸಂಸ್ಥೆಗಳ ಈ ಗುರುಕುಲವು ಬಹು ಮುಖ್ಯವಾದುದು. ಸಮಾಜವನ್ನು ಲೌಕಿಕ, ಪಾರಮಾರ್ಥಿ ಸನ್ಮಾರ್ಗದಲ್ಲಿ ಮುನ್ನಡೆಸುವ ವಿಷಯದಲ್ಲಿ ಮಠಗಳ ಹೊಣೆಗಾರಿಕೆ ಮಿಗಿಲಾದುದು ಮಠಾಧಿಪತಿಗಳ ಆದರ್ಶವೇ ಆಯಾ ಪೀಠದ ಶಿಷ್ಯವೃಂದಕ್ಕೆ ಇರಬೇಕಾದುದ ನ್ಯಾಯವಾಗಿದೆ. "ಯಥಾ ಗುರುಸ್ತಥಾಶಿಷ್ಯಃ" ಎಂಬ ಉಕ್ತಿಯು ಇದಕ್ಕೆ ನಿದರ್ಶನ ಆದುದರಿಂದ ಮಠಾಧಿಪತಿಗಳ ಸುಧಾರಣೆಯೇ ಸಮಾಜ ಸುಧಾರಣೆ ಎಂದು ಧಾರಾ ವಾಗಿ ಹೇಳಬಹುದು.

ಕರ್ಣಾಟಕದಲ್ಲಿ ಅವತರಿಸಿದ ಅನೇಕ ಮಹಿಮಾ ಮೂರ್ತಿಗಳ ಪ್ರಭಾವದಿಂ ಇಂದಿಗೂ ನಾಡಿನಲ್ಲಿ ಸಹಸ್ರಾರು ಮಠಗಳು ವಿರಾಜಿಸುತ್ತಿವೆ. ಇವುಗಳಿಗೆ ಪರಂಪ ಯಿಂದ ಅಧಿಪತಿಗಳು ಆರಿಸಲ್ಪಟ್ಟು ಆಯಾ ಮಠಗಳ ಸೂತ್ರಗಳನ್ನು ಅನುಚಾ ಪದ್ಧತಿಗಳನ್ನೇ ನಡೆಯಿಸಿಕೊಂಡು ಬರುತ್ತಿದ್ದಾರೆ. ಇಂಥ ಪೀಠಗಳಿಗೆ ಅಧಿಪತಿಗಳ ಗುವವರಿಗೆ ಆದರ್ಶ ಉಚ್ಚ ಶಿಕ್ಷಣವು ಅತ್ಯಾವಶ್ಯಕ-ಎಂಬ ಉದ್ದೇಶದಿಂದ "ಗುರುಕುಲ"ವು ತೆರೆಯಲ್ಪಟ್ಟಿದೆ. ಭರತ ಖಂಡದ ಸಂಸ್ಕೃತಿಯು ಉಚ್ಚಶಿಖರವನ ಮುಟ್ಟಿದ್ದ ಕಾಲದಲ್ಲಿ ಸಮಾಜದ ಅಭಿವೃದ್ಧಿಯು ನಿರರ್ಗಳವಾಗಿ ನಡೆಯಲೆಂ ಉದ್ದೇಶದಿಂದ ಜನತೆಗೆ ಉತ್ತಮಶಿಕ್ಷಣವನ್ನು ನೀಡುವುದಕ್ಕಾಗಿ ಗುರುಕುಲಗಳ ಏರ್ಪಟ್ಟವು. ನಾಡಿನ ಅನೇಕ ಗುರುವಿರಕ್ತಮಠಗಳಿಗೆ ಅಧಿಪತಿಗಳಾಗಿರುವ ಮತ್ತ ಆಗಲಿರುವ ಅನೇಕ ಮೂರ್ತಿಗಳು ಇಲ್ಲಿ ಸೌಹಾರ್ದದಿಂದ ಅಭ್ಯಾಸಾದಿಗಳಲ್ಲಿ ತೊಡ ರುತ್ತಾರೆ. ಇವರು ಕಾವ್ಯ, ನಾಟಕ, ವ್ಯಾಕರಣ, ತರ್ಕಶಾಸ್ತ್ರಗಳನ್ನು ಮುಖ್ಯವಾ ವೀರಶೈವ ಸಿದ್ಧಾಂತವನ್ನು ಅಧ್ಯಯನಮಾಡುತಿದ್ದಾರೆ. ಆದರ್ಶರಾದ ಅಧ್ಯಾಪಕ ಅನುಭವ ಹಾಗೂ ಆಶ್ರಮದ ಅಧ್ಯಕ್ಷರಾಗಿರುವ ಪೂಜ್ಯ ಶ್ರೀ ಶಿವರಾತ್ರಿರಾಜೇಂ ಸ್ವಾಮಿಗಳವರ ಅಧ್ಯಾತ್ಮ ವರ್ಚಸ್ಸಿನ ಫಲವಾಗಿ ಈ ಮೂರ್ತಿಗಳು ಆದರ್ಶಮಠಾ ಪತಿಗಳಾಗಿ ನೈತಿಕ ತಳಹದಿಯ ಮೇಲೆ ದೈವಭಕ್ತಿಯನ್ನು ಪ್ರತಿಷ್ಠಿಸಿ ಸಮಾಜವನ ಧಾರ್ಮಿಕ, ಆಧ್ಯಾತ್ಮಿಕ ಮಾರ್ಗಗಳಲ್ಲೊಯ್ದು ಸುಸಂಸ್ಕೃತರನ್ನಾಗಿ ಮಾಡುವರೆ ಹಿರಿಯಾಸೆಯು ಈ ಸಂಸ್ಥೆಗಿರುತ್ತದೆ. ಇವರ ಶಿಕ್ಷಣವು ಶ್ರೀಮನ್ಮಹಾರಾಜರವ ಸಂಸ್ಕೃತ ಕಾಲೇಜಿನಲ್ಲಿಯೂ, ಪಕ್ಕದಲ್ಲಿರುವ ಶ್ರೀ ಕ್ಯಾತನಹಳ್ಳಿ ಸಾಹುಕಾರ್ ಸಿ ಲಿಂಗಯ್ಯನವರ ಸಂಸ್ಕೃತ ಪಾಠಶಾಲೆಯಲ್ಲಿಯೂ ನಡೆಯುತ್ತಿರುವುದಲ್ಲದೆ ಇವರಿ ಧಾರ್ಮಿಕ ಮತ್ತು ಆಧ್ಯಾತ್ಮಿಕ ವಿಶೇಷ ಶಿಕ್ಷಣವು ಪ್ರತ್ಯೇಕವಾಗಿ ಈ ಗುರುಕು ದಲ್ಲಿಯೇ ಕೊಡಲ್ಪಡುತ್ತಿದೆ. ಈ ಉದ್ದೇಶವನ್ನು ಅವರು ಸಾಧಿಸಿ ಸಮಾಜ ಮಾರ್ಗದರ್ಶಕವಾಗಬೇಕೆಂದು ಅಪೇಕ್ಷಿಸಲಾಗಿದೆ.

## ಸುತ್ತೂರಿನಲ್ಲಿರುವ ಶ್ರೀ ಮಹದೇಶ್ವರರ ಗದ್ದುಗೆ

The Palace.
Mysore
30-11-1959

ಸುತ್ತೂರು ವೀರಸಿಂಹಾಸನದ ಸಂಸ್ಥಾಪಕರೂ, ಕರ್ಣಧಾರರೂ ಆದ ಶ್ರೀ ಮಜ್ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರ ಸಹಸ್ರವರ್ಷದ ಜಯಂತಿ ಮಹೋತ್ಸವವು ಮೈಸೂರಿನಲ್ಲಿ ನಡೆಯುವುದು ನಮಗೆ ಅತ್ಯಾನಂದವನ್ನುಂಟುಮಾಡಿದೆ. ಅವರ ಅನುಗ್ರಹದಲ್ಲಿ ಬೆಳೆದ ಮಂತ್ರಶಿಷ್ಯರಾದ ಶ್ರೀ ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು ಮತ್ತು ಅವರ ಕರಕಮಲಸಂಜಾತರಾದ ಜಗದ್ಗುರು ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರ ಕೃಪಾಶ್ರಯದಲ್ಲಿ ನಮ್ಮ ನಾಡಿನ ಸಹಸ್ರಾರು ಮಕ್ಕಳು ಅನ್ನದಾನ ಜ್ಞಾನದಾನಗಳನ್ನು ಪಡೆಯುತ್ತಿರುವುದೂ ಸ್ತುತ್ಯಕಾರ್ಯ.

ಜಗತ್ತಿಗೆ ಸುಖಶಾಂತಿ ಸಂಪತ್ಸಮೃದ್ಧಿಯನ್ನು ನೀಡಲು ಮಾನವನ ಪ್ರಾಸಂಗಿಕವಾದ ಸರ್ವಶಕ್ತಿಯು ವಿಫಲಗೊಂಡಾಗ ಅವತಾರಿಗಳ ಆತ್ಮಶಕ್ತಿಯು 'ಮಾಮೇಕಂ ಶರಣಂ ವ್ರಜ' ಎಂದು ಕೈನೀಡಿ ಕರೆಯುತ್ತದೆ. ಪ್ರಾಪಂಚಿಕ ಪ್ರಗತಿಯಿಂದ ಸಂತೃಪ್ತವಾಗದೆ ಮಾನವಕೋಟಿಯು ಇಂದು ಆಧ್ಯಾತ್ಮಿಕವಾದ ಅವತಾರಿಗಳ ಪುನರಾಗಮನಕ್ಕಾಗಿ ಹಾರೈಸುತ್ತಿದೆ. ಇಂತಹ ಸಮಯದಲ್ಲಿ ಮಹಾನುಭಾವರಾದ ಜಗದ್ಗುರು ಶ್ರೀ ಶಿವರಾತ್ರೀಶ್ವರರಂತಹ ದಿವ್ಯಾತ್ಮರ ಧರ್ಮಶಕ್ತಿಯ ಪುನರುದಯವಾಗಲೆಂದು ಹಾರೈಸುತ್ತೇವೆ.

ಮೈಸೂರು ಜಿಲ್ಲೆಯ ಜಗದ್ಗುರು ವಿದ್ಯಾಭಿವೃದ್ಧಿ ಸಂಸ್ಥೆಯ ವಿದ್ಯಾರ್ಥಿವೃಂದದವರು ಜಗದ್ಗುರು ವರೇಣ್ಯರ ಸಹಸ್ರವರ್ಷದ ಜಯಂತಿ ಮಹೋತ್ಸವವನ್ನು ನೆರವೇರಿಸುತ್ತಿರುವುದು ನಮಗೆ ಪರಮ ಸಂತೋಷವನ್ನುಂಟುಮಾಡಿದೆ. ಭಗವಂತನ ಕೃಪೆಯಿಂದ ಈ ಮಹೋತ್ಸವವು ಯಶಸ್ವಿಯಾಗಿ ನಡೆದು ಶ್ರೀಗುರುದೇವನ ನಮ್ಮ ನಾಡಿನ ಯುವಕರಿಗೆ ದೊರೆಯುವಂತಾಗಲಿ ಮತ್ತು ಅಲ್ಲಿನ ವಿದ್ಯಾರ್ಥಿಗಳು ತಮ್ಮ ಗುರುವಿನ ತತ್ವಾಮೃತವನ್ನು ಜಗತ್ತಿಗೆ ನೀಡುವಂತಹ ಸಮರ್ಥರಾಗಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇವೆ.

Jaya Chamaraja Wadiyar
ಮೈಸೂರು ಸಂಸ್ಥಾನದ ಶ್ರೀ ಮಹಾರಾಜರವರು

The Palace, Mysore
30-11-1959

# ಜಯಂತಿ ಮಹೋತ್ಸವಕ್ಕೆ ಶ್ರೀಮನ್ಮಹಾರಾಜರವರು ಕಳುಹಿಸಿದ ಸಂದೇಶ



ಸುತ್ತೂರು ವೀರಸಿಂಹಾಸನದ ಸಂಸ್ಥಾಪಕರೂ, ತಪೋಧನರೂ ಆದ ಶ್ರೀಮಜ್ಜಗದ್ಗುರು ಶ್ರೀ ಶಿವರಾತ್ರಿಮಹಾಸ್ವಾಮಿಗಳವರ ಸಹಸ್ರ ವರ್ಷದ ಜಯಂತಿ ಮಹೋತ್ಸವವು ಮೈಸೂರಿನಲ್ಲಿ ನಡೆಯುವುದು ನಮಗೆ ಅತ್ಯಾನಂದವನ್ನುಂಟುಮಾಡಿದೆ. ಅವರ ಅನುಗ್ರಹದಲ್ಲಿ ಬೆಳೆದ ಮಂತ್ರನಿಷ್ಠರಾದ ಶ್ರೀ ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರಮಹಾಸ್ವಾಮಿಗಳವರ ಕೃಪಾಶ್ರಯದಲ್ಲಿ ನಮ್ಮ ನಾಡಿನ ಸಹಸ್ರಾರು ಮಕ್ಕಳು ಅನ್ನದಾನ ಜ್ಞಾನದಾನಗಳನ್ನು ಪಡೆಯುತ್ತಿರುವುದು ಸ್ತುತ್ಯಕಾರ್ಯ.

ಜಗತ್ತಿಗೆ ಸುಖ ಶಾಂತಿ ಸಂಪತ್ಸಮೃದ್ಧಿಯನ್ನು ನೀಡಲು ಮಾನವನ ಪ್ರಾಪಂಚಿಕವಾದ ಸರ್ವಶಕ್ತಿಯು ವಿಫಲಗೊಂಡಾಗ ಅವತಾರಿಗಳ ಆತ್ಮಶಕ್ತಿಯು "ಮಾಮೇಕಂ ಶರಣಂವ್ರಜ" ಎಂದು ಕೈನೀಡಿ ಕರೆಯುತ್ತದೆ. ಪ್ರಾಪಂಚಿಕ ಪ್ರಗತಿಯಿಂದ ಸಂತೃಪ್ತವಾಗದೆ ಮಾನವಕೋಟಿಯು ಇಂದು ಆತ್ಮೋದ್ಧಾರಕರಾದ ಅವತಾರಿಗಳ ಪುನರುದಯಕ್ಕಾಗಿ ಹಾರೈಸುತ್ತಿದೆ. ಇಂತಹ ಸಮಯದಲ್ಲಿ ಮಹಾನುಭಾವರಾದ ಜಗದ್ಗುರು ಶ್ರೀ ಶಿವರಾತ್ರೀಶ್ವರರಂತಹ ದಿವ್ಯಾತ್ಮರ ತಪಶ್ಶಕ್ತಿಯ ಪುನರುದಯವಾಗಲೆಂದು ಹಾರೈಸುತ್ತೇವೆ.

ಮೈಸೂರು ಜಿಲ್ಲೆಯ ಜಗದ್ಗುರು ವಿದ್ಯಾಭಿವೃದ್ಧಿಸಂಸ್ಥೆಯ ವಿದ್ಯಾರ್ಥಿವೃಂದದವರು ಜಗದ್ಗುರು ವರೇಣ್ಯರ ಸಹಸ್ರವರ್ಷದ ಜಯಂತೀ ಮಹೋತ್ಸವವನ್ನು ನೆರವೇರಿಸುತ್ತಿರುವುದು ನಮಗೆ ಪರಮ ಸಂತೋಷವನ್ನುಂಟುಮಾಡಿದೆ. ಪರಮಾತ್ಮನ ಕೃಪೆಯಿಂದ ಈ ಮಹೋತ್ಸವವು ಯಶಸ್ವಿಯಾಗಿ ನಡೆದು ಶ್ರೀ ಗುರುಕೃಪೆಯು ನಮ್ಮ ನಾಡಿನ ಯುವಕರಿಗೆ ದೊರೆಯುವಂತಾಗಲಿ ಮತ್ತು ಅಲ್ಲಿನ ವಿದ್ಯಾರ್ಥಿಗಳು ತಮ್ಮ ಗುರುವಿನ ತತ್ವಾಮೃತವನ್ನು ಜಗತ್ತಿಗೆ ನೀಡುವಂತಹ ಸಮರ್ಥರಾಗಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇವೆ.

(ಸಹಿ) **ಜಯಚಾಮರಾಜ ಒಡೆಯರ್**
**ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು**

# ಜಯಂತಿ ಸಮಾರಂಭ

## ಆದಿಗುರು ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸವ

ಶ್ರೀ ಸುತ್ತೂರು ವೀರಸಿಂಹಾಸನದ ಮೂಲಗುರುಗಳವರಾದ ಆದಿಗುರು ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸವವನ್ನು ದಿನಾಂಕ 20-11-59ರಿಂದ ದಿನಾಂಕ 6-12-59 ರ ವರೆಗೆ ಬಹು ವೈಭವದಿಂದ ವಿಧವಿಧವಾದ ಕಾರ್ಯಕ್ರಮಗಳಿಂದ ಅನೇಕ ಮಹನೀಯರುಗಳ ನೇತೃತ್ವದಲ್ಲಿ ಮೈಸೂರು ನಗರದಲ್ಲಿರುವ ಶ್ರೀ ಶಿವರಾತ್ರೀಶ್ವರ ವಿದ್ಯಾಪೀಠದಲ್ಲಿ ಪ್ರಥಮವಾಗಿ ನೆರವೇರಿಸಲಾಯಿತು. ನಮ್ಮ ಬಾಳನ್ನು ಬೆಳಗಿಸಿದಂತಹ ಪುಣ್ಯಪುರುಷರ ಜಯಂತೀ ಮಹೋತ್ಸವವನ್ನು ಆಚರಿಸುವ ಸತ್‌ಸಂಪ್ರದಾಯವನ್ನು ಪಡೆದ ನಾವೇ ಧನ್ಯರು.

ಶ್ರೀ ಜಗದ್ಗುರು ಶ್ರೀ ಶಿವರಾತ್ರಿಮಹಾಸ್ವಾಮಿಗಳವರ ದಿವ್ಯಸಮ್ಮುಖದಲ್ಲಿ ಮೈಸೂರು ರಾಜ್ಯದ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀಮಾನ್ ಬಿ. ಡಿ. ಜತ್ತಿಯವರು ಈ ಸಾಂಸ್ಕೃತಿಕ ಕಾರ್ಯಕ್ರಮದ ಉದ್ಘಾಟನಾ ಮಹೋತ್ಸವವನ್ನು ನೆರವೇರಿಸಿದರು.

ಶ್ರೀಮಾನ್ ಹೆಚ್. ಗಂಗಾಧರನ್ ಅವರು ಸ್ವಾಗತ ಭಾಷಣವನ್ನು ಮಾಡುತ್ತಾ ಈ ಸಂಸ್ಥೆಯ ಪೂರ್ಣ ಪರಿಚಯವನ್ನು ರಸಯುಕ್ತವಾಗಿ ಸಂಸ್ಥೆಯ ಚಿತ್ರವೆ ಕಣ್ಣಿಗೆ ಕಟ್ಟುವ ರೀತಿಯಲ್ಲಿ ವಿವರಿಸಿದರು.

ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀಮಾನ್ ಬಸಪ್ಪ ದಾನಪ್ಪ ಜತ್ತಿಯವರು ಉದ್ಘಾಟಿಸುತ್ತ, ನಮ್ಮಲ್ಲಿ ಜಯಂತಿಗಳನ್ನು ಆಚರಿಸುವುದು ವಾಡಿಕೆಯಾಗಿದೆ. ಇದರಿಂದ ಸತ್ಪುರುಷರ ಮತ್ತು ಮಹಾತ್ಮರ ಪುಣ್ಯನಾಮಸ್ಮರಣೆಯನ್ನು ಮಾಡುವ ಸದಾವಕಾಶ ದೊರೆಯುತ್ತದೆ. ಧರ್ಮದ ಪ್ರಾದುರ್ಭವಕ್ಕೆ ಧಕ್ಕೆಯೊದಗಿದಾಗ ಅದರ ಉದ್ಧಾರಕ್ಕಾಗಿ ದೇವರು ಜನರ ಮಧ್ಯೆ ಜನಿಸುವುದಕ್ಕೆ ಅಪ್ಪಣೆಕೊಡಿಸುವುದು. ಅಂತೆಯೇ ಇಂದಿನ ಜಯಂತೀ ಪುರುಷರಾದ ಆದಿಗುರು ಶ್ರೀ ಶಿವರಾತ್ರೀಶ್ವರರು ಈ ಜಿಲ್ಲೆಯಲ್ಲಿ ನೆಲಸಿ, ಇವೇ ಜಿಲ್ಲೆಯ ಶ್ರೇಯಸ್ಸಿಗೆ ಕಾರಣಭೂತರಾಗಿ ಜನರನ್ನುದ್ಧರಿಸಿ ಧರ್ಮದ ದೀಪವನ್ನು ಬೆಳಗಿಕೊಂಡು ಬಂದಿದ್ದಾರೆ. ಈ ಮಠದ ಮಹಾಸ್ವಾಮಿಗಳು ಕೇವಲ ತಮ್ಮ ಅಧ್ಯಾತ್ಮದಲ್ಲಿಯೇ ಕಾಲವನ್ನೆಲ್ಲಾ ವಿನಿಯೋಗಿಸದೆ ಸಹಸ್ರಾರುಮಂದಿಗೆ ಅನ್ನದಾನ ಜ್ಞಾನದಾನಗಳನ್ನು ಮಾಡಿ ನಾಡಿಗೆ ಕಲ್ಯಾಣವನ್ನುಂಟುಮಾಡಿದ್ದಾರೆ.

ಈ ಪೂಜ್ಯ ಸಂಸ್ಥೆ ಇಂದು 2000 ಜನರಿಗೆ ಅಶನ ವಸತಿ ಮತ್ತು ಜ್ಞಾನದಾನಕ್ಕೆ ಅವಕಾಶಮಾಡಿಕೊಟ್ಟಿರುವುದನ್ನು ನೋಡಿದರೆ ಇಂತಹ ಕಾರ್ಯಮಾಡಲು ಜನ ಸಾಮಾನ್ಯರಾಗಲೀ ಒಂದು ಸರ್ಕಾರಕ್ಕಾಗಲೀ ಕಷ್ಟವೆಂಬಂಶಗಳನ್ನು ಮನಗಾಣ ಬಹುದಾಗಿದೆ. ಯಾವುದೋ ಒಂದು ದಿವ್ಯತೇಜಸ್ಸು ಅಗೋಚರ ಶಕ್ತಿಮಾನವ ಸ್ವರೂಪದಲ್ಲಿರುವ ಈ ಮಹಾಸ್ವಾಮಿಗಳ ಮೂಲಕ ಈ ಭವ್ಯ ಸೇವೆಯನ್ನು ಮಾಡಿ ಸುತ್ತಿದೆ.

ಈ ಸಂಸ್ಥೆಯ ವಿದ್ಯಾರ್ಥಿಗಳು ಕೇವಲ ಬೌದ್ಧಿಕ ಬೆಳವಣಿಗೆಗೆ ಸಾಧನವಾದ ಅಭ್ಯಾಸದಲ್ಲಿಯೇ ನಿರತರಾಗದೆ ಆಧ್ಯಾತ್ಮವಿಕಾಸಕ್ಕೂ ಶ್ರಮಿಸಲು ಸಾಂಸ್ಕೃತಿಕ ಸಂಘ ವನ್ನು ಕಟ್ಟಿಕೊಂಡು ಇಂತಹ ಕಾರ್ಯಕ್ರಮಗಳನ್ನು ಆಚರಿಸುತ್ತಿರುವುದು ಅಭಿನಂದ ನೀಯ ವಿಚಾರ. ವಿಜ್ಞಾನ ಯುಗದಲ್ಲಿ ದೇವರ ಮತ್ತು ಧರ್ಮದ ಬಗ್ಗೆ ನಂಬುಗೆ ಹೋಗುತ್ತಿರುವ ಕಾಲದಲ್ಲಿ ಇಂತಹ ಸಂಘ ಸಂಸ್ಥೆಗಳು ತರುಣಜನಾಂಗದಲ್ಲಿ ದೇವರು ಮತ್ತು ಧರ್ಮದ ಬಗ್ಗೆ ಆಸಕ್ತಿಯನ್ನು ಕೆರಳಿಸುವ ಕಾರ್ಯ ಸಾಗಬೇಕಾಗಿದೆ. ಜನರು ನೀತಿವಂತರಾಗದೆ ಅಧ್ಯಾತ್ಮಮಾರ್ಗದಲ್ಲಿ ನಡೆಯದೆ ಹೋದರೆ ಸಮಾಜದಲ್ಲಿ ಅನ್ಯಾಯ ಅನೀತಿಗಳಿಗೆ ಹೆಚ್ಚು ಅವಕಾಶವಾಗುತ್ತದೆ. ಸರ್ಕಾರ ಭೌತಿಕವಾಗಿ ಜನರ ಮೇಲೆ ಅಳ್ವಿಕೆ ನಡೆಸಲು ಕಟ್ಟುಕಟ್ಟಳೆಗಳನ್ನು ರೂಪಿಸಬಹುದು. ಆದರೆ ನೈತಿಕವಾಗಿ ಜನರನ್ನು ಉದ್ಧರಿಸುವ ಕಾರ್ಯ ಕಷ್ಟ. ಅದು ಗುರುಪರಂಪರೆಗಳಿಂದ ಆಗಬೇಕು. ಸಮಾಜದಲ್ಲಿ ಅನ್ಯಾಯ ಅನೀತಿಗಳಿಗೆ ಹೆಚ್ಚು ಅವಕಾಶವಾಗುತ್ತದೆ. ಇಂತಹ ಉತ್ತಮ ಗುರುವರ್ಗದವರು ಸೇವೆಮಾಡಿದರೆ ಸರ್ಕಾರಕ್ಕೆ ನೈತಿಕವಾಗಿ ಜನರನ್ನು ನಡೆಸುವ ಹೊಣೆ ಕಡಿಮೆಯಾಗುತ್ತದೆ.

ಮಾನವನ ಮೇಲೆ ಪ್ರಭಾವಬೀರಿ ಸಂಸ್ಕಾರವಂತ ಚೇತನವನ್ನಾಗಿಸಲು ಗುರುಗಳ ಆಶೀರ್ವಾದ ಮುಖ್ಯ. ತನ್ಮೂಲಕ ಮಾನವನು ಒಳ್ಳೆಯ ರೀತಿಯಲ್ಲಿ ಜೀವನ ನಡೆಸಿ ಆಧ್ಯಾತ್ಮಿಕವಾಗಿಯೂ ಪ್ರಗತಿಸಾಧಿಸಲು ಅನುಕೂಲವಾಗುತ್ತದೆ. ದೇವರು ಧರ್ಮದ ಬಗ್ಗೆ ವಿಶ್ವಾಸವಿಡುವಂತೆ ಮಾಡುತ್ತಾನೆ. ಅಂತರಾತ್ಮ ಮತ್ತು ಪರಮಾತ್ಮರು ಒಂದು ಗೂಡಿ ಔದಾತ್ತ್ಯಭಾವನೆಯನ್ನು ಪಡೆಯುವ ಗುರುಗಳ ಆಶೀರ್ವಾದ ಅಗತ್ಯ. ಇಂತಹ ಸಂಘಸಂಸ್ಥೆಗಳು ಮಾನವರ ನೈತಿಕಮಟ್ಟವನ್ನು ಉತ್ತಮಪಡಿಸಲು ಶ್ರಮಿಸುವವೆಂದು ನಂಬಿದ್ದೇನೆ.

**ಶ್ರೀ ಶಿವರಾತ್ರೀಶ್ವರ ವಿದ್ಯಾಪೀಠದಲ್ಲಿ ಓದುತ್ತಿರುವ ವಿದ್ಯಾರ್ಥಿಗಳು ಪುಣ್ಯ ಶಾಲಿಗಳು ಈ ಸಂಸ್ಥೆಯಲ್ಲಿ ಜಾತಿ ಮತಗಳ ಗೊಂದಲವಿಲ್ಲ. ಎಲ್ಲ ದೇವರುಗಳ ಪ್ರಾರ್ಥನೆ ನಾನಾ ಭಾಷೆಗಳಲ್ಲಿ ಇಲ್ಲಿ ನಡೆಯುತ್ತಿರುವುದು. ಜಾತಿಮತಗಳ ಭೇದವಿಲ್ಲದೆ ವಿದ್ಯಾರ್ಥಿಗಳೆಲ್ಲಾ ಒಂದೆಡೆ ಸೇರಿ ಸಹಭೋಜನ, ಸಹಅಧ್ಯಯನ ಮಾಡುತ್ತಿರುವುದೆ**

ಇದಕ್ಕೆ ಸಾಕ್ಷಿಯಾಗಿದೆ. ಬಸವಣ್ಣನವರು ಹೇಳಿದ ದೇವನೊಬ್ಬ ನಾಮ ಹಲವು ಎಂಬ ತತ್ವವನ್ನು ಈ ಮಠಾಧೀಶ್ವರರು ಆಚರಣೆಯಲ್ಲಿ ತಂದಿದ್ದಾರೆ. ಇಲ್ಲಿರುವ ವಿದ್ಯಾರ್ಥಿಗಳು ಆದರ್ಶಜೀವನವನ್ನು ನಡೆಸುವುದರ ಮೂಲಕ ಇತರರಿಗೆ ಮಾರ್ಗದರ್ಶಕರಾಗಲೆಂದು ಶ್ರೀಮಾನ್ ಬಿ. ಡಿ. ಜತ್ತಿಯವರು ಉದ್ಘಾಟನಾ ಸಮಾರಂಭವನ್ನು ನೆರವೇರಿಸಿದರು.

ತದನಂತರ ಧರ್ಮಮೂಲವಾದ ಈ ಸಮಾರಂಭದ ಸಭಿಕರನ್ನು ಕುರಿತು ಆವೇಶಪೂರ್ಣವಾದ, ಬೋಧಪ್ರದವಾದ, ಪ್ರೇರಕಪೂರ್ಣವಾದ ನುಡಿಗಳನ್ನು ಈ ದಿನದ ಸಭೆಯ ಅಧ್ಯಕ್ಷತೆ ವಹಿಸಿದ್ದ ಬಿಹಾರಿನ ಮಾಜಿ ರಾಜ್ಯಪಾಲರಾದ ಶ್ರೀಮಾನ್ ರಂಗನಾಥ ರಾಮಚಂದ್ರ ದಿವಾಕರ್‌ರವರು ಭಾರತದ ಧರ್ಮಪರಂಪರೆಯನ್ನು ಕುರಿತು ಮಾತನಾಡುತ್ತ ಭಾರತದಲ್ಲಿ ಸಾವಿರ ವರ್ಷಗಳಲ್ಲಿ ಎಷ್ಟೋ ಧಾರ್ಮಿಕ ಪುನೇತನದವರು ರಾಜ್ಯವಾಳಿದರು. ರಾಜಕೀಯವಾಗಿ ಒಂದು ಪರಂಪರೆಯನ್ನು ಉಳಿಸಿಕೊಂಡು ಬರಲು ಭಾರತೀಯರಿಗೆ ಸಾಧ್ಯವಿಲ್ಲದಾಯಿತು. ಆದರೆ ಧಾರ್ಮಿಕವಾಗಿ ವರ್ಷಾಂತರಗಳಿಂದ ನಮ್ಮ ಪರಂಪರೆಗಳನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಇದು ಭಾರತೀಯರ ಒಂದು ವೈಶಿಷ್ಟ್ಯ. ನಮ್ಮಲ್ಲಿ ಧರ್ಮಕ್ಕೆ ಧರ್ಮರೀತಿಯಲ್ಲಿ ರಾಜ್ಯವಾಳಿದವರಿಗೆ ಹೆಚ್ಚಿನ ಮನ್ನಣೆ ದೊರೆಯುತ್ತದೆ. ಭಾರತದ ಚಕ್ರೇಶ್ವರರಲ್ಲಿ ನಮಗೆ ಅಶೋಕನು ಸಾಮ್ರಾಟ್ ಎನ್ನುವ ಹೆಸರಿಗೆ ಈ ಪ್ರಿಯದರ್ಶಿ ರಾಜರ್ಷಿ ಎಂಬ ರೀತಿಯಲ್ಲಿ ಭಾರತೀಯರ ಹೃದಯ ಪೀಠವನ್ನು ಅಲಂಕರಿಸಿದ್ದಾನೆ. ಅವನು ಬೇರೆ ದೇಶಗಳಿಗೆ ರಾಜಕಾರಣಿಗಳನ್ನು ಕಳಿಸದೆ ಧರ್ಮಪ್ರಸಾರಕರನ್ನು ಕಳಿಸಿ ಅಹಿಂಸಾಯುತವಾಗಿ ರಾಜ್ಯವಾಳಿದುದೇ ಇದಕ್ಕೆ ಕಾರಣ. ಆದ್ದರಿಂದಲೇ ಅವನು ಚಿರಸ್ಮರಣೀಯನಾಗಿದ್ದಾನೆ.

ನಮಗೆ ಸಮಾಜದಲ್ಲಿ ಇರುವ ಕೊರತೆಯೆಂದರೆ ಸತ್ಯ, ಪ್ರೀತಿ ಹಾಗೂ ಅಹಿಂಸೆಯ ಕೊರತೆ. ಭಯವೆಂದರೆ ಅದು ಯುದ್ಧದ ಭಯ, ಅಥವಾ ಹಿಂಸೆಯ ಭಯ. ವೈಜ್ಞಾನಿಕವಾಗಿ ಮಾನವನು ಎಲ್ಲವುಗಳನ್ನೂ ಸಾಧಿಸಬಹುದು. ಆದರೆ ಜನತೆ ಸಂಸ್ಕೃತಿನಿರತರಾಗದೆ, ಧರ್ಮಪ್ರವರ್ತಕರಾಗದೆ, ಅಧ್ಯಾತ್ಮಪ್ರವೃತ್ತಿ ಇಲ್ಲದವರಾದರೆ ವಿಜ್ಞಾನದಿಂದ ಸಾಧಿಸಿದವುಗಳೆಲ್ಲವೂ ವ್ಯರ್ಥ. ಸಹನೆ, ಸಹಬಾಳ್ವೆಯನ್ನು ಜನರು ಪರಸ್ಪರ ಅರ್ಥಮಾಡಿಕೊಳ್ಳಬೇಕು. ಮಧುರವಾದ ಮಾತುಗಳ ಹಿನ್ನೆಲೆಯಲ್ಲಿ ನಮಗೆ ಕಂಡುಬರುವ ನಂಜಿನ ವಾತಾವರಣ ಮತ್ತು ಹಿಂಸೆಯ ಭಯ ತೊಲಗಬೇಕಾದರೆ ಜನರಲ್ಲಿ ಅಧ್ಯಾತ್ಮ ಪ್ರವೃತ್ತಿ ಮೊಳೆಯಬೇಕು ಮತ್ತು ಚೆನ್ನಾಗಿ ಬೆಳೆಯಬೇಕು. ಅಂತಹ ಒಂದು ಮನೋಭಾವವನ್ನು ಮೂಡಿಸಲು ಗುರುಪರಂಪರೆ ಶ್ರಮಿಸ

ಬೇಕು. ಇಂತಹ ಕಾರ್ಯಕ್ರಮಗಳು ನಾಡಿನಲ್ಲಿ ಇನ್ನೂ ಹೆಚ್ಚು ಹೆಚ್ಚಾಗಿ ಜರುಗಲಿ ಎಂದು ಹಾರೈಸಿದರು.

ತದನಂತರದಲ್ಲಿ ಜಗದ್ಗುರು ಶ್ರೀ ಶಿವರಾತ್ರಿಮಹಾಸ್ವಾಮಿಗಳವರು ದಿವ್ಯ ಸಂದೇಶವನ್ನು ಅಪ್ಪಣೆಕೊಡಿಸಿದರು. ಮಹಾಸ್ವಾಮಿಗಳವರ ದಿವ್ಯಸಂದೇಶ—

ನಮ್ಮ ವಿದ್ಯಾರ್ಥಿನಿಲಯಗಳ ವಿದ್ಯಾರ್ಥಿವೃಂದದವರು ನಮ್ಮ ಪೀಠದ ಮೂಲ ಕರ್ತೃಗಳಾದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿವಯೋಗೀಂದ್ರರ ಸಹಸ್ರ ವರ್ಷದ ಜಯಂತಿ ಮಹೋತ್ಸವವನ್ನು ನೆರವೇರಿಸುತ್ತಿರುವುದು ನಮಗೆ ಅಪಾರ ಆನಂದ ವನ್ನುಂಟುಮಾಡಿದೆ. ಈ ಸಮಯದಲ್ಲಿ ಮುಖ್ಯಮಂತ್ರಿಗಳಾದ ಶ್ರೀಮಾನ್ ಬಸಪ್ಪ ದಾನಪ್ಪ ಜತ್ತಿಯವರೂ, ಶ್ರೀಮಾನ್ ರಂಗನಾಥ ರಾಮಚಂದ್ರ ದಿವಾಕರರೂ ಹಾಗೂ ಉತ್ಸವ ಸಮಿತಿಯ ಅಧ್ಯಕ್ಷರೂ ನಮ್ಮ ಪೀಠ ಮತ್ತು ನಮ್ಮಗಳ ವಿಷಯದಲ್ಲಿ ಅಪಾರ ಪ್ರಶಂಸನೀಯ ನುಡಿಗಳನ್ನು ಆಡಿರುವರು. ನಮ್ಮ ಮೂಲಗುರುಗಳು ಆಚಾರ್ಯ ಶ್ರೀ ರೇಣುಕ ಭಗವತ್ಪಾದಕರ ಕೃಪಾನುಗ್ರಹೀತರಾಗಿ ರಾಜೇಂದ್ರ ಚೋಳನ ಪ್ರಾರ್ಥನೆಯಂತೆ ಸಿದ್ಧಗಿರಿಯಿಂದ ಈ ಪ್ರಾಂತ್ಯಕ್ಕೆ ದಯಮಾಡಿಸಿ ಈ ಸಂಸ್ಥೆಯನ್ನು ಸ್ಥಾಪಿಸಿದ ಮಹಾನುಭಾವರು. ಇಂದಿನವರೆಗೆ ನಮ್ಮ ಪೀಠದ ಆಶ್ರಯದಲ್ಲಿ ನಡೆಯು ತ್ತಿರುವ ಕಾರ್ಯಗಳೆಲ್ಲವೂ ಅವರ ಅನುಗ್ರಹ ಆಶೀರ್ವಾದದಿಂದಲೇ ಹೊರತು ನಮ್ಮ ಸಾಮರ್ಥ್ಯವು ಯಾವುದೂ ಅಲ್ಲವೆಂದು ನಾವು ಭಾವಿಸುತ್ತೇವೆ. ಮಹಾ ತಪಸ್ವಿಗಳ ಕೃಪೆ ಹೇಗೆ ನಮ್ಮನ್ನು ನಡೆಸುತ್ತದೋ ಹಾಗೆ ನಾವು ನಡೆದುಕೊಂಡು ಬಂದಿರುತ್ತೇವೆ. ಇನ್ನು ಮುಂದೆಯೂ ಸಹ ಅವರ ಅನುಗ್ರಹದಲ್ಲಿಯೇ ನಮ್ಮ ಪೀಠಾಧಿಪತಿಗಳು ನಡೆದು ಕೊಂಡು ಬರುವುದು ಅಗತ್ಯವಾಗಿದೆ.

ನಾವು ಸುಮಾರು ಅರವತ್ತು ವರ್ಷಗಳ ಕಾಲ ಮೂಲಕರ್ತೃಗಳ ಅಪ್ಪಣೆಯಂತೆ ಕರ್ತವ್ಯ ನಿರ್ವಹಣೆಮಾಡಿ ಇಂದು ನಮ್ಮ ವಿದ್ಯಾರ್ಥಿವೃಂದಕ್ಕೂ ನಮ್ಮ ಭಕ್ತ ವೃಂದಕ್ಕೂ ತನ್ಮೂಲಕ ಇಡೀ ರಾಷ್ಟ್ರಕ್ಕೂ ಸರ್ವಶ್ರೇಯಸ್ಸನ್ನು ಹಾರೈಸುತ್ತಾ ಮಂತ್ರ ಯಜ್ಞದಲ್ಲಿ ನಿರತರಾಗಿದ್ದೇವೆ. ನಮ್ಮ ಮಂತ್ರೋಪಾಸನೆಯ ಫಲ ನಮಗೆ ಲಭಿಸಿದೆ ಯೆಂದು ಇಂದಿನ ಸಮಾರಂಭದಿಂದ ಅರಿವಾಗುತ್ತದೆ. ಏಕೆಂದರೆ ಆಧುನಿಕ ವಿದ್ಯಾ ಭ್ಯಾಸದಲ್ಲಿ ಆಧ್ಯಾತ್ಮ ಪ್ರವೃತ್ತಿ ದಿನದಿನಕ್ಕೆ ಮಾಯವಾದಂತೆ ಭಾಸವಾಗುತ್ತಿದೆ. ಆದರೂ ಸಹ ನಮ್ಮ ವಿದ್ಯಾರ್ಥಿವೃಂದದವರು ತಮ್ಮ ಅಭ್ಯುದಯಕ್ಕೆ ಮೂಲ ಕರ್ತೃ ವೆನಿಸಿದ ಮಹಾ ಗುರುಗಳ ಸ್ಮರಣೆಮಾಡುವ ಈ ಮಹತ್ಕಾರ್ಯದಲ್ಲಿ ನಿರತರಾಗಿರುವುದು ಭವಿಷ್ಯದ ಶುಭ ಚಿಹ್ನೆಯಾಗಿ ಕಾಣುತ್ತದೆ. ಪ್ರಾಚೀನಕಾಲದಲ್ಲಿ ಗುರುಕುಲಗಳಲ್ಲಿ ಅಭ್ಯಾಸಮಾಡುತ್ತಿದ್ದ ವಿದ್ಯಾರ್ಥಿಗಳು "ಆಚಾರ್ಯದೇವೋಭವ" "ಮಾತಾಪಿತೃ ದೇವೋಭವ" ಎಂದು ಹಗಲಿರುಳು ಹಂಬಲಿಸುತ್ತಾ ಆಚಾರ್ಯರಲ್ಲಿ ಮಾತಾಪಿತೃಗಳಲ್ಲಿ

ದೈವಸಾಕ್ಷಾತ್ಕಾರವನ್ನು ಪಡೆಯುತ್ತಿದ್ದರು. ಯುವಕರಲ್ಲಿ ದೈವಭಕ್ತಿ ಬೆಳೆಯದಿದ್ದರೆ ಕಲಿತ ವಿದ್ಯೆ, ಗಳಿಸಿದ ಸಂಪತ್ತು ಎಲ್ಲವೂ ನಿಸ್ಸಾರವಾಗುತ್ತವೆ. ಭಕ್ತಿವಿಹೀನ ಹೃದಯಕ್ಕೆ ಜಗತ್ತಿನ ಯಾವ ಸಂಪತ್ತೂ ಸುಖಶಾಂತಿಗಳನ್ನು ತರಲಾರದು. ನೈಜ ಸುಖಶಾಂತಿಗಳನ್ನು ದೊರಕಿಸದ ವಿದ್ಯೆ ಎಷ್ಟು ಕಾಲ ಕಲಿತರೇನು ಫಲ ? ವಿದ್ಯಾರ್ಜನೆಯ ತಪಸ್ಸಿನ ಫಲಪೂರ್ಣವಾಗಿ ನಮಗೆ ದೊರೆಯಬೇಕಾದರೆ ಯುವಕರು ಆಚಾರ್ಯರಲ್ಲಿ ಮಾತಾಪಿತೃಗಳಲ್ಲಿ ಭಕ್ತಿಶ್ರದ್ಧೆಗಳನ್ನು ಇಡಬೇಕು. ಜ್ಞಾನ ಯಂತ್ರ ಜನ್ಯ ವಸ್ತುವಲ್ಲ. ಯಂತ್ರರೂಪಿನಿಂದ ಗಳಿಸಿದ ವಿದ್ಯೆ ಜ್ಞಾನವೂ ಅಲ್ಲ. ಸರ್ವಪ್ರಯತ್ನಗಳ ಫಲವಾಗಿ ದೇಶದಲ್ಲಿ ವಿದ್ಯಾವಂತರ ಸಂಖ್ಯೆ ಅಧಿಕವಾಗುತ್ತದೆ. ಇದು ಸಂತೋಷದ ವಿಷಯ. ಆದರೆ ವಿದ್ಯಾವಂತರೆಲ್ಲಾ ಜ್ಞಾನಿಗಳಾಗಲು ಪ್ರಯತ್ನಿಸುತ್ತಿಲ್ಲ. ಜ್ಞಾನ ಪ್ರಧಾನವಲ್ಲದ ವಿದ್ಯೆಯ ಬೆಳವಣಿಗೆಯಿಂದ ಲೋಕಕ್ಕೆ ಉಪಕಾರವಾಗುವುದೆಂದು ನಾವು ಆಶಿಸುವುದಿಲ್ಲ. ಆದುದರಿಂದ ವಿದ್ಯೆಯ ಆದ್ಯ ಗುರಿ ಜ್ಞಾನ ಪ್ರಾಪ್ತಿಯಾಗಬೇಕು. ಆಧುನಿಕ ವಿದ್ಯೆಯಿಂದ ಮಾನವನ ಬುದ್ಧಿ ಪ್ರಬಲವಾಗಿ ಬೆಳೆದಿದೆ. ಕೇವಲ ಈ ಬುದ್ಧಿಶಕ್ತಿಯ ಬೆಳವಣಿಗೆಯಿಂದಲೇ ಜಗತ್ತಿನಲ್ಲಿ ಅಪಾರ ಅನರ್ಥಗಳು ಸಂಭವಿಸುತ್ತವೆ. ಜ್ಞಾನದಿಂದ ಆತ್ಮವಿಕಾಸವಾಗುತ್ತದೆ. ಆತ್ಮವಿಕಾಸಕ್ಕೆ ಅವಕಾಶಮಾಡುವ ಜ್ಞಾನದ ಬೆಳವಣಿಗೆಗೆ ಇಂದಿನ ವಿದ್ಯಾಭ್ಯಾಸ ಸಾಧನವಾಗುವಂತೆ ಮಾಡುವುದು ಅಗತ್ಯ. ಅದರಿಂದಲೇ ಲೋಕಕ್ಕೆ ಮುಕ್ತಿ.

ನಮ್ಮ ನಿಲಯಗಳಲ್ಲಿ ಅಭ್ಯಾಸಮಾಡುವ ಯುವಕರಲ್ಲಿ ನಮ್ಮ ವಿಜ್ಞಾಪನೆಯೇನೆಂದರೆ—ನೀವು ಆತ್ಮವಿಕಾಸಮಾಡಿಕೊಳ್ಳುವ ಜ್ಞಾನಪ್ರಾಪ್ತಿಗಾಗಿ ವಿದ್ಯಾತಪಸ್ಸನ್ನು ಆಚರಿಸಬೇಕು. ಗುರುಭಕ್ತಿ, ದೈವಭಕ್ತಿ, ದೇಶಭಕ್ತಿ, ಮಾತಾಪಿತೃಭಕ್ತಿಗಳಿಲ್ಲದೆ ಈ ತಪಸ್ಸು ಸಿದ್ಧಿಸುವುದು ಅಸಾಧ್ಯ. ಆದುದರಿಂದ ನಿಮ್ಮಲ್ಲಿ ಭಕ್ತಿ, ನಿಷ್ಠೆ, ಶ್ರದ್ಧೆಗಳು ಉಜ್ವಲವಾಗಿ ಬೆಳೆಯಲಿ. ತನ್ಮೂಲಕ ನೀವೆಲ್ಲರೂ ಗುರುಕೃಪೆಯಿಂದ ವಿಶ್ವಕೀರ್ತಿ ಭಾಜನರಾಗಬೇಕೆಂದು ಹಾರೈಸುತ್ತೇವೆ. ನಮ್ಮ ಮೂಲ ಆಚಾರ್ಯರ ಜಯಂತೀ ಮಹೋತ್ಸವವನ್ನು ಇಷ್ಟು ವಿಜೃಂಭಣೆಯಿಂದ ನೆರವೇರಿಸುತ್ತಾ ನಮಗೆ ಅಪಾರ ಆನಂದವನ್ನುಂಟುಮಾಡಿರುವಿರಿ. ಈ ಸಮಾರಂಭಕ್ಕೆ ಅನೇಕ ಭಕ್ತಮಹನೀಯರು ಆಗಮಿಸಿರುವುದು ನಮಗೆ ಸಂತೋಷವನ್ನುಂಟುಮಾಡಿದೆ. ತಮ್ಮೆಲ್ಲರಿಗೂ ಶ್ರೀ ಗುರು ಶಿವರಾತ್ರೀಶ್ವರರು ಸರ್ವಸನ್ಮಂಗಳವನ್ನುಂಟುಮಾಡಲೆಂದು ಹಾರೈಸಿ ವಿರಮಿಸುತ್ತೇವೆ.

ಇಂತು ಮಹಾಸ್ವಾಮಿಗಳವರು ತಮ್ಮ ದಿವ್ಯ ಸಂದೇಶವನ್ನು ಅಪ್ಪಣೆ ಕೊಡಿಸಿದರು.

**ಜಯಂತೀಮಹೋತ್ಸವದ ಸಂಭ್ರಮದ ಎರಡನೆಯ ದಿನ ವಿದ್ಯಾ ಸಚಿವರಾದ ಶ್ರೀ ಅಣ್ಣಾರಾವ್ ಗಣಮುಖಿಯವರ ಅಧ್ಯಕ್ಷತೆಯಲ್ಲಿ ನಡೆಯಿತು**

ಸಚಿವರು ನಾಡಿನ ಶಿಕ್ಷಣದ ಕ್ಷೇತ್ರದಲ್ಲಿ ಅಪೂರ್ವವಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಸುತ್ತೂರು ಮಠದ ಬಗ್ಗೆ ಗೌರವದ ನುಡಿಗಳಿಂದ ಬಹುಸಂತೋಷವನ್ನು ವ್ಯಕ್ತ ಪಡಿಸಿದರು. ಎರಡು ಸಾವಿರಕ್ಕೂ ಮೇಲ್ಪಟ್ಟು ವಿದ್ಯಾರ್ಥಿಗಳಿಗೆ ಅನ್ನವನ್ನು ನೀಡಿ ವಿದ್ಯಾರ್ಜನೆಗೆ ನೆರವನ್ನು ನೀಡುತ್ತಿರುವ ಸುತ್ತೂರು ಮಠಕ್ಕೆ ಸರ್ವಶ್ರೇಯಸ್ಸನ್ನು ಕೋರಿದರು. ಹಾಗೂ ನಾಡಿನ ಎಲ್ಲ ಮಠಗಳೂ ಶ್ರೀ ಸುತ್ತೂರುಮಠದ ಶ್ರೇಷ್ಠ ಆದರ್ಶತೆಯನ್ನು ಅನುಸರಿಸಿ ದೇಶದೇಳ್ಗೆಯ ಮಹಾಕಾರ್ಯದಲ್ಲಿ ನೆರವನ್ನು ನೀಡ ಬೇಕೆಂದು ಹೇಳಿದರು.

ತದನಂತರ ಅಂದಿನ ಭಾಷಣಕಾರರಾದ ಶ್ರೀ ಭೀಮಪ್ಪನಾಯಕರು ಭಾಷಣ ಮಾಡುತ್ತ ನಿಲಯದ ವಿದ್ಯಾರ್ಥಿಗಳನ್ನು ಕುರಿತು ಹಿತನುಡಿಗಳನ್ನು ನುಡಿದರು. ಪವಿತ್ರವಾದ ಮಠದ ಆಶ್ರಯದಲ್ಲಿ ಬೆಳೆಯುತ್ತಿರುವ ವಿದ್ಯಾರ್ಥಿಗಳೆಲ್ಲರೂ ಜೀವನದಲ್ಲಿ ದೊಡ್ಡ ಆದರ್ಶವನ್ನು ಇಟ್ಟುಕೊಂಡು ಈ ಧರ್ಮಸಂಸ್ಥೆಯ ಶ್ರೇಯಸ್ಸಿಗೆ ಕಾರಣರಾಗ ಬೇಕೆಂದರು. ಸುತ್ತೂರುಮಠದ ಮೇಲಿನ ತಮ್ಮ ಅಭಿಮಾನವನ್ನು ಹಾಗೂ ಅದರ ಪುಣ್ಯಕಾರ್ಯವನ್ನು ಸೇರಿಸಿಕೊಂಡು ದೇಶದ, ಸಮಾಜದ ಏಳಿಗೆಯಾಗಬೇಕಾದರೆ ಇಂತಹ ಧರ್ಮಸಂಸ್ಥೆಗಳು ಅತ್ಯವಶ್ಯ ಎಂದು ಹೇಳಿದರು.

ದಿನಾಂಕ 2-12-59 ಜಯಂತೀಮಹೋತ್ಸವದ ತೃತೀಯ ದಿನ ಕನ್ನಡ ಸಾಹಿತ್ಯಪರಿಷತ್ತಿನ ಅಧ್ಯಕ್ಷರಾದ ಕೀರ್ತನಕೇಸರಿ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಘನ ಅಧ್ಯಕ್ಷತೆಯಲ್ಲಿ ನೆರವೇರಿತು. ಶ್ರೀಯುತರು ಶ್ರೀ ಸುತ್ತೂರು ವೀರಸಿಂಹಾಸನದ ಸಂಕ್ಷೇಪ ಇತಿಹಾಸವನ್ನು ಹೇಳಿ, ಶ್ರೀಮಠದ ಶ್ರೇಷ್ಠತೆಯನ್ನು ಮಹಾಕಾರ್ಯವನ್ನು ನೆರದ ನೆರವಿಗೆ ನೆನಪುಮಾಡಿಕೊಟ್ಟರು. ನಾಡಿನ ಸರ್ವತೋ ಮುಖವಾದ ಹಿತದದೃಷ್ಟಿಯಿಂದ ತನ್ನ ಭಕ್ತಿಯ ಸೇವೆಯನ್ನು ಬಹುಕಾಲದಿಂದಲೂ ಸಲ್ಲಿಸುತ್ತಾ ಬಂದಿರುವ ಸುತ್ತೂರು ಮಠವು ನಿಜವಾಗಿಯೂ ತುಂಬುಗೌರವಕ್ಕೆ ಪಾತ್ರ ವಾಗಿದೆಯೆಂದರು. ಅಂತಹ ಖ್ಯಾತಿವೆತ್ತ ಮಠದ ಆಶ್ರಯದಲ್ಲಿ ಬೆಳೆಯುತ್ತಿರುವ ವಿದ್ಯಾರ್ಥಿಗಳಿಗೆ ಶುಭವನ್ನು ಕೋರಿದರು.

ದಿನಾಂಕ 3-12-59 ಗುರುವಾರ ಚತುರ್ಥಿ ದಿನ ಉಡುಪಿ ಅದಮಾರು ಮಠಾ ಧೀಶರಾದ ಶ್ರೀ ವಿಬುದೇಶತೀರ್ಥಮಹಾಸ್ವಾಮಿಗಳವರ ಘನ ಅಧ್ಯಕ್ಷತೆಯಲ್ಲಿ ವಿಜೃಂ ಭಣೆಯಿಂದ ನಡೆಯಿತು. ಅವರ ಆಳವಾದ ಅನುಭವದಿಂದ ಹೊರಬಿದ್ದ ನುಡಿಗಳು

ಜನಸಾಮಾನ್ಯರೆಲ್ಲರನ್ನೂ ಮುಗ್ಧಗೊಳಿಸಿತು. ಧರ್ಮವೆ ಅವರ ರಕ್ತಗತವಾಗಿದೆಯೆ ಎನ್ನುವ ರೀತಿಯಲ್ಲಿ ಬಹು ಸರಳಸುಲಭವಾದ ರೀತಿಯಲ್ಲಿ ನಿರರ್ಗಳವಾಗಿ ಧರ್ಮ ತಿರುಳನ್ನು ಪ್ರೇಕ್ಷಕರ ಹೃದಯದಲ್ಲಿ ನಿಲ್ಲಿಸಿದರು.

ಕೃತಜ್ಞತೆಗಿಂತ ಮೇಲಿನ ಗುಣವಿಲ್ಲ. ಎಲ್ಲ ಧರ್ಮಗಳೂ ಕೂಡ ಕೃತಜ್ಞ ಯಲ್ಲಿ ಸೇರಿಹೋಗುತ್ತವೆ. ಮಾತೃಭಕ್ತಿ, ಪಿತೃಭಕ್ತಿ, ಗುರುಭಕ್ತಿಗಳೆಲ್ಲ ಕೃತಜ್ಞ ಯಲ್ಲಿ ಸೇರಿಹೋಗುತ್ತವೆ. ತಾಯಿಯು ಮಾಡಿದ ಉಪಕಾರವನ್ನು ಸ್ಮರಿಸಿ ಕೃತಜ್ಞ ಯನ್ನು ಸಲ್ಲಿಸಬೇಕು. ಈ ಎಲ್ಲ ಧರ್ಮಗಳೂ ಕೃತಜ್ಞತೆಯಲ್ಲಿ ಪರ್ಯಾವಸಾ ಹೊಂದುತ್ತವೆ. ಕೃತಜ್ಞತೆಗಿಂತ ಹೆಚ್ಚಿನದು ಇನ್ನೊಂದು ಧರ್ಮವಿಲ್ಲ.

ಹಿಂಸೆಯೆನ್ನುವುದು ಉಪಕಾರದ ವಿಸ್ಮೃತಿ. ಜೀವನದಲ್ಲಿಯ ಅವಸ್ಥೆ. ಅಂಥಾ ಅವಸ್ಥೆಗಳನ್ನು ಯಾರು ನಮ್ಮ ಹೃದಯದಿಂದ ಹೊರಗೆ ಹಾಕಿ ಅಲ್ಲಿ ಜ್ಞಾನವನ್ನು ಸೇದ ವುದಕ್ಕಿಂತ ಹೆಚ್ಚಿನವರು ಯಾರು ? ಹೀಗೆ ನಿಮಗೆಲ್ಲರಿಗೂ ಜ್ಞಾನದ ಬೆಳಕನ್ನು ಕೊಟ್ಟ ಮಹಾಸ್ವಾಮಿಗಳನ್ನು ಸ್ಮರಿಸಿ ಕೃತಜ್ಞತೆಯನ್ನು ತೋರಿಸಿದರೆ ವಂಶಪಾರಂಪರ್ಯವಾ ಶ್ರೇಯಸ್ಸು ಲಭಿಸುತ್ತದೆ. ಎಂದು ಸುತ್ತೂರು ಮಠದ ಆಶ್ರಯದಲ್ಲಿ ಬೆಳೆಯುತ್ತಿರುವ ವಿದ್ಯಾರ್ಥಿಗಳನ್ನು ಕುರಿತು ಹಿತದ ನುಡಿಯನ್ನು ಹೇಳಿದರು. ಎರಡು ಸಾವಿ ವಿದ್ಯಾರ್ಥಿಗಳಿಗೆ ಅನ್ನಕೊಟ್ಟು ವಿದ್ಯೆಯನ್ನು ಕೊಟ್ಟು ನಿಮ್ಮ ಶ್ರೇಯಸ್ಸಿಗಾಗಿ ದುಡಿ ಯುತ್ತಿರುವ ಈ ಸಂಸ್ಥೆ ಹಿರಿದಾದುದು. ಇಂತಹ ಕಾರ್ಯವನ್ನು ಮಾಡಿದ ಧಾರ್ಮಿಕ ಸಂಸ್ಥೆಗಳ ಬಗ್ಗೆ ಜನರ ಆದರ ವಿಶ್ವಾಸ ಬೆಳೆಯುವುದು, ಎಂದು ಹೇಳುತ್ತಾ ಹೀಗೆ ಜನಹಿತಕ್ಕಾಗಿ ದುಡಿಯುತ್ತಿರುವ ಈ ಮಠದ ಮಹಾಸೇವೆಯನ್ನು ನೋಡಿ ತಮಗೆ ಅಪರಿಮಿತವಾದ ಆನಂದವನ್ನು ವ್ಯಕ್ತಪಡಿಸಿದರು.

ಮೋಕ್ಷದಷ್ಟು ಹತ್ತಿರದ ವಿಷಯು ಇನ್ನೊಂದಿಲ್ಲ. ಮೋಕ್ಷ ಅಂದರೆ ನಾವು ಎಲ್ಲ ಪ್ರಪಂಚದ ವ್ಯವಹಾರಗಳಿಂದ ಮನಸ್ಸನ್ನು ಹಿಂದೆ ತಂದು ನಮ್ಮನ್ನು ನಾವ ಕಾಣುವುದೇ ಮೋಕ್ಷ. ತಾನೇ ತಾನಾಗಿರುವುದು ಮೋಕ್ಷ. ಮುಕ್ತಿಯೆಂದರೆ ತನ್ನನ್ನು ತಾನೇ ತಿಳಿದುಕೊಳ್ಳುವುದು.

ಮನುಷ್ಯ ಜೀವನ ಅಶಾಶ್ವತವಾದುದು. ಮನುಷ್ಯನ ಅರ್ಧ ಜೀವನ ಮೃತ್ಯು ವಿನಿಂದ ಹಿಡಿಯಲ್ಪಟ್ಟಿದೆ. ಆದರೂ ಆಳಿಯಾಸೆಗಾಗಿ ಹಾತೊರೆಯುತ್ತಿದ್ದಾನೆ ಈ ಮಾನವ. ನಾವು ಪರಮಾತ್ಮನ ಸ್ಮರಣೆಯನ್ನು ಮಾಡಿ ಜೀವನವನ್ನು ಬಾಳಿದ ಸಾರ್ಥಕವಾಗುತ್ತದೆ. ಹಾಗೆ ಬಾಳಲು ನಾವು ಪ್ರಯತ್ನಿಸಬೇಕು. ಅವರು 'ಮತ ವನ್ನು ಕುರಿತು ಹೇಳುತ್ತಾ ಮತ ಹುಟ್ಟಿದ್ದು ದ್ವೇಷವನ್ನು ಹುಟ್ಟಿಸಲಿಕ್ಕೆ ಅಲ್ಲ. ಅದ ಜನಜೀವನದಲ್ಲಿ ವಿಚಾರಕ್ರಾಂತಿಯಿಂದಾಗಿ ಮತಹುಟ್ಟಿಕೊಂಡದ್ದು. ಮತವೆನ್ನುವುದ



ಉಡುಪಿ ಅದಮಾರು ಮಠಾಧೀಶರಾದ ಶ್ರೀ ವಿಭುದೇಶತೀರ್ಥ ಶ್ರೀಪಾದಂಗಳವರು
ಜಯಂತೀಮಹೋತ್ಸವದಲ್ಲಿ ಸಂದೇಶ ನೀಡುತ್ತಿರುವುದು.

ಜಯಂತೀ ಮಹೋತ್ಸವದಲ್ಲಿ ಉಡುಪಿ ಅದಮಾರು ಮಠಾಧೀಶರಾದ ಶ್ರೀ ವಿಭುಧೇಶ ತೀರ್ಥ ಶ್ರೀಪಾದಂಗಳವರು ಜಗದ್ಗುರು ಗುರುಕುಲದ ಸಾಧಕರೊಂದಿಗೆ



ದ್ವೇಷಕ್ಕಲ್ಲ ಎಂದು ತಿಳಿದುಕೊಳ್ಳುವವರೆಗೆ ದೇಶದಲ್ಲಿ ಶಾಂತಿ ಸುಖ ಲಭಿಸಲಾರವು.
ಮತವು ಕೇವಲ ವಿಚಾರಕ್ರಾಂತಿಯು ಪರಸ್ಪರ ಅಭಿಪ್ರಾಯ ವ್ಯತ್ಯಾಸಗಳು. ಹೀಗೆ
ನೀವೆಲ್ಲರೂ (ವಿದ್ಯಾರ್ಥಿಗಳು) ಈ ಸುತ್ತೂರು ಧರ್ಮಸಂಸ್ಥೆಯ ವಿಶಾಲಮನೋಭಾವ
ನೆಯ ನೆರಳಿನಲ್ಲಿ ಬೆಳೆದು ಪರಸ್ಪರ ಪ್ರೇಮದಿಂದ ನಡೆದುಕೊಂಡು ಜೀವನದಲ್ಲಿ ಶಾಂತಿ
ಯನ್ನು ಪಡೆದುಕೊಳ್ಳಿರಿಯೆಂದು ಹೃದಯಪೂರ್ವಕವಾಗಿ ಹಾರೈಸಿದರು. ಹೀಗೆ
ಅಧ್ಯಾತ್ಮ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ಕೊಟ್ಟು ಹೃದಯ ಸಂಸ್ಕಾರದಂತಹ ಪವಿತ್ರ
ಕಾರ್ಯವನ್ನು ಕೈಗೊಂಡಿರುವ ಶ್ರೀ ಸುತ್ತೂರು ಸಿಂಹಾಸನ ಹಾಗೂ ಅದರ ಸಂಸ್ಥಾಪ
ನಾಚಾರ್ಯರು ಧನ್ಯರು ಎಂದು ತಮ್ಮ ಸಂತೋಷವನ್ನು ಪುನಃ ವ್ಯಕ್ತಪಡಿಸಿ ಭಾಷಣ
ವನ್ನು ಮುಕ್ತಾಯಗೊಳಿಸಿದರು.

ಅಂದಿನ ಭಾಷಣಕಾರರಲ್ಲಿ ಒಬ್ಬರಾದ ಶ್ರೀ ಕೆ. ಬಾಲಕೃಷ್ಣರಾವ್, ಎಂ.ಎಲ್.
ಸಿ. ಮಂಗಳೂರು ಇವರು ವಿದ್ಯಾರ್ಥಿಗಳಿಗೆ ಅನೇಕ ಹಿತದನುಡಿಗಳನ್ನೂ ಹಾಗೂ
ಸಂಸ್ಥೆಯ ಕಾರ್ಯದ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

ಪ್ರತಿಯೊಂದು ಕಾರ್ಯವನ್ನು ಮಾಡುವಾಗ ಈಶ್ವರನಿಗೆ ಮೆಚ್ಚಿಗೆಯಾಗುವಂತೆ
ಅಂದರೆ ನಮ್ಮ ಅಂತರಾತ್ಮವು ಮೆಚ್ಚುವಂತೆ ಮಾಡಬೇಕು. ನಿಷ್ಕಾಮಕರ್ಮವನ್ನು
ಮಾಡುವ ಧರ್ಮಗುರುಗಳು ಜನಹಿತದ ದೃಷ್ಟಿಯಿಂದ, ನುಡಿದಂತೆ ಕರ್ಮವನ್ನು
ಮಾಡುತ್ತಾರೆ. ಅಂದರೆ ನುಡಿದಂತೆ ನಡೆಯುತ್ತಾರೆ. ಶುದ್ಧವಾದ ಮನೋಭಾವನೆ
ಯಿಂದ ಮಾಡುವ ಕಾರ್ಯವನ್ನು ಮಾಡಬೇಕು. ಉತ್ತಮನಾದವನು ಹೇಗೆ ಆಚರಿಸಿ
ತೋರಿಸುತ್ತಾನೋ ಅವನನ್ನು ನೋಡಿ ಇತರರು ಆಚರಿಸುತ್ತಾರೆ. ಆದರಿಂದ ಜನರಿಗೆ
ಕ್ಷೇಮವಾಗುತ್ತದೆ. ಹಾಗೂ ದೇಶದ ಕಲ್ಯಾಣವಾಗುತ್ತದೆ. ಮಹಾನುಭಾವರಾದವರು
ಜೀವನದಲ್ಲಿ ತಾವು ನುಡಿದಂತೆ ನಡೆಯುವರು. ಅವರ ಆ ಆದರ್ಶದ ಕಾರ್ಯಗೌರವ
ವನ್ನು ಇತರರು ಅನುಸರಿಸಿದರೆ ದೇಶಕ್ಕೆ ಹಾಗೂ ದೇಶದ ಜನತೆ ಶಾಂತಿ ಸೌಖ್ಯವನ್ನು
ಪಡೆಯುವುದರಲ್ಲಿ ಸಂದೇಹವಿಲ್ಲ.

ಈ ಶ್ರೀ ಸುತ್ತೂರು ಮಠದ ಮಹಾನುಭಾವರಾದ ಮಹಾಸ್ವಾಮಿಗಳು ನುಡಿ
ದಂತೆ ನಡೆಯುವರು ಅಂತಹ ಶ್ರೇಷ್ಠ ಶರಣರು ನಮ್ಮ ಆದರ್ಶಪುರುಷರಾಗಿ ದೊರೆತಿ
ರುವುದು ನಮ್ಮ ಸುದೈವ. ಅಂತಹ ಸತ್ಪುರುಷರ ಮಾರ್ಗದಲ್ಲಿ ನಡೆದು ನಾವೆಲ್ಲರೂ
ದೇಶದ ಏಳ್ಗೆಗಾಗಿ ದುಡಿಯಬೇಕು ಎಂದು ಹೇಳುತ್ತಾ ತಮ್ಮ ಭಾಷಣವನ್ನು
ಮುಕ್ತಾಯಗೊಳಿಸಿದರು.

ಅನಂತರ ಈ ದಿನದ ಇನ್ನೊಬ್ಬರು ಭಾಷಣಕಾರರಾದ ಶ್ರೀ ತಿಪ್ಪೇರುದ್ರಸ್ವಾಮಿ,
ಎಂ.ಎ., ಇವರು "ಶರಣರ ಅನುಭವಮಾರ್ಗ" ಎನ್ನುವ ವಿಷಯದ ಮೇಲೆ ಪ್ರವ

ವಿದ್ವತ್‌ಪೂರ್ಣವಾದ ಹಾಗೂ ಅನುಭವಪೂರ್ಣವಾದ ಭಾಷಣವನ್ನು ಮಾಡಿದರು. ಶರಣರು ತಮ್ಮ ಜೀವನದಲ್ಲಿ ಸಾಧಿಸಿದ ಷಟ್ಸ್ಥಲಮಾರ್ಗವನ್ನು ಸೊಗಸಾಗಿ ಸುಲಭ ವಾಗಿ ಪ್ರೌಢವಾದ ಭಾಷೆಯಲ್ಲಿ ವಿವರಿಸಿದರು.

ಜೀವನದಲ್ಲಿ ಕಲಿಯುವುದಕ್ಕಿಂತ ಕಲಿತದ್ದನ್ನು ಅನುಷ್ಠಾನದಲ್ಲಿ ತರುವುದೇ ಹೆಚ್ಚು ಇರುತ್ತದೆ. ಮನಸೆನ್ನುವುದು ಒಂದು ಗಿಳಿ. ಅದಕ್ಕೆ ಮೆಲ್ಲಗೆ ಮಾತನ್ನು ಕಲಿಸ ಬೇಕು. ಮನಸ್ಸನ್ನು, ಗಿಳಿಯನ್ನು ಪಳಗಿಸುವಂತೆ ಪಳಗಿಸಬೇಕು. ಶರಣರು ಕಂಡ ಅನುಭವಮಾರ್ಗ ನಮ್ಮ ಭಾರತ ಸಂಸ್ಕೃತಿಯ ಉಜ್ವಲ ಪರಂಪರೆಗೆ ಸಂಬಂಧಿಸಿದ್ದು. ಶರಣರ ಚಿರಂತನತೆ ಇರುವುದು ನುಡಿದದ್ದನ್ನು ಆಚರಿಸುವುದರಲ್ಲಿಯೇ ಇದೆ. ಮನುಷ್ಯನ ಸಂಸ್ಕೃತಿಯಿರುವುದು ದೊಡ್ಡದೊಡ್ಡ ಗ್ರಂಥಗಳನ್ನು ಓದುವುದರಲ್ಲಿ ಇಲ್ಲ. ಓದಿದ್ದನ್ನು ಆಚರಣೆಯಲ್ಲಿ ತರುವುದಲ್ಲಿಯೇ ಇದೆ. "ಅನುಭಾವವೆಂಬುದು ಅಂತರಂಗದ ರತ್ನ ಕಾಣಿರೋ" ಎಂದು ಶರಣರು ಅಂದಿದ್ದಾರೆ. ಕಾಡಿನಲ್ಲಿ ಹೋಗಿ ಒಬ್ಬ ಯೋಗಿ ಸಾಧಿಸಬಹುದಾದನ್ನು ಒಬ್ಬ ದೋಣಿ ನಡೆಸುವ ಅಂಬಿಗರ ಚೌಡಯ್ಯ ಸಾಧಿಸಬಲ್ಲ. ಹೀಗೆ ಆಧ್ಯಾತ್ಮ ಒಬ್ಬರ ಸ್ವತ್ತಲ್ಲ. ಕಾರ್ಯದ ಗೌರವ ಇರುವುದು ಕಾರ್ಯದಲ್ಲಿ ಇಲ್ಲ. ಅದನ್ನು ಮಾಡುವ ಮನೋಭಾವನೆಯಲ್ಲಿದೆ. ಅನುಭವ ಮಂಟಪವೆನ್ನುವುದು ಕವಿಯ ಕಲ್ಪನೆಯಲ್ಲಿ ಕಾರ್ಯದ ಮೂಲಕ ಸಾಧಿಸಿದ ಕಾರ್ಯಸೌಧ ಅದು. ಬಸವಣ್ಣನವರು ಅಂದು ಹೊಸಸೃಷ್ಟಿಗೆ ಕಾರಣೀಭೂತರಾದರು. ಅವರು ಕಂಡ ಧರ್ಮಸ್ವರೂಪದಲ್ಲಿ ಮಾನವನ ಎಲ್ಲ ಮನೋಭೂಮಿಕೆಗೆ ಅವಕಾಶವುಂಟು. ಅದಕ್ಕೆ ಷಟ್ಸ್ಥಲವೆನ್ನುವರು. ಆನಂದವೆನ್ನುವುದು ವಸ್ತುವಿನಲ್ಲಿ ಇಲ್ಲ, ಅದು ಮನೋಧರ್ಮ ದಲ್ಲಿದೆ. ಪ್ರಕೃತಿಯಲ್ಲಿ ಸಹಜವಾಗಿರುವ ಭಯ, ಪ್ರೀತಿ, ಕುತೂಹಲಗಳು ಪ್ರತಿ ಯೊಬ್ಬ ವಿಚಾರವಂತ ಮಾನವನಲ್ಲಿ ಪ್ರತಿಫಲಿಸುತ್ತಲೇ ಇರುತ್ತವೆ. ಮನುಷ್ಯನ ಜೀವನ ಎಷ್ಟು ಕ್ಷಣಿಕವಾದುದನ್ನು ಬಸವಣ್ಣನವರ ವಚನಗಳಲ್ಲಿ ಕಾಣಬಹುದು. ಮನುಷ್ಯ ಜೀವನವೆಂಬುದು ಹಾವಿನ ಬಾಯಿಯಲ್ಲಿರುವ ಕಪ್ಪೆ ಹಾರುವ ನೊಣವನ್ನು ಹಿಡಿಯಲು ಹೋದಂತೆ. ಕಪ್ಪೆ ನಾವು ಇದು ನಮ್ಮ ಜೀವನದ ಸ್ಥಿತಿ. "ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ" ಎಂದು ಬಸವಣ್ಣನವರು ಅನ್ನುವರು. "ಈಸಬೇಕು ಇದ್ದು ಜೈಸಬೇಕು" ಇದು ಮನುಷ್ಯ ಜೀವನದ ಗುರಿ. ದೈಹಿಕವಾದ ಆತೃಪ್ತಿ ಮೊದಲನೆ ಸಾಧನ. ಬಸವಣ್ಣನವರ ವಚನಗಳು ವಿಶ್ವಸಾಹಿತ್ಯಕ್ಕೆ ಕೊಟ್ಟ ಕೊಡಿಗೆಗಳು. ಮಹೇಶ್ವರ ಸ್ಥಲದಲ್ಲಿ ನಮಗೆ ಬೇಕಾದುದು ಏಕೈಕ ನಿಷ್ಠೆ. "ನಾನಳಿವ ಪಥವೇ ನೀನಳಿವ ಮಾರ್ಗ" ಎಂದು ಕುವೆಂಪುರವರು ಒಂದೆಡೆ ಹೇಳುತ್ತಾರೆ. ಹೀಗೆ ಇನ್ನೊಂದು ಶಕ್ತಿಯ ಅವತರಣವಾದಾಗಲೇ ನಾವು ದೊಡ್ಡವರಾಗುವುದು. ನಮ್ಮ ದೇಶ ಅಧ್ಯಾತ್ಮವನ್ನು ಬಿಟ್ಟದ್ದರಿಂದ ಅದನ್ನು ಸರಿಯಾಗಿ ತಿಳಿಯದಿದ್ದರಿಂದ ನಾವು ಹಿಂದೆ ಇದ್ದೇವೆ. ಅಂತರಂಗಶುದ್ಧಿ ಕಡೆ ಶರಣರು ಮಹತ್ವವನ್ನು ಕೊಟ್ಟಿದ್ದರು. ತಾನೆ

ಆ ಶಕ್ತಿಯಾಗಿ ಪರಿಣಮಿಸುವುದಕ್ಕೆ ಅನುಭಾವಶಕ್ತಿಯೆನ್ನುವರು. ತಾನೇ ಅದು ಆಗಿರುವುದು ಅನುಭಾವ. ಶರಣಸ್ಥಲದಲ್ಲಿ ಅವಗುಣಗಳನ್ನು ಕಳೆದುಕೊಂಡು ಸದ್ಗುಣಗಳನ್ನು ಪಡೆದುಕೊಳ್ಳುತ್ತಾನೆ. ಶರಣರಮಾರ್ಗ ಆಧುನಿಕದೃಷ್ಟಿಗೂ ಕೂಡ ಪೂರ್ಣತೆಯನ್ನು ಕೊಡುವಂಥದ್ದು. ಐಕ್ಯಸ್ಥಳದಲ್ಲಿ ಸಮರಸಭಕ್ತಿ. ಅಲ್ಲಿ ಕೊನೆಯ ಸಮರಸತೆಯನ್ನು ಕಾಣುತ್ತೇವೆ. ಎಂದು ವಿಚಾರಪೂರ್ಣ ಭಾಷಣ ಮಾಡಿದರು.

ದಿನಾಂಕ 4–12–59 ರ ಶುಕ್ರವಾರ, ಐದನೆಯದಿನ. ದಿನದಿನವೂ ಸಂಭ್ರಮ ಸಂತೋಷಗಳ ಆಧಿಕ್ಯದಿಂದ ಸಾಂಗವಾಗಿ ಸಾಗುತ್ತಿರುವ ಈ ಜಯಂತೀಮಹೋತ್ಸವವು ಐದನೇ ದಿನವೂ ಕೂಡ ಉತ್ಸಾಹ ಭಕ್ತಿಗಳ ಸಮ್ಮಿಳಿತವಾಗಿಯೇ ನೆರವೇರಿತು.

ಮೈಸೂರು ಪ್ರದೇಶ ಕಾಂಗ್ರೆಸ್ಸಿನ ಮಾಜಿ ಅಧ್ಯಕ್ಷರಾದ ಸಾ॥ ಎಸ್. ಚನ್ನಯ್ಯನವರು ಐದನೇ ದಿನದ ಉತ್ಸವದ ಅಧ್ಯಕ್ಷತೆಯನ್ನು ವಹಿಸಿದ್ದರು.

ಮಾಜಿ ಗೃಹಸಚಿವರಾದ ಶ್ರೀ ಹೆಚ್. ಸಿದ್ದವೀರಪ್ಪನವರು ಮತ್ತು ತರುಣ ಕವಿಗಳಾದ ಶ್ರೀ ಜಿ. ಎಸ್. ಶಿವರುದ್ರಪ್ಪನವರು, ಎಂ. ಎ. ಇವರುಗಳಿಂದ ಭಾಷಣವನ್ನು ಏರ್ಪಡಿಸಲಾಗಿತ್ತು.

ಮಾನ್ಯ ಅಧ್ಯಕ್ಷರು ಶ್ರೀ ಸುತ್ತೂರು ಮಠದ ಬಗ್ಗೆ ತಮಗೆ ಇರುವ ಹೆಚ್ಚಿನ ಗೌರವವನ್ನು ಪ್ರೀತಿಯನ್ನು ವ್ಯಕ್ತಪಡಿಸಿದ್ದಲ್ಲದೆ ವಿದ್ಯಾರ್ಥಿಗಳನ್ನು ಕುರಿತು ಹಿತದ ನುಡಿಗಳನ್ನು ಆಡಿದರು. ನಮ್ಮ ದೇಶದ ಸುಧಾರಣೆಯಾಗಬೇಕಾದರೆ ಇಂತಹ ಮಠಗಳು ಲೋಕಹಿತದ ಕಾರ್ಯವನ್ನು ಮಾಡಬೇಕು. ಹೀಗೆ ಶ್ರೀ ಸುತ್ತೂರುಮಠವು ಅನೇಕ ವರ್ಷಗಳಿಂದ ಬಹು ಹೆಚ್ಚಿನ ಸೇವೆಯನ್ನು ಸಲ್ಲಿಸುತ್ತಿರುವುದನ್ನು ನೋಡಿ ತಮಗೆ ಬಹಳ ಗೌರವ ಉಂಟಾಗಿದೆಯೆಂದು ಬಹುಸಂತೋಷದಿಂದ ವ್ಯಕ್ತಪಡಿಸಿದರು.

ತದನಂತರ ಭಾಷಣಕಾರರಾದ ಶ್ರೀ ಹೆಚ್. ಸಿದ್ದವೀರಪ್ಪನವರು ಭಾಷಣ ಮಾಡುತ್ತ ಶ್ರೀ ಸುತ್ತೂರು ಮಠದ ವಿಷಯದಲ್ಲಿ ತುಂಬು ಗೌರವದ ಹಾಗೂ ಆತ್ಮೀಯತೆಯ ನುಡಿಗಳನ್ನು ಹೇಳಿದರು.

ಸುತ್ತೂರು ಸಿಂಹಾಸನ ವಿಶೇಷವಾದ ವಿದ್ಯಾದಾನವನ್ನು ಮಾಡುತ್ತಿದೆ. ನಮ್ಮ ಮೈಸೂರು ರಾಜ್ಯದಲ್ಲಿರುವ ಇಂತಹ ವಿದ್ಯಾದಾನ ಮಾಡುವ ಸಂಸ್ಥೆಗಳಲ್ಲಿ ಅಂಕೆ–ಸಂಖೆಗಳನ್ನು ಲೆಖ್ಖಹಾಕಿ ನೋಡಿದರೆ ಪ್ರಥಮಸ್ಥಾನ ದೊರೆಯಬೇಕಾದುದು ಶ್ರೀ ಸುತ್ತೂರು ವೀರಸಿಂಹಾಸನದ ಮಠಕ್ಕೆ ಸಲ್ಲಬೇಕಾಗುತ್ತದೆ ಎಂದರೆ ಅತಿಶಯೋಕ್ತಿ ಆಗಲಾರದು ಎಂದರು. ಹಿಂದೆ ಬಸವಣ್ಣನವರ ಉದಾತ್ತವಾದ ಆದರ್ಶದ ಮಾರ್ಗ

ದಲ್ಲಿ ತನ್ನ ಕಾರ್ಯವನ್ನು ಸಾಗಿಸುತ್ತ ಬಂದಿದೆ. ಹೀಗೆ ಸುತ್ತೂರು ಮಠದ ಕಾರ್ಯ ಗೌರವದ ಸೂಕ್ಷ್ಮ ಅರಿವನ್ನು ಮಾಡಿಕೊಟ್ಟು ಅದರ ಉದಾರತೆಯನ್ನೂ ಶ್ರೇಷ್ಠತೆಯನ್ನೂ ಜನ ಹಾಗೂ ಸರಕಾರ ತಿಳಿದು ಮನ್ನಿಸಬೇಕು-ಎಂದು ಹೇಳಿ ತಮ್ಮ ಮಾತನ್ನು ಮುಗಿಸಿದರು.

ಅಂದಿನ ಇನ್ನೊಬ್ಬ ಭಾಷಣಕಾರರಾದ ಶ್ರೀ ಜಿ. ಎಸ್. ಶಿವರುದ್ರಪ್ಪನವರು "ಅರಿತರೆ ಶರಣ, ಮರೆತರೆ ಮಾನವ" ಎನ್ನುವ ವಿಷಯದ ಮೇಲೆ ಪಾಂಡಿತ್ಯಪೂರ್ಣವಾದ ಭಾಷಣವನ್ನು ಮಾಡಿದರು. ಅವರ ಭಾಷಣದ ಸಾರಾಂಶವನ್ನು ಮಾತ್ರ ಇಲ್ಲಿ ಉದ್ಧರಿಸಲ್ಪಟ್ಟಿದೆ.

ಕಾಲದ ಕತ್ತಲೆಯಲ್ಲಿ ಕೆಲವೇ ದೀಪಗಳು ಬೆಳಗುವುದು ಕಾಣಬರುತ್ತದೆ. ಕಾಲ ಅಗಾಧವಾದ ಕತ್ತಲೆ ನಮ್ಮ ಮೇಲೆ ಬಿದ್ದಾಗ ನಮಗೆ ಕಾಣುವುದು ಜೀವನದ ದೊಡ್ಡ ವ್ಯಕ್ತಿಗಳು ಮಾತ್ರ ನಮಗೆ ಕಾಣುತ್ತಾರೆ. ಕಾಲದ ಕತ್ತಲೆಯನ್ನು ಗೆದ್ದವರಿಗೆ ನಾವು ಮಹಾವ್ಯಕ್ತಿಗಳು ಎನ್ನುತ್ತೇವೆ. ಒಂದು ದೇಶದ ಸಂಪತ್ತು, ಆ ದೇಶದ ಸಂಪತ್ತಲ್ಲ. ಆ ದೇಶದ ಮಹಾವ್ಯಕ್ತಿಗಳೇ ನಿಜವಾದ ನಮ್ಮ ದೇಶದ ಸಂಪತ್ತು ಎಂದು ಒಬ್ಬ ಆಂಗ್ಲ ಸಾಹಿತಿ ಹೇಳುತ್ತಾನೆ. ಮಹಾವ್ಯಕ್ತಿಗಳು ಜೀವನದಲ್ಲಿ ಅಮೂಲ್ಯವಾದ ರತ್ನಗಳನ್ನು ಹುಡುಕಿ-ಕಡೆದು ಕೊಟ್ಟನಂತರ ಆ ಕಾಲದ ಕವಿಗಳು ಹಾಡಿ ಹಾಡಿ ಜನಜೀವನಕ್ಕೆ ಸಾರುತ್ತಾರೆ.

ಶರಣರೆಂದರೆ ಯಾರು ? " ಅರಿತರೆ ಶರಣ ಮರೆತರೆ ಮಾನವ " (ಬಸವಣ್ಣ) ನಾವು ಮನುಷ್ಯರು ಎಂದು ಮೊದಲು ಅರಿತುಕೊಳ್ಳಬೇಕು. ಪ್ರಾಣಿಗಳ ಪ್ರಪಂಚದ ಕಟ್ಟಕಡೆಯ ವಿಕಾಸದ ಸ್ಥಿತಿಯಲ್ಲಿಯ ರೂಪ "ಮನುಷ್ಯನಾದವನು ಪತಿತನಾದ ದೇವತೆ" ಅದನ್ನು ಮನುಷ್ಯ ಕಂಡುಕೊಳ್ಳಬೇಕು. ಮನುಷ್ಯನಲ್ಲಿ ಅಗಾಧವಾದ ಶಕ್ತಿಯಿದೆ. ಆ ಶಕ್ತಿಯನ್ನು ಮನುಷ್ಯನಾದವನು ಅರಿತುಕೊಳ್ಳಲು ಪ್ರಯತ್ನಿಸಬೇಕು.

ನಮ್ಮ ಹಿಂದೆ ಅಗಾಧವಾದ ಪರಂಪರೆ ಇದೆ. ಆ ಪರಂಪರಾಗತವಾಗಿ ನಡೆದು ಬಂದ ಸತ್ಯ, ತ್ಯಾಗ, ಶೀಲಗಳಿವೆ "ಮನುಷ್ಯರಲ್ಲಿ ಸಾವಿರದಲ್ಲಿ ಒಬ್ಬರು ಎದ್ದು ನಡೆಯುತ್ತಾರೆ" (ಭಗವದ್ಗೀತೆ) ಮನುಷ್ಯನ ಈ ಅಗಾಧವಾದ ಯಾತ್ರೆಯಲ್ಲಿ ಕೆಲವೇ ಜನ ಮಾತ್ರ ಉನ್ನತ ಶಿಖರವನ್ನು ಮುಟ್ಟುತ್ತಾರೆ. ತಿಳಿದವರು ಯಾವುದು ಶ್ರೇಯಸ್ಸು ಯಾವುದು ಪ್ರೇಯಸ್ಸು ಎಂದು ಗಮನಿಸುತ್ತಾರೆ. ಮಹಾವ್ಯಕ್ತಿಗಳು ನಿರಂತರವಾದ ಆತ್ಮಚಿಂತನೆಯಿಂದ ಮಹಾವ್ಯಕ್ತಿಗಳಾಗುತ್ತಾರೆ. ಮಹಾವ್ಯಕ್ತಿಗಳು ಮಾಡಿದ ತಪ್ಪನ್ನು ತಿದ್ದಿಕೊಳ್ಳಲು ಪ್ರಯತ್ನಿಸುತ್ತಾರೆ. ತಪ್ಪಿನ ಮೇಲೆ ತಪ್ಪನ್ನು ಹೇರುತ್ತಾ

ಹೋದರೆ ಕೊನೆಗೆ ತಪ್ಪಾಗುವುದೆಂದು ಕಾಣುತ್ತದೆ. "ಲೋಕದ ಡೊಂಕ ನೀವೇಕೆ ತಿದ್ದುವಿರಿ, ನಿಮ್ಮ ತನುವ ತಿದ್ದಿಕೊಳ್ಳಿ" ಎಂದು ಬಸವಣ್ಣನವರು ಹೇಳುತ್ತಾರೆ.

ಕೊಂಬೆಯ ಮೇಲಣ ಮರ್ಕಟನಂತೆ ಮನಸ್ಸು ಕೊಂಬೆಯಿಂದ ಕೊಂಬೆಗೆ ಹಾರಾಡುತ್ತಿರುತ್ತದೆ. ಮನುಷ್ಯ ತನ್ನಲ್ಲಿರುವ ಶಕ್ತಿಯನ್ನು ಮರೆತು ನಾನು ದುರ್ಬಲ, ಶಕ್ತಿಹೀನ ಎಂದು ಭಾವಿಸುತ್ತಾರೆ. ಆದರೆ ನಮ್ಮ ಶಕ್ತಿಯನ್ನು ನಾವು ಅರಿತುಕೊಳ್ಳಬೇಕು. ದೊಡ್ಡ ದೊಡ್ಡ ವ್ಯಕ್ತಿಗಳು ಶ್ರದ್ಧೆ ಬಹು ಶ್ರೇಷ್ಠವಾದುದು. ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿ, ತಮ್ಮ ಗುರಿಯನ್ನು ಸಾಧಿಸುತ್ತಾರೆ. ಬರುತ್ತಿರುವ ಕಷ್ಟ ಕಾರ್ಪಣ್ಯಗಳನ್ನು ಎದುರಿಸುವಂತಹ ಧೈರ್ಯ ಅವರಲ್ಲಿರುತ್ತದೆ. ಬದುಕನ್ನು ಕುರಿತಂಥ ಶ್ರದ್ಧೆ, ಆಸಕ್ತಿ ಮಹಾವ್ಯಕ್ತಿಗಳಲ್ಲಿ ಇದ್ದು ಬದುಕನ್ನು ಗೆಲ್ಲುತ್ತಾರೆ.

ಯಾವನು ತಾನು ಪಡೆದ ಸಿದ್ಧಿಯನ್ನು ಲೋಕಕ್ಕಾಗಿ ಉಪಯೋಗಿಸುವನೋ ಅವನೇ ಮಹಾವ್ಯಕ್ತಿ. ತಾನೊಬ್ಬನೇ ಮೋಕ್ಷಪಡೆಯಲು ಬಯಸುವವನು ಸ್ವಾರ್ಥಿಯೆಂದೇ ಹೇಳಬೇಕಾಗುತ್ತದೆ.

ನಾವು ಇಂತಹ ಶರಣರು ಬಂದರೆ ಹೇಗೆ ಕಾಣುತ್ತೇವೆ? ಕ್ರಿಸ್ತ ಬಂದರೆ ಶಿಲುಬೆಗೆ ಏರಿಸುತ್ತೇವೆ. ಸಾಕ್ರೇಟಿಸ್ ಬಂದರೆ ವಿಷ ಕುಡಿಸುತ್ತೇವೆ, ಗಾಂಧಿ ಬಂದರೆ ಗುಂಡಿಕ್ಕಿ ಹೊಡೆಯುತ್ತೇವೆ. ನಾವು ಮಹಾವ್ಯಕ್ತಿಗಳು ಸತ್ತನಂತರ, ಅವರ ಪೂಜೆ ಮಾಡುತ್ತೇವೆ. ಅವರನ್ನು ಅನಾವರಣ ಮಾಡುತ್ತೇವೆ. ಇದು ಕೇವಲ ತಪ್ಪು. ಮಹಾವ್ಯಕ್ತಿಗಳು ಯಾವಾಗಲೂ ಶ್ರೇದ ವ್ಯಕ್ತಿಗಳು, ಆದರೆ ನಾವು ಅನೇಕ ಲೋಭ, ಕಾಮ, ಅಸೂಯೆಗಳಿಂದ ಮುಚ್ಚಲ್ಪಟ್ಟಿದ್ದೇವೆ.

ಹೀಗೆ ನಾವು ಮಹಾವ್ಯಕ್ತಿಗಳ ಜೀವನದಲ್ಲಿ ಕಾಣುವುದು ಅಗಾಧವಾದ ಶಕ್ತಿ ಹಾಗೂ ಜೀವನದ ಉದಾತ್ತವಾದ ಧ್ಯೇಯ ಹಾಗೂ, ಆ ಧ್ಯೇಯ ಸಾಧನೆಗಾಗಿ ಗುರಿಗಾಗಿ ಶ್ರಮಿಸುವ ದೊಡ್ಡ ಗುಣಗಳು ತುಂಬಿರುತ್ತವೆ.

ನಮ್ಮ ಮನಸ್ಸಿನ ಮರುಭೂಮಿಗಳನ್ನು ಫಲವತ್ತನ್ನಾಗಿ ಮಾಡಬೇಕಾದರೆ ಎಷ್ಟೋ ಅಣೆಕಟ್ಟುಗಳನ್ನು ಕಟ್ಟಿದರೂ ಸಾಧ್ಯವಿಲ್ಲವೆಂದು ಕಾಣುತ್ತದೆ. ನಮ್ಮ ಮನಸ್ಸಿನ ಮರುಭೂಮಿಗೆ ಮಹಾವ್ಯಕ್ತಿಗಳ ಜೀವನದ ಆದರ್ಶದ ಗಂಗಾಪ್ರವಾಹ ಹರಿಯಿಸಬೇಕಾಗಿದೆ. ಅದಕ್ಕಾಗಿ ಶ್ರಮಿಸುವುದು ಅವಶ್ಯ. ಎಂಬುದಾಗಿ ಇವರ ಭಾಷಣದಲ್ಲಿ ತಿಳಿಸಿದರು.

ತಾರೀಖು 5-12-59 ಶನಿವಾರ ಆರನೆಯದಿನ. ಲೋಕೋಪಯೋಗಿ ಸಚಿವರಾದ ಶ್ರೀ ಎಚ್. ಎಂ. ಚನ್ನಬಸಪ್ಪನವರ ಅಧ್ಯಕ್ಷತೆಯಲ್ಲಿ ನೆರವೇರಿತು.

ಮೈಸೂರು ಪುರಸಭಾಧ್ಯಕ್ಷರಾದ ಶ್ರೀ ಬಿ. ಎಲ್. ಕೆಂಗೇಗೌಡರವರು ಭಾಷಣ
ಮಾಡಿದರು.

ಶ್ರೀಯುತ ಬಿ. ಎಲ್. ಕೆಂಗೇಗೌಡರು ಭಾಷಣಮಾಡುತ್ತ ಸಮಾಜ ಉದ್ಧಾ
ಕ್ಕಾಗಿ ವಿದ್ಯಾರ್ಥಿಗಳು ಪ್ರಯತ್ನಿಸಬೇಕು. ಈ ಸುತ್ತೂರು ಸಂಸ್ಥೆ ಹಿಂದಿನಿಂದಲ
ಇಂದಿನವರೆಗೂ ಲೋಕಕಲ್ಯಾಣಕ್ಕಾಗಿ ದುಡಿಯುತ್ತಾ ಬಂದಿದೆ. ಈ ರೀತಿಯಾ
ಸೇವೆಯನ್ನು ಸಲ್ಲಿಸತಕ್ಕ ಮಠಗಳಿಗೆ ಸಹಕಾರ ಸಹಾಯವನ್ನು ನೀಡುವುದು ಅವ
ವಿರುತ್ತದೆ. ಶ್ರೀ ಶಿವರಾತ್ರೀಶ್ವರಮಹಾಸ್ವಾಮಿಗಳು, ಅನ್ನದಾನದ ಮೂಲಕ ಜ್ಞಾ
ದಾನವನ್ನು ನೀಡುತ್ತಿದ್ದಾರೆ. ಈ ರೀತಿಯ ಮಹಾಗುರುಗಳು ಇರುವುದರಿಂದಲೆ
ನಮ್ಮ ಧರ್ಮ ಉಳಿದಿದೆ. ಈ ಸಂಸ್ಥೆ ಆಚಂದ್ರಾರ್ಕವಾಗಿ ಬೆಳೆಯಲಿ ಹಾಗೂ ಇದ
ಕ್ಕಿಂತಲೂ ಹೆಚ್ಚಿನ ಸೇವೆ ಸಲ್ಲಿಸಲೆಂದು ಹಾರೈಸುತ್ತೇನೆ ಎನ್ನುತ್ತ ತಮ್ಮ ಭಾಷಣ
ವನ್ನು ಮುಗಿಸಿದರು.

ನಂತರ ಅಧ್ಯಕ್ಷರಾದ ಶ್ರೀ ಎಚ್. ಎಂ. ಚನ್ನಬಸಪ್ಪನವರು ಅಧ್ಯಕ್ಷ ಭಾಷ
ಮಾಡುತ್ತ ನಮ್ಮ ದೇಶದಲ್ಲಿ ಈ ಹೊತ್ತು ಪರಿಹರಿಸತಕ್ಕಂತಹ ಸಮಸ್ಯೆಗಳೇನು
ನಮ್ಮ ದೇಶದ ಸಂಪತ್ತನ್ನು ವ್ಯವಸ್ಥಿತವಾಗಿ ಉಪಯೋಗಿಸಿಕೊಳ್ಳುವ ಸತ್ಪ್ರಜೆಗಳ
ಇದ್ದರೆ ಆ ಸಂಪತ್ತಿನ ಉಪಯೋಗವಾಗುತ್ತದೆ. ದೈವದತ್ತವಾದ ಶಕ್ತಿಯನ್ನ
ರಚನಾತ್ಮಕವಾದ ಕಾರ್ಯವನ್ನು ಕೈಗೊಳ್ಳುವುದರಲ್ಲಿ ಉಪಯೋಗಿಸಿದರೆ ಸತ್ಪ್ರಜೆ
ಯಾಗಲು ಸಾಧ್ಯ. ಅದಕ್ಕೆ ಜನತೆಯಲ್ಲಿ ವಿದ್ಯೆ, ವಿಚಾರಪರತೆ, ವಿವೇಚನಾಶಕ್ತಿ
ಸಂಸ್ಕಾರ ಸಂಸ್ಕೃತಿಗಳು ಬೆಳೆಯಬೇಕು. ಈ ಕಾರ್ಯದಲ್ಲಿ ಸರಕಾರ ಹಾಗೂ ಸಾರ್ವ
ಜನಿಕರೂ ಕೂಡಿಯೇ ಭುಜಕ್ಕೆ ಭುಜಕೊಟ್ಟು ಮಾಡಬೇಕಾದುದು ಅವಶ್ಯ. ಈ
ಒಂದು ಮಹಾತ್ಕಾರ್ಯದಲ್ಲಿ ಶ್ರೀ ಶಿವರಾತ್ರೀಶ್ವರಸ್ವಾಮಿಗಳವರು ಮಾಡುತ್ತಿರುವುದು
ಅಭಿನಂದನೀಯವಾದ ಕಾರ್ಯ. ಅವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು
ಸಲ್ಲಿಸುತ್ತೇನೆ ಎಂದು ಹೇಳಿ ತಮ್ಮ ಆನಂದವನ್ನು ವ್ಯಕ್ತಪಡಿಸಿ ಸಮಾರಂಭಕ್ಕೆ ಶುಭ
ಕೋರಿದರು.

ದಿನಾಂಕ 6-12-59 ನೇ ಭಾನುವಾರ ಜಯಂತೀಮಹೋತ್ಸವದ ಏಳನೆಯ
ಕೊನೆಯ ದಿನ.

ಅಂದು ಪ್ರಾತಃಕಾಲ 9 ಘಂಟೆಗೆ ಜಗದ್ಗುರು ಶ್ರೀ ಶಿವರಾತ್ರೀಶ್ವರ ಕೃಪಾ
ಪೋಷಿತ ಹಿರಿಯ ವಿದ್ಯಾರ್ಥಿ ಸಂಘದ ಆರಂಭೋತ್ಸವ ನೆರವೇರಿತು.

ಆರಂಭೋತ್ಸವವನ್ನು ವಿಧಾನಸಭಾ ಸದಸ್ಯರಾದ ಶ್ರೀ ಜೆ.ಬಿ. ಮಲ್ಲಾರಾಧ್ಯರು
ನೆರವೇರಿಸಿದರು. ಕರ್ನಾಟಕದ ಪ್ರಜಾಸಮಾಜವಾದೀ ಪಕ್ಷದ ಅಧ್ಯಕ್ಷರಾದ ಶ್ರೀ

ಎಂ. ಎಸ್. ಗುರುಪಾದಸ್ವಾಮಿಯವರು ಅಂದಿನ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

## ಮುಕ್ತಾಯ ಸಮಾರಂಭ

ಇದೇ ದಿನ ಸಂಜೆ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರ ಸಹಸ್ರ ವರ್ಷದ ಜಯಂತಿ ಮಹೋತ್ಸವದ ಮುಕ್ತಾಯ ಸಮಾರಂಭವು ಸಂಸ್ಥಾನದ ಅರ್ಥಸಚಿವರಾದ ಶ್ರೀಮಾನ್ ಟಿ. ಮರಿಯಪ್ಪ, ಬಿ. ಎ., ಎಲ್. ಎಲ್. ಬಿ. ಇವರ ಅಧ್ಯಕ್ಷತೆಯಲ್ಲಿ ಅತ್ಯಂತ ವಿಜೃಂಭಣೆಯಿಂದ ನೆರವೇರಿತು. ಸಂಸ್ಥಾನದ ವಿದ್ಯಾ ಇಲಾಖಾ ಡೈರೆಕ್ಟರವರಾದ ಶ್ರೀಮಾನ್ ಎ. ಸಿ. ದೇವೇಗೌಡ, ಎಂ.ಎ., ಬಿ.ಟಿ.ಎಂ., ಇ.ಡಿ. (ಲೀಡ್ಸ್) ಡಿಪ್-ಇನ್-ಎಡ್ ಅವರು ಮುಕ್ತಾಯ ಭಾಷಣಮಾಡುತ್ತ ಒಂದು ಸಂಸ್ಥೆಯಲ್ಲಿ ಆಶ್ರಯ ಪಡೆದ ವಿದ್ಯಾರ್ಥಿವೃಂದದವರು, ಸಂಸ್ಥೆಯ ಮೂಲ ಪುರುಷರ ಪುಣ್ಯಸ್ಮರಣೆಮಾಡುವುದು ನಮ್ಮ ನಾಡಿನ ಭವಿಷ್ಯದ ಹೆಗ್ಗುರುತಾಗಿದೆ ಎಂದರು. ಶ್ರೀ ಸುತ್ತೂರು ವೀರಸಿಂಹಾಸನ ಮಠವು ಅತ್ಯಂತ ಪ್ರಾಚೀನವೂ ಐತಿಹಾಸಿಕವೂ ಆಗಿದೆ ಎಂಬುದು ನಮ್ಮೆಲ್ಲರಿಗೂ ಗೊತ್ತಿರುವ ವಿಷಯ. ಶ್ರೀ ಮಠವನ್ನು ನಾನು ಅನೇಕ ಸಾರಿ ನೋಡಿದ್ದೇನೆ. ಶ್ರೀಮಠದಲ್ಲಿ ಸದಾ ಮಂತ್ರ ತಪೋನಿರತರಾದ ಹಿರಿಯ ಜಗದ್ಗುರುಗಳವರ ದರ್ಶನಾಶೀರ್ವಾದಗಳನ್ನು ನಾನು ಅನೇಕ ಬಾರಿ ಪಡೆದಿದ್ದೇನೆ. ಅಂತಹ ಮಹಾನುಭಾವರ ಆಶೀರ್ವಾದದಲ್ಲಿ ಬೆಳೆಯುತ್ತಿರುವ ವಿದ್ಯಾರ್ಥಿಗಳು ಧನ್ಯರು. ಮಹಾನುಭಾವರ ಆಶೀರ್ವಾದದಿಂದ ನೀವು ನಮ್ಮ ನಾಡಿನ ಗಣ್ಯವ್ಯಕ್ತಿಗಳಾಗಬೇಕೆಂದು ಹಾರೈಸಿದರು.

ಅಧ್ಯಕ್ಷತೆ ವಹಿಸಿದ್ದ ಅರ್ಥಸಚಿವರು ಶ್ರೀ ಸುತ್ತೂರು ವೀರಸಿಂಹಾಸನಮಠವು ನಾಡಿಗೆ ಸಲ್ಲಿಸುತ್ತಿರುವ ಸೇವೆ ಸ್ತುತ್ಯವಾದುದು. ಇಲ್ಲಿ ಜಾತಿ ಮತ ಭೇದವಿಡದೆ (2000) ಎರಡು ಸಾವಿರ ಮಂದಿ ವಿದ್ಯಾರ್ಥಿಗಳಿಗೆ ಅನ್ನದಾನಮಾಡುತ್ತಿರುವುದು ಅತ್ಯಂತ ಪ್ರಶಂಸನೀಯವಾಗಿದೆ. ಈ ಸಂಸ್ಥೆಯ ಕಾರ್ಯನಿರ್ವಾಹಕರಾದ ಪೂಜ್ಯ ಜಗದ್ಗುರುಗಳಿಬ್ಬರೂ ನಮ್ಮ ದೇಶದ ಸಮಸ್ತ ಜನತೆಯ ಅಭಿನಂದನೆಗೆ ಪಾತ್ರರಾಗಿದ್ದಾರೆ. ಅಂತಹ ಮಹಾನುಭಾವರ ಆಶೀರ್ವಾದದಲ್ಲಿ ಬೆಳೆಯುತ್ತಿರುವ ನಮ್ಮ ಯುವಕರು ದೇಶದ ಸತ್ಪ್ರಜೆಗಳಾಗಲೆಂದು ಹಾರೈಸಿದರು.

ಸಂಗೀತ, ನಾಟಕ ಇತ್ಯಾದಿ ಸಾಂಸ್ಕೃತಿಕ ಕಾರ್ಯಕ್ರಮಗಳೊಡನೆ ಜಗದ್ಗುರುಗಳ ಸಹಸ್ರ ವರ್ಷದ ಜಯಂತಿ ಮಹೋತ್ಸವವು ಮುಕ್ತಾಯಗೊಂಡಿತು.

---

# ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸ

## 1961

### ೧ ಭೂಮಿಕೆ

ವೀರಸಿಂಹಾಸನಾಸೀನಃ ಶಿವರಾತ್ರೀಶ್ವರೋ ವಿಭುಃ ।
ದದ್ಯಾತ್ ವಿಶ್ವಸ್ಯ ಜಗತಃ ಶಾಂತಿ ಭಿಕ್ಷಾಂ ಕೃಪಾನಿಧಿಃ ॥
ಪ್ರದಕ್ಷಿಣಮಠಾಧೀಶಂ ವೀರಸಿಂಹಾಸನಾಧಿಪಂ ।
ವೀರಶೈವಾಬ್ಧಿ ಚಂದ್ರಂತಂ ಶಿವರಾತ್ರೀಶ್ವರಂ ಭಜೇ ॥

ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನಲ್ಲಿ ಕಪಿಲಾ ನದಿ ತೀರದ ಸುತ್ತೂರು ವೀರಸಿಂಹಾಸನ ಮಠವಿರುವುದು ಕನ್ನಡಿಗರಿಗೆ ತಿಳಿಯದ ವಿಷಯವಲ್ಲ ಹತ್ತು ಶತಮಾನಗಳ ಹಿಂದೆ ರಾಜಾನುಗ್ರಹಾರ್ಥವಾಗಿ ಇಮ್ಮಡಿಯ ರಾಜೇಂದ ಚೋಳನ ಕೋರಿಕೆಯ ಮೇಲೆ ಸಿದ್ಧಗಿರಿಯಿಂದ ಆಗಮಿಸಿ ಇಲ್ಲಿ ನೆಲೆಸಿ ನಾಡನ ಹರಸಿದ ಮಹಾಮಹಿಮರಾದ ಜಗದ್ಗುರು ಶ್ರೀ ಶಿವರಾತ್ರೀಶ್ವರರ ತಪೋಭೂಮಿಯಾ ಸುತ್ತೂರು ಮಠವು ಇತಿಹಾಸ ಪ್ರಸಿದ್ಧವಾಗಿದೆ. ಮಹಾಪುರುಷರ ತಪಃ ಪ್ರಭಾ ದಿಂದ ಅವರು ನಡೆದ ದಾರಿ ಪಾವನವೂ, ನುಡಿದ ವಾಣಿ ದಿವ್ಯ ಸಂದೇಶವೂ, ನೋ ಶಿವನಾಟವೂ ಆಗುತ್ತದೆ. ನೆಲೆಸಿದ ಕ್ಷೇತ್ರ ಪುಣ್ಯಕ್ಷೇತ್ರವಾಗಿ ಅಲ್ಲಿ ಮಹತ್ಕಾರ್ಯಗಳ ಚಿರಂತನ ನಡೆಯುತ್ತಿರುತ್ತವೆ. ಅಂತೆಯೇ ಯೋಗೀಂದ್ರರಾದ ಶ್ರೀ ಶಿವರಾತಿ ಮಹಾನುಭಾವರ ತಪಃ ಫಲ ಸಹಸ್ರ ವರ್ಷಗಳಾದರೂ ಮಹಿಮಾಶಕ್ತಿ ದಿನದಿನಕ್ಕೆ ದಿಗಂತ ವಿಶ್ರಾಂತವಾಗುವಂತೆ ಕೀರ್ತಿಪಡೆಯುತ್ತಲೇ ಇರುತ್ತದೆ.

ಇಂತಹ ಲೋಕೋದ್ಧಾರಿಗಳನ್ನು ಸ್ಮರಿಸಿ ಧನ್ಯರಾಗುವುದು ಮಾನವತೆಯ ಆದ್ಯ ಕರ್ತವ್ಯ. ಅಂತೆಯೇ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಯೋಗೀಂದ್ರ ಮಹಿಮೆಯ ಪ್ರಭಾವದಿಂದ ಪುನೀತರಾಗುತ್ತಿರುವ ಎರಡು ಸಹಸ್ರ ಮಂದಿ ವಿದ್ಯಾರ್ಥಿ ಗಳು ಪ್ರತಿವರ್ಷವೂ ಮೈಸೂರಿನಲ್ಲಿ ಜಗದ್ಗುರುಗಳ ಜಯಂತಿ ಮಹೋತ್ಸವವನ್ನು ಅತ್ಯಂತ ವಿಜೃಂಭಣೆಯಿಂದ ನೆರವೇರಿಸುತ್ತಾ ಜನತೆಗೆ ಸಾಹಿತ್ಯ, ಸಂಸ್ಕೃತಿ, ಕಲ ವೈಭವ ವಿಕಾಸದ ರಸದೌತಣವನ್ನೆಸಗುತ್ತಿದ್ದಾರೆ. ಕಳೆದ ವರ್ಷ ವೈಭವಯುತವಾ ಜಯಂತಿ ಮಹೋತ್ಸವವನ್ನು ನೆರವೇರಿಸಿ ಜಗದ್ಗುರುಗಳ ಸಹಸ್ರವರ್ಷದ ತಪೋ ವೈಭವದ ಕೀರ್ತಿಜೆಳಗನ್ನೆ ಬೆಳಗಿದರು. ಅದರಂತೆ ಈ ವರ್ಷವೂ ಸಹ ವಿಜೃಂಭಣ ಯಿಂದ ಜಯಂತೀಮಹೋತ್ಸವದ ಕಾರ್ಯಕ್ರಮಗಳು ನಡೆಯುತ್ತವೆ.



ಜಗದ್ಗುರುಗಳು ರಾಜ್ಯಪಾಲರನ್ನು ಆಶೀರ್ವದಿಸಿ ಬೀಳ್ಕೊಡುತ್ತಿರುವುದು



ಜಯಂತೀಮಹೋತ್ಸವದಲ್ಲಿ ತರಳಬಾಳು ಜಗದ್ಗುರುಗಳಾದ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು.

ಕನ್ನಡನಾಡಿನ ಉತ್ತಮ ಸಾಹಿತಿಗಳು ದಾರ್ಶನಿಕರು ಕಲಾವಿದರು ತಮ್ಮಲ್ಲಿರುವ ದೈವೀಸಂಪತ್ತನ್ನು ಅಭಿವ್ಯಕ್ತಪಡಿಸಿ ಜನರನ್ನು ಸಂತೋಷಗೊಳಿಸುವ ಕನ್ನಡಿಗರ ಹಬ್ಬದಂತೆ ಈ ಮಹೋತ್ಸವವು ನೆರವೇರುವುದಾಗಿದೆ. ಎರಡು ಸಹಸ್ರ ಜನ ಕನ್ನಡದ ಯುವಕರು ಈ ಸಂಸ್ಥೆಯ ಆಶ್ರಯದಲ್ಲಿ ಜಾತಿ ಮತ ಭೇದಗಳನ್ನು ಮರೆತು ಮಾನವತೆಯು ಒಂದೆಂಬುದನ್ನರಿತು ಸಕಲ ವಿದ್ಯೆಗಳ ಸಂಪತ್ ಶಕ್ತಿಯನ್ನು ಪಡೆಯುತ್ತಿದ್ದಾರೆ. ಉಚಿತ ಅಶನ ವಸತಿಗಳ ಸೌಲಭ್ಯವನ್ನು ಪಡೆದು ತಮ್ಮ ಜೀವನದ ಪ್ರಗತಿಯಲ್ಲಿ ಮುನ್ನಡೆಯುತ್ತಿದ್ದಾರೆ ಕಲಿತ ವಿದ್ಯೆಯನ್ನು ನಾಡಿನ ಮುನ್ನಡೆಗೆ ಮೀಸಲು ಮಾಡಿ ಧನ್ಯರಾಗುತ್ತಾರೆ. ಅಂತಹ ವೀರ ಯುವಕರ ಅಭ್ಯುದಯದ ಪ್ರೇರಕ ಶಕ್ತಿಯೆನಿಸಿದ ಜಗದ್ಗುರು ಶ್ರೀ ಶಿವರಾತ್ರೀಶ್ವರರ ಕೀರ್ತಿಕಿರಣಗಳನ್ನು ನಾನಾ ಮುಖವಾಗಿ ಪಸರಿಸುವಂತೆ ಮಾಡುವ ಉದ್ದೇಶದಿಂದ ಈ ಜಯಂತಿಮಹೋತ್ಸವವನ್ನು ಮೈಸೂರು ನಗರದಲ್ಲಿ ಸಹಸ್ರಾರು ರೂಪಾಯಿಗಳ ವೆಚ್ಚದಿಂದ ನೆರವೇರಿಸಲಾಗುತ್ತಿದೆ. ಇಲ್ಲಿ ನಡೆಯುವ ಕಾರ್ಯಕ್ರಮಗಳು ಜ್ಞಾನ ವಿಕಾಸಕ್ಕೆ ಕಾರಣವಾಗುವಂತಹ ಬೋಧನೆಗಳಿಂದಲೂ ಮಾನಸಿಕ ವಿಲಾಸಕ್ಕೂ ಆತ್ಮವಿಕಾಸಕ್ಕೂ ಸಾಧನವಾಗುವಂತಹ ಸಾಂಸ್ಕೃತಿಕ ಕಾರ್ಯಕ್ರಮಗಳಿಂದಲೂ ಕೂಡಿ ಮಹತ್ವಪೂರ್ಣವಾಗಿ ಜಯಂತಿ ಮಹೋತ್ಸವವು ನಡೆಯುತ್ತದೆ. ಈ ಸಮಾರಂಭದಲ್ಲಿ ಪೀಠದ ಆಶ್ರಯದಲ್ಲಿ ಬೆಳೆಯುತ್ತಿರುವ ವಿದ್ಯಾರ್ಥಿ ವೃಂದದವರು ಅತ್ಯಾನಂದದಿಂದ ಭಾಗವಹಿಸಿ ನಾಡಿನ ಜನತೆಗೆ ಆದರ್ಶಪ್ರಾಯರಾಗುತ್ತಿದ್ದಾರೆ. ವರ್ಷವರ್ಷವೂ ವೈಭವದಿಂದ ನಡೆಯುತ್ತಿರುವ ಈ ಸಮಾರಂಭವು ಶಾಶ್ವತವಾಗಿ ನಡೆಯಲು ಸಂಸ್ಥೆಯು ಸತತವೂ ಶ್ರಮಿಸುತ್ತಿದೆ. ಈ ಮಹದಾಸೆಯು ಶೀಘ್ರವೇ ಕೈಗೂಡುವುದೆಂದು ಆಶಿಸುವ,

**ಜಯಂತಿ ಮಹೋತ್ಸವ ಸಮಿತಿ**
ಮೈಸೂರು

———

26

# ಜಯಂತೀ ಮಹೋತ್ಸವ ಸಪ್ತಾಹ ಸಮಾರಂಭ

## 1961

---

ಈ ವರ್ಷದ ಜಯಂತೀ ಮಹೋತ್ಸವ ಸಪ್ತಾಹ ಸಮಾರಂಭವು ಜಗದ್ಗುರು ಶ್ರೀ ಶಿವರಾತ್ರೀಶ್ವರ ವಿದ್ಯಾಪೀಠದ ಭವ್ಯವಾದ ಅನುಭವ ಮಂಟಪದಲ್ಲಿ ತಾರೀಖು 18–12–60 ನೇ ಭಾನುವಾರ ಪ್ರಾರಂಭವಾದುವು. ಸಮಾರಂಭದ ಯಶಸ್ಸಿನ ಸಲುವಾಗಿ ವಿಜಯ ಸಂಕೇತವೆನಿಸಿದ ಷಟ್‌ಸ್ಥಲ ಹಾಗೂ ರಾಷ್ಟ್ರಧ್ವಜಾರೋಹಣ ಕಾರ್ಯಕ್ರಮಗಳು ಪ್ರಾತಃಕಾಲದಲ್ಲೇ ಬೆಟ್ಟದಪುರದ ಮಠಾಧ್ಯಕ್ಷರಾದ ಶ್ರೀ ನಿ|| ಪ್ರ|| ಸ್ವ|| ಶ್ರೀ ಚನ್ನವೀರದೇಶೀಕೇಂದ್ರಸ್ವಾಮಿಗಳವರ ನೇತೃತ್ವದಲ್ಲಿ ನಡೆದುವು.

ಧ್ವಜಾರೋಹಣವನ್ನು ನೆರವೇರಿಸಿದ ಶ್ರೀಗಳವರು ಜಗದ್ಗುರು ಶ್ರೀ ಶಿವರಾತ್ರೀಶ್ವರರು ಮಹಿಮಾ ಪುರುಷರು, ಮಹಿಮರ ಸ್ಮರಣೆಮಾಡುವುದು ನಮ್ಮ ಜನತೆಯ ಉತ್ತಮ ಸಂಸ್ಕೃತಿಯ ಸಂಕೇತವೆನಿಸಿದೆ. ಮಹಾನುಭಾವರ ದಿವ್ಯ ಪೀಠಾಧಿಪತಿಗಳಾದ ಉಭಯಜಗದ್ಗುರುಗಳು ನಡೆಸುತ್ತಿರುವ ವಿದ್ಯಾಸೇವೆ ಆದರ್ಶಪ್ರಾಯವೆನಿಸಿದೆ. ಮಠಗಳು ಮತ್ತು ಮಠಾಧಿಪತಿಗಳ ಕರ್ತವ್ಯವನ್ನು ಎಚ್ಚರಿಸುವಂತಿವೆ. ಶ್ರೀಗಳವರ ಉದಾರಾಶ್ರಯದಲ್ಲಿ ಬೆಳೆಯುತ್ತಿರುವ ವಿದ್ಯಾರ್ಥಿಗಳು ಧನ್ಯರು. ಅವರಲ್ಲಿ ಗುರುಭಕ್ತಿ ದೈವಭಕ್ತಿಗಳು ಬೆಳೆಯುವಂತೆ ಈ ಜಯಂತೀ ಮಹೋತ್ಸವವು ನೆರವೇರುತ್ತಿರುವುದು ಪ್ರಶಂಸನೀಯ. ಈ ಸಮಾರಂಭವು ರಾಷ್ಟ್ರದ ಧರ್ಮ ಪುನರುಜ್ಜೀವನಕ್ಕೆ ಉತ್ತಮ ಸಾಧನವಾಗಿದೆ. ಮಹತ್ವಪೂರ್ಣವಾದ ಕಾರ್ಯಕ್ರಮಗಳು ಇಲ್ಲಿ ನಡೆಯುವುದು ಆನಂದವೆನಿಸಿದೆ. ನಾವು ಸ್ವತಂತ್ರ ರಾಷ್ಟ್ರದವರಾಗಿದ್ದೇವೆ. ಸ್ವತಂತ್ರ ರಾಷ್ಟ್ರ ಸತ್ಯದ ರಾಷ್ಟ್ರವೂ ಆಗಬೇಕು. ಅದಕ್ಕಾಗಿ ಇಂದಿನ ಯುವಕರಲ್ಲಿ ಧರ್ಮ ಶ್ರದ್ಧೆ ಭಕ್ತಿಗಳು ಬೆಳೆಯಬೇಕು. ಅದರ ಸಲುವಾಗಿ ಜಗದ್ಗುರುಗಳವರು ಸತತವೂ ಶ್ರಮಿಸುತ್ತಿದ್ದಾರೆ. ಅವರ ಶ್ರಮ ಸಾರ್ಥಕವಾಗುವಂತೆ ನಮ್ಮ ವಿದ್ಯಾರ್ಥಿಗಳು ಮೇಧಾವಿಗಳೂ ನೀತಿವಂತರೂ ಆಗಬೇಕು ಎಂದರು. ಷಟ್‌ಸ್ಥಲ ಧ್ವಜದ ವಿಜಯ ಸಂಕೇತ ಅತ್ಯಂತ ಹಿರಿದಾದ ತತ್ವಗಳಿಂದ ಕೂಡಿದೆ. ಮಾನವನ ಮೋಕ್ಷ ಸಾಧನೆಯ ಸಂಕೇತವಾಗಿರುವ ಈ ಧ್ವಜದಡಿಯಲ್ಲಿ ನಾವು ಧರ್ಮಿಷ್ಠರೂ ಜ್ಞಾನಿಗಳೂ ಆಗಿ ಜೀವನ ನಡೆಸುವ ಪ್ರತಿಜ್ಞೆಯನ್ನು ಸ್ವೀಕರಿಸಬೇಕು, ಎಂದು ತಿಳಿಸುತ್ತಾ ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸವದ ಸಾಂಸ್ಕೃತಿಕ ಕಾರ್ಯಗಳು ಯಶಸ್ವಿಯಾಗಿ ನೆರವೇರಿಸಲೆಂದು ಹಾರೈಸಿದರು.

## ಸಮಾರಂಭದ ಪ್ರಾರಂಭೋತ್ಸವ

ಜಯಂತಿ ಮಹೋತ್ಸವ ಸಪ್ತಾಹ ಸಮಾರಂಭವು ಶ್ರೀಮದುಜ್ಜಯನಿ ಸದ್ಧರ್ಮ ಸಿಂಹಾಸನಾಧೀಶ ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯ ಮಹಾ ಸ್ವಾಮಿಗಳವರ ಘನ ಅಧ್ಯಕ್ಷತೆಯಲ್ಲಿ ಸಂಜೆ ವಿದ್ಯಾಪೀಠದಲ್ಲಿ ಪ್ರಾರಂಭವಾಯಿತು. ಸುಂದರ ಸುಸಜ್ಜಿತ ಅನುಭವ ಮಂಟಪದಲ್ಲಿ ಅಪಾರ ಜನಸಂದಣಿಯಿಂದ ಕೂಡಿದ ಸಭೆಯಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳು ಆರಂಭಗೊಂಡವು. ಸಂಸ್ಥಾನದ ಮುಖ್ಯಮಂತ್ರಿಗಳಾದ ಶ್ರೀ ಬಸಪ್ಪ ದಾನಪ್ಪ ಜತ್ತಿ ಇವರು ಪ್ರಾರಂಭೋತ್ಸವವನ್ನು ನೆರವೇರಿಸಲು ದಯೆಯಿಟ್ಟು ಆಗಮಿಸಿದರು. ಪ್ರಾರ್ಥನೆ ಸಂಗೀತಗಳಾದ ನಂತರ ಉತ್ಸವ ಸಮಿತಿ ಪರವಾಗಿ ಶ್ರೀ ಹೆಚ್. ಗಂಗಾಧರ್‌ರವರು ಸ್ವಾಗತ ಭಾಷಣ ಮಾಡಿದರು.

ಹತ್ತು ಶತಮಾನದ ಹಿಂದೆ ಸಿದ್ಧಿಕ್ಷೇತ್ರದಿಂದ ಬಂದು ಭಕ್ತರ ಆತ್ಮಶುದ್ಧಿಗೆಂದು ಕಪಿಲಾ ನದಿಯ ತೀರದಲ್ಲಿ ನೆಲಸಿದ ಪುಣ್ಯಪುರುಷರಾದ ಜಗದ್ಗುರು ಶ್ರೀ ಶಿವರಾತ್ರೀಶ್ವರರ ಜಯಂತಿ ಮಹೋತ್ಸವವನ್ನು ಜಾತಿ ಮತ ಭೇದವರಿಯದೆ ಶ್ರೀ ಗುರುಕರುಣಾಮೃತ ಪಾನ ಮಾಡುತ್ತಾ ತಮ್ಮ ಜೀವನದ ಭವ್ಯತೆಯನ್ನು ಕಾಪಾಡಿಕೊಳ್ಳುತ್ತಿರುವ ಎರಡು ಸಹಸ್ರ ಮಂದಿ ವಿದ್ಯಾರ್ಥಿಗಳು ನೆರವೇರಿಸುತ್ತಿರುವ ಈ ಸಮಾರಂಭಕ್ಕೆ ಅತಿಥಿಗಳನ್ನು ಸ್ವಾಗತಿಸುತ್ತಾ ಸುತ್ತೂರು ಮಠದ ದಿವ್ಯ ಇತಿಹಾಸ ಪರಂಪರೆಯನ್ನು ಶ್ರೀ ಮಠದ ಅಧಿಪತಿಗಳು ನಡೆಸಿರುವ ಸಾಹಿತ್ಯ ಸಂಸ್ಕೃತಿಗಳ ಸೇವೆಯನ್ನು ಸ್ವಾಗತದಲ್ಲಿ ವೈಶಿಷ್ಟ್ಯಪೂರ್ಣವಾಗಿ ತಿಳಿಸಿದರು. ಇಂದಿನ ಸಮಾರಂಭದ ಅಧ್ಯಕ್ಷತೆಗೆ ತರಳಬಾಳು ಜಗದ್ಗುರುಗಳವರು ಕೃಪೆಯಿಟ್ಟು ದಯಮಾಡಿಸಿರುವುದು ಅತಿ ಮಹತ್ವದ ವಿಷಯ. ಹತ್ತಾರು ಧರ್ಮೋದ್ಧಾರಕ ಸಂಸ್ಥೆಗಳನ್ನು ಕಟ್ಟಿ ಸಹಸ್ರಾರು ಜನರಲ್ಲಿ ಧರ್ಮ ಹಾಗೂ ರಾಷ್ಟ್ರಪ್ರೇಮದ ಪ್ರಚೋದನೆಗೊಳಿಸಿದ ಪೂಜ್ಯ ಜಗದ್ಗುರುಗಳವರ ಅಧ್ಯಕ್ಷತೆಯಲ್ಲಿ ಸಮಾರಂಭವು ನೆರವೇರುವಂತಾದುದು ಪುಣ್ಯವಿಶೇಷ. ಯಾರು ಶರಣ ತತ್ವದ ಜೀವಂತ ರಹಸ್ಯವನ್ನು ಅಭಿವ್ಯಕ್ತಗೊಳಿಸಿ ಶರಣ ತತ್ವವು ಭಕ್ತರ ಅನುಭವದಲ್ಲಿ ಬರುವಂತಹ ಉತ್ತಮ ಯೋಜನೆಗಳನ್ನು ನಾಡಿನ ಮುಂದಿಡುತ್ತಿರುವರೋ ಸ್ವತಃ ಸಾಹಿತಿಗಳಾಗಿ ಸಾಹಿತ್ಯದ ಪೋಷಣೆಗೆ ನೆರವಾಗುತ್ತಿರುವರೋ ಅಂತಹ ಜಗದ್ಗುರುಗಳವರನ್ನು ಸಾಷ್ಟಾಂಗ ಪ್ರಣಾಮಗಳೊಡನೆ ಸ್ವಾಗತಿಸಿದರು. ಮುಖ್ಯಮಂತ್ರಿಗಳಾದ ಶ್ರೀ ಜತ್ತಿಯವರ ಸರಳಜೀವನ, ಕಾರ್ಯದಕ್ಷತೆ, ಧರ್ಮಾಭಿಮಾನಗಳ ಚಿತ್ರವನ್ನು ಸ್ವಾಗತದಲ್ಲಿ ಸಭೆಯ ಮುಂದಿಡುತ್ತಾ ಅತಿಥಿ ಅಭ್ಯಾಗತರಿಗೆ ಹೃತ್ಪೂರ್ವಕ ಸ್ವಾಗತ ನೀಡಲಾಯಿತು. ಜಗದ್ಗುರು ಶ್ರೀ ಶಿವರಾತ್ರಿಸ್ವಾಮಿಗಳವರು ಸಮಾರಂಭಕ್ಕೆ ಬಿಜಯಗೈದು ಭವ್ಯತೆಯನ್ನುಂಟುಮಾಡಿದರು.

## ಪ್ರಾರಂಭೋತ್ಸವ ಸಂದೇಶ

ಮುಖ್ಯಮಂತ್ರಿ ಶ್ರೀ ಬಸಪ್ಪದಾನಪ್ಪ ಜತ್ತಿಯವರು ಪ್ರಾರಂಭೋತ್ಸವವನ್ನು ನೆರವೇರಿಸುತ್ತಾ ತಮಗಿರುವ ಅಪಾರ ಕಾರ್ಯಕ್ರಮಗಳಲ್ಲಿ ಇಂತಹ ಸತ್ಸಂಗ ಸಮಾರಂಭಗಳಲ್ಲಿ ಭಾಗವಹಿಸುವಂತಾದುದು ಪುಣ್ಯ ವಿಶೇಷವೆಂದೂ ತರಳಬಾಳು ಜಗದ್ಗುರುಗಳವರಂತಹ ಮಹಾನುಭಾವರ ದರ್ಶನ ಪಡೆಯುವಂತೆ ಅವಕಾಶ ಲಭ್ಯವಾದುದಕ್ಕೆ ಕೃತಜ್ಞತೆಯನ್ನು ಸಮರ್ಪಿಸಿದರು. ಜಗದ್ಗುರು ಶ್ರೀ ಶಿವರಾತ್ರೀಶ್ವರರು ವೀರಶೈವ ಮಠದ ಸಂಪ್ರದಾಯಸ್ಥರು. ಆದರೆ ಮಹಾನುಭಾವರು. ಒಂದು ದೇಶ ಕಾಲ ಕುಲ ಗೋತ್ರಗಳ ಸಂಕುಚಿತ ಭಾವನೆಗೆ ಒಳಗಾಗದವರಲ್ಲ. ಸ್ವಾರ್ಥಪರರಾದ ಜನಮಹಾನುಭಾವರಿಗೆ ಸಂಕುಚಿತ ಭಾವನೆಯ ಸಂಕೋಲೆ ಹಾಕುತ್ತಾರೆ. ಅವರು ಮಾನವ ಕೋಟಿಯೇ ಉದ್ಧಾರವಾಗಲೆಂದು ಜೀವನವನ್ನು ನಡೆಸಿದವರು. ಯಾರು ಅಖಿಲ ಜೀವರಾಶಿಗಳ ಹಿತವನ್ನೇ ತಮ್ಮ ಹಿತನೆಂದು ಬಯಸಿದರೋ, ರಾಷ್ಟ್ರದ ಹಿತಕ್ಕಾಗಿ ಆತ್ಮಾರ್ಪಣೆಮಾಡಿದರೋ ಅಂತಹವರು ಮಾತ್ರವೇ ಮಹಾನುಭಾವರಾಗುತ್ತಾರೆ. ಅವರು ಜಗದ್ವಂದ್ಯರಾಗುತ್ತಾರೆ. ಅವರು ಅಮರರೂ ಆಗುತ್ತಾರೆ. ಭಗವಾನ್ ಬಸವಣ್ಣನವರು ಹೇಳಿದ "ಸಕಲ ಜೀವಾವಳಿಯ ಲೇಸನೇ ಬಯಸುವರು ಕೂಡಲ ಸಂಗನ ಶರಣರು" ಎಂಬ ಮಾತನ್ನು ನಾವು ನೆನಪಿನಲ್ಲಿಡಬೇಕು. ಅದರಂತೆಯೇ ವೀರಶೈವರು ಅನುಸರಿಸಿಕೊಂಡು ಬಂದಿದ್ದಾರೆ. ವೀರಶೈವರು ಎಂದರೆ ಒಂದು ಜಾತಿಯ ಹೆಸರಲ್ಲ. ಅದು ಒಂದು ತತ್ವದ ಹೆಸರು. ಲಾಂಛನಗಳಿಂದ ಜಾತಿಯನ್ನು ಗುರ್ತಿಸುವುದನ್ನು ಶರಣರು ಹೇಳಿಲ್ಲವೆಂದು ನನ್ನ ಭಾವನೆ. ಯಾರು ಪರಹಿತಕ್ಕಾಗಿ ಜೀವನ ನಡೆಸುವರೊ, ಯಾರು ದೈವಭಕ್ತರಾಗಿ ಬಾಳುವರೊ ಅವರೆಲ್ಲಗೂ ವೀರಶೈವರು ಎಂದು ನಾನು ನಂಬಿದ್ದೇನೆ ಎಂದು ಮುಖ್ಯಮಂತ್ರಿಗಳು ತಿಳಿಸಿದರು. ಲಿಂಗಧರಿಸುವುದರಿಂದಲೂ ಗಾಯಿತವೆಂಬುದೊಂದು ಜಾತಿ ಎಂದು ಕೆಲವರ ತಪ್ಪು ಕಲ್ಪನೆ. ಲಿಂಗವೆಂಬುದು ಜಾತಿ ಭಿನ್ನತೆಯ ಸೂಚಕವಲ್ಲ. ಮಾನವರು ಅಧ್ಯಾತ್ಮ ಸಾಧನೆಯಲ್ಲಿ ದೃಷ್ಟಿಯನ್ನು ಕೇಂದ್ರೀಕರಿಸಿ ಸ್ಥಿತಪ್ರಜ್ಞತೆಯನ್ನು ಸಾಧಿಸಲು ಬೆಳಸಿದ ಸಾಧನೆ. ಅವನಲ್ಲಿ ಶ್ರದ್ಧೆ. ಭಕ್ತಿ ನಿಷ್ಠೆಗಳು ಬೆಳೆದು ನಾವು ಸಾಧನಮಾರ್ಗವನ್ನು ಅನುಸರಿಸಿ ಆತ್ಮ ಸಾಕ್ಷಾತ್ಕಾರಮಾಡಿಕೊಳ್ಳಲು ಉತ್ತಮವಾದ ಉಪಾಯವಾಗಿದೆ. ಆದುದರಿಂದ ಲಿಂಗದಲ್ಲಿಯಾಗಲೀ ವೀರಶೈವ ಎಂಬ ಶಬ್ದದಿಂದಾಗಲಿ ಒಂದು ಜಾತಿಯೆಂದು ಸಂಕುಚಿತಾರ್ಥಮಾಡಿದವರು ನಿಜವಾದ ವೀರಶೈವರಲ್ಲವೆಂದು ಹೇಳಬಯಸುತ್ತೇನೆ. ಆದುದರಿಂದ ಮಾನವರು ಆತ್ಮ ಸಾಕ್ಷಾತ್ಕಾರಕ್ಕೆ ಯಾವುದೇ ರೀತಿಯಲ್ಲಿ ಅನ್ಯರಿಗೆ ಅಹಿತವಾಗದಂತೆ ಭಕ್ತಿಯಿಂದ ಸಾಧನೆ ಮಾಡುವರೋ ಅವರೆಲ್ಲರೂ ವೀರಶೈವರೆಂದರೆ ತಪ್ಪಲ್ಲ. ಆದುದರಿಂದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರಂತಹ ಶಿವಯೋಗಿ

ು ಎಲ್ಲ ಮಾನವತೆಯ ಹಿತಕ್ಕಾಗಿ ಬಾಳಿದ ಪುಣ್ಯಜೀವಿಗಳು. ಅವರ ಆದರ್ಶವನ್ನೆ ಾಲಿಸುತ್ತ ಸುತ್ತೂರು ವೀರಸಿಂಹಾಸನದ ಹಿರಿಯ ಜಗದ್ಗುರುಗಳವರೂ ಸಹ ರೋನಿರತರಾಗಿ ಮಹಾಮಂತ್ರ ಲೇಖನ ಯಜ್ಞವನ್ನು ನಡೆಸುತ್ತಾ ಲೋಕಹಿತವನ್ನು ಧಿಸುತ್ತಿದ್ದಾರೆ. ಅವರ ಅನುಗ್ರಹದಂತೆ ಇಲ್ಲಿ ಯಾವ ಜಾತಿ ಮತ ಭೇದವಿರದೆ ಸಸ್ರಾರು ಮಂದಿ ವಿದ್ಯಾರ್ಥಿಗಳು ಜ್ಞಾನದರ್ಶನ ಪಡೆಯುತ್ತಿದ್ದಾರೆ. ಶ್ರೀ ತ್ತೂರು ಮಠವು ಧರ್ಮಕಾರ್ಯಗಳಿಗೆ ನಮ್ಮ ದೇಶದಲ್ಲಿ ಅತ್ಯಂತ ಹೆಸರಾದ ಸಂಸ್ಥೆ ಾಗಿದೆ. ಈ ಸಂಸ್ಥೆಯು ಸಾರ್ವಜನಿಕರು ಮತ್ತು ಸರ್ಕಾರದ ಕೃತಜ್ಞತೆಗೆ ಪಾತ್ರ ಾಗಿದೆ. ಇಂತಹ ಸಂಸ್ಥೆಯ ಮೂಲಕೃತಗಳಾದ ಶ್ರೀ ಜಗದ್ಗುರುಗಳವರ ಜಯಂತಿ ಹೋತ್ಸವವನ್ನು ಇಂದು ನೆರವೇರಿಸುತ್ತಿರುವುದು ನಮ್ಮ ಕೃತಜ್ಞತೆಯ ಸಂಕೇತ. ಲ್ಲಿನ ವಿದ್ಯಾರ್ಥಿಗಳು ಈ ಪುಣ್ಯದಲ್ಲಿ ಭಾಗಿಗಳಾಗಿ ತಮ್ಮ ಜೀವನವನ್ನು ಉತ್ತಮ ಾಳಿಸಲೆಂದು ಹಾರೈಸುತ್ತಾ ಪ್ರಾರಂಭೋತ್ಸವವನ್ನು ನೆರವೇರಿಸಿದರು.

## ಆದರ್ಶ ವಿವಾಹಕೃತಿಯ ಪ್ರಕಟಣೋತ್ಸವ

ಅಧ್ಯಕ್ಷತೆ ವಹಿಸಿದ್ದ ಪೂಜ್ಯ ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯ ಹಾಸ್ವಾಮಿಗಳವರು ಅಧ್ಯಕ್ಷ ಸಂದೇಶವನ್ನು ನೀಡುವ ಮೊದಲು ಜಗದ್ಗುರು ಶ್ರೀ ವರಾತ್ರೀಶ್ವರ ವಿದ್ಯಾಪೀಠದ ಹಿರಿಯ ವಿದ್ಯಾರ್ಥಿಗಳಲ್ಲೊಬ್ಬರಾದ ಶ್ರೀ ಸಿ. ಅಂಕಪ್ಪ ವರಿಂದ ವಿರಚಿತವಾದ ಶರಣ ತತ್ವ ಪ್ರತಿಪಾದಕವಾದ "ಆದರ್ಶ ವಿವಾಹ" ಎಂಬ ಾಟಕದ ಪ್ರಕಟಣೋತ್ಸವವನ್ನು ನೆರವೇರಿಸುತ್ತಾ ಶ್ರೀ ಅಂಕಪ್ಪನವರ ಸಾಹಿತ್ಯ ಶಕ್ತಿ ರಣತತ್ವ ಪ್ರತಿಪಾದನಾಚಾತುರ್ಯಗಳನ್ನು ಕುರಿತು ತಮ್ಮ ಮೆಚ್ಚುಗೆಯನ್ನು ವ್ಯಕ್ತ ಡಿಸಿ ಗ್ರಂಥದ ಪ್ರಕಟಣೋತ್ಸವವನ್ನು ನೆರವೇರಿಸಿದರು.

## ಗುರು ಸಂದೇಶ

ಶ್ರೀಗಳವರು ಅಧ್ಯಕ್ಷ ಸಂದೇಶವನ್ನು ಮತ್ತು ಮುಖ್ಯಮಂತ್ರಿಗಳ ವಿಚಾರಧಾರೆ ಯನ್ನು ಮನೋಜ್ಞವಾಗಿ ವಿವರಿಸಿ ಸಮರ್ಥಿಸಿದರು. ಧರ್ಮಮಾನವನ ಐಹಿಕ ಪಾರ ಮಾರ್ಥಿಕ ಜೀವನದಲ್ಲಿ ಪೂರ್ಣ ಸಂತೋಷಗಳನ್ನು ಸಮಾನತೆಯನ್ನು ದೊರಕಿಸು ವುದಕ್ಕಾಗಿ ಮಹರ್ಷಿಗಳಿಂದ ಪ್ರಣೀತವಾದ ನಿಯಮಗಳು. ಅವುಗಳನ್ನು ಸ್ವಾರ್ಥ ಪರರು ತಮ್ಮ ಅಜ್ಞಾನದ ಸಂಕೋಲೆಯಲ್ಲಿ ಸಿಕ್ಕಿಸಿಕೊಂಡು ಪರಹಿಂಸೆಗೆ ಪರರ ಅಹಿತಕ್ಕೆ ಬಳಸಿ ಧರ್ಮಕ್ಕೆ ಅಪಘಾತವನ್ನೆಸಗಿದ್ದಾರೆ. ಅಂತಹ ಪ್ರಸಂಗದಲ್ಲಿ ಆಚಾರ್ಯರು ಶರಣರು ಜನ್ಮವೆತ್ತಿ ಮಾನವತೆಯಲ್ಲಿ ಸಮಾನತೆಯನ್ನು ಸೌಜನ್ಯ ಸೌಹಾರ್ದಭಾವನೆಯನ್ನು ಬೆಳೆಸಲು ಯತ್ನಿಸಿದ್ದಾರೆ. ಅದಕ್ಕಾಗಿ ಶ್ರಮಿಸಿ ಆತ್ಮಾ

ರ್ಣೆ ಮಾಡಿದ್ದಾರೆ. ಅವರೇ ಲೋಕದಲ್ಲಿ ಚಿರಾಯುಗಳು. ಅವರನ್ನೇ ಲೋ
ಆಚಂದ್ರಾರ್ಕವಾಗಿ ಪೂಜಿಸುವುದು. ಅಂತೆಯೇ ಸುತ್ತೂರು ಪೀಠಸಿಂಹಾಸ
ಸ್ಥಾಪಕರಾದ ಜಗದ್ಗುರು ಶ್ರೀ ಶಿವರಾತ್ರೀಶ್ವರರು ಮಹಾಯೋಗಿಗಳೂ, ಲೋ
ವಂದ್ಯರೂ ಆಗಿದ್ದಾರೆ. ಇಲ್ಲಿರುವ ಎರಡು ಸಹಸ್ರ ಮಂದಿ ವಿದ್ಯಾರ್ಥಿಗಳು ಆ ಮ
ನುಭಾವರ ಜಯಂತಿ ಮಹೋತ್ಸವವನ್ನು ನೆರವೇರಿಸುತ್ತಿರುವುದು ಅವರ ಉತ್ಕ
ಭವಿಷ್ಯ ಸಾಧನೆಯ ಚಿನ್ಹೆಯಾಗಿದೆ ಎಂದರು. ಹಿರಿಯ ಜಗದ್ಗುರುಗಳವರು ನ
ತ್ತಿರುವ ಮಂತ್ರಲೇಖನ ಸಾಧನ ತಪಸ್ಸನ್ನು ಸೂಚಿಸುತ್ತ ಮಂತ್ರಶಕ್ತಿಯ ಮ
ವನ್ನು ವಿವರಿಸಿದರು. ವೀರಶೈವ ಮಠಗಳು ಮಾನವ ಕಲ್ಯಾಣದ ಕೇಂದ್ರಗ
ಮಾನವರಲ್ಲಿ ಯಾವದೇ ರೀತಿಯ ಭಿನ್ನತೆಗೆ ಎಡೆಕೊಡುವ ಮಠಗಳು ಮಠಾಧಿ
ಗಳು ಉತ್ತಮ ತತ್ವಾನುಯಾಯಿಗಳೆನಿಸುವುದಿಲ್ಲ. ಮಾನವ ಹಿತಕ್ಕಾಗಿ ಕಂ
ಕಟ್ಟಿದ ಮಠಾಧಿಪತಿಗಳು ಭಕ್ತೋದ್ಧಾರಕ್ಕಾಗಿ ಧೀರತೆಯಿಂದ ಶ್ರಮಿಸುವುದು ಅಗ
ಅದು ಅವರ ಕರ್ತವ್ಯ. ಸುತ್ತೂರು ಶ್ರೀಮಠದ ಪೀಠಾಧಿಪತಿಗಳು ಮಠದ ನೈಜ
ವನ್ನು ಆಚರಣೆಯಲ್ಲಿ ತಂದು ಆದರ್ಶಪ್ರಾಯರೆನಿಸಿದ್ದಾರೆ ಎಂದು ತಿಳಿಸಿದ
ಆಚಾರ್ಯರು ಬೋಧಿಸಿದ ಲೋಕೋದ್ಧಾರ ತತ್ವಗಳು ಆಚರಣೆಯಲ್ಲಿ ಬಂದು ವ
ಜೀವನ ರಾಷ್ಟ್ರಜೀವನ ಭವ್ಯವಾಗುವಂತೆ ಮಾಡುವ ಹೊಣೆ ಮಠಾಧೀಶರಿಗೂ ಸೇ
ಭಕ್ತರಿಗೂ ಸೇರಿದೆ. ಇವರಿಬ್ಬರಲ್ಲಿ ಸಮರಸಭಾವವೇರ್ಪಡಲು ಇಂತಹ ಮಹೋತ್ಸ
ಗಳು ಉತ್ತಮ ಸಾಧನವೆಂದು ಹೇಳಿ ಸಭೆಗೆ ಉದಾತ್ತ ವಿಚಾರಧಾರೆಗಳಿಂದ ಕೂ
ಸಂದೇಶವನ್ನಿತ್ತರು. ಮಂಗಳಾಚರಣೆ, ನಾಟಕಾದಿ ಸಾಂಸ್ಕೃತಿಕ ಕಾರ್ಯಕ್ರ
ಗಳೊಡನೆ ಅಂದಿನ ಸಮಾರಂಭ ಮುಗಿಯಿತು.

## ಸಪ್ತಾಹ ಸಮಾರಂಭದ ಎರಡನೇ ದಿನ

ತಾ|| 19-12-1960ನೇ ಸೋಮವಾರ ಜಯಂತಿ ಸಪ್ತಾಹ ಸಮಾರಂ
ಎರಡನೆಯ ದಿನ. ಸಂಸ್ಥಾನದ ರೆವಿನ್ಯೂ ಸಚಿವರಾದ ಶ್ರೀ ಕಡಿದಾಳ್ ಮಂಜ
ನವರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮಗಳು ನೆರವೇರಲು ಸಮಾರಂಭವೇರ್ಪಟ್ಟಿ
ಇಂದಿನ ಪ್ರಧಾನ ವಿಷಯವೆಂದರೆ ವೀರಶೈವ ಸಾಹಿತ್ಯ ಪ್ರಚಾರಕರಾದ ಧಾರವಾ
ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರಿಂದ "ಪ್ರಭುಲಿಂಗಲೀಲೆ" ಎಂಬ ವಿಷಯವ
ಕುರಿತು ಭಾಷಣವನ್ನೇರ್ಪಡಿಸಲಾಗಿತ್ತು. ಸಾಹಿತ್ಯಪ್ರಚಾರ ಅದರಲ್ಲಿಯೂ ವೀರ
ಸಾಹಿತ್ಯ ಪ್ರಚಾರವೇ ತಮ್ಮ ಜೀವನ ಮಂತ್ರವಾಗಿಟ್ಟುಕೊಂಡು ಶರಣಸಾಹಿ
ಪ್ರಗತಿಗಾಗಿ ಶ್ರಮಿಸುತ್ತಿರುವ ಶ್ರೀ ಮಲ್ಲಾಬಾದಿ ಇವರು ಪ್ರಭುಲಿಂಗಲೀಲೆಯ
ಕುರಿತು ಭಾಷಣ ಮಾಡುತ್ತಾ, ಚಾಮರಸಕವಿಯ ಪ್ರೌಢಿಮೆಯನ್ನು ಚಾತು
ವನ್ನು ವಿವರಿಸಿದರು. ಗೀತೆಯಲ್ಲಿ ದೊರೆಯುವ ಜೀವನ ಸಂದೇಶವನ್ನು ಸು

ಾರೂಪದಲ್ಲಿ ಕವಿ ಕನ್ನಡಿಗರಿಗೆ ಅರ್ಪಿಸಿರುವುದನ್ನು ಕಾವ್ಯದಲ್ಲಿ ತನ್ನ ಕೌಶಲ್ಯದಿಂದ ರಾವ್ಯಕ್ತಿಗಳಾದ ಪ್ರಭುದೇವರು, ಮಾಯೆ ಇವರ ಸೃಷ್ಟಿಯಲ್ಲಿ ಸಜೀವನಾಗುವಂತೆ ವಕಳೆ ತುಂಬಿರುವುದನ್ನು ಅನೇಕ ಉದಾಹರಣೆಗಳೊಡನೆ ವ್ಯಕ್ತಪಡಿಸಿದರು. ತ್ತಮ ಕಾವ್ಯಾಭ್ಯಾಸ ಮಾನವನ ಮಾನಸಿಕ ಸಂಕಟಗಳನ್ನು ಪರಿಹರಿಸಿ ನಿರಾಶಾ ಯ ಜೀವನಕ್ಕೆ ಎಡೆಕೊಡದಂತೆ ಮಾನವನಲ್ಲಿ ನವಚೈತನ್ಯವನ್ನೂ ಸ್ಫೂರ್ತಿಯನ್ನೂ ಂಟುಮಾಡುವುದು. ಕಾವ್ಯಾಭ್ಯಾಸದಲ್ಲಿ ಶ್ರದ್ಧೆ, ಭಕ್ತಿಗಳು ಅವಶ್ಯಕ. ಕವಿ ಹರ್ಷಿಯಾಗಿ ಜೀವನವನ್ನೆಲ್ಲಾ ತನ್ನ ಕೃತಿರಚನೆಗಾಗಿ ಸವೆಸುತ್ತಾನೆ. ಅವನ ದ್ದಿಶ್ಯ ಕೇವಲ ವೈಯಕ್ತಿಕವಾದ ಬಾಹ್ಯ ವೈಭವಾಪೇಕ್ಷೆಯಲ್ಲ. ಜನಜೀವನದಲ್ಲಿ ರೋದಯವನ್ನುಂಟುಮಾಡಿ ಜನತಾಕ್ಷೇಮ ದೃಷ್ಟಿಯಿಂದ ಕೃತಿಯನ್ನು ರಚಿಸುತ್ತಾರೆ. ವರಲ್ಲೂ ಶರಣ ಕವಿಗಳು ಬುದ್ಧಿಶಕ್ತಿ ವೈಭವಕ್ಕೆ ಮರುಳಾಗದೆ ಆತ್ಮಾನುಭವವನ್ನು ಾವ್ಯದಲ್ಲಿ ತುಂಬಿ ನಮ್ಮ ಹೃದಯಕ್ಕೆ ಅಪ್ಯಾಯಮಾನವಾಗುವಂತೆ ನಮ್ಮ ಆತ್ಮೋ ತಿಯಾಗುವಂತೆ ರಚಿಸಿ ಕೃತಿರತ್ನಗಳನ್ನು ಜನತೆಗೆ ನೀಡಿದ್ದಾರೆ. ಇಂತಹ ಪುಣ್ಯ ತಿಗಳ ಅಮೂಲ್ಯವಾದ ರಸೋಪಾಸನಾಭಾವನೆ ನಮ್ಮಲ್ಲಿ ಬೆಳೆದು ಬರಬೇಕು. ಗದ್ಗುರು ಶ್ರೀ ಶಿವರಾತ್ರೀಶ್ವರರ ಕೃಪಾಪೋಷಿತವಾದ ಸಂಸ್ಥೆ ಇಂತಹ ಉತ್ತಮ ಾಹಿತ್ಯ ಪ್ರಕಾಶಕ್ಕೆ ಸತತವೂ ಶ್ರಮಿಸುತ್ತಿದೆ. ಜಗದ್ಗುರು ಶ್ರೀ ಶಿವರಾತ್ರಿಮಹಾ ್ವಾಮಿಗಳವರು ಮಂತ್ರ ನಿಷ್ಠರಾಗಿಯೂ ತಪೋಮೂರ್ತಿಗಳಾಗಿಯೂ ಇದ್ದುಕೊಂಡು ಾಡಿನ ಅಭ್ಯುದಯಕ್ಕೆ ಅಪಾರವಾದ ಕರುಣಾಮೃತಧಾರೆಯೆರೆಯುತ್ತಿದ್ದಾರೆ. ಇಡೀ ರತಖಂಡದಲ್ಲಿ ನಾವೆಂದೂ ಕಾಣದಂತಹ ಮಹದ್‌ಸಂಸ್ಥೆಯನ್ನು ನಿರ್ಮಿಸಿ ಎರಡು ಹಸ್ರ ಮಂದಿ ವಿದ್ಯಾರ್ಥಿಗಳಿಗೆ ಅನ್ನದಾನ ವಿದ್ಯಾದಾನ ನಡೆಸುತ್ತಿದ್ದಾರೆ. ಜಗದ್ಗುರು ್ರೀ ಶಿವರಾತ್ರಿ ರಾಜೇಂದ್ರಮಹಾಸ್ವಾಮಿಗಳವರು ಬಸವಣ್ಣನವರ ಪ್ರತಿರೂಪದಂತೆ ರಣ ತತ್ವದ ಅಭ್ಯುದಯಕ್ಕೆ ಶ್ರಮಿಸುತ್ತಿದ್ದಾರೆ. ಇಂತಹ ಪವಿತ್ರ ಸಂಸ್ಥೆಯಲ್ಲಿ ಶ್ರಯ ಪಡೆದ ವಿದ್ಯಾರ್ಥಿಗಳು ಧನ್ಯರೆಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಕಡಿದಾಳ್ ಮಂಜಪ್ಪನವರು ಈ ಸಂಸ್ಥೆಯ ಕಾರ್ಯ ್ರಮಗಳನ್ನು ನೋಡಿ ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿದರು. ತಾವು ಸುಮಾರು ಂಟು ವರ್ಷಗಳ ಹಿಂದೆ ಇದೇ ಆದಿಗುರು ಶ್ರೀ ಶಿವರಾತ್ರೀಶ್ವರರ ಜಯಂತಿ ಸಮಾ ಂಭಕ್ಕೆ ಆಗಮಿಸಿದುದನ್ನು ಸ್ಮರಿಸಿಕೊಂಡು, ಅಂದಿಗಿಂತಲೂ ಇಂದು ತಮ್ಮ ಮನೋ ಭಾವನೆಗಳಲ್ಲಿ ವಿಪುಲ ಬದಲಾವಣೆಗಳಾಗಿವೆಯೆಂಬುದನ್ನು ತಿಳಿಸಿದರು. ನಮ್ಮ ರಾಷ್ಟ್ರದಲ್ಲಿರುವ ಮಠಗಳು ರಾಷ್ಟ್ರದ ಹಿತದೃಷ್ಟಿಯಿಂದ ಶ್ರಮಿಸಿದರೆ ಸರ್ಕಾರದ ಅಪಾರ ಹೊಣೆಯನ್ನು ಪಾರುಮಾಡಿದಂತಾಗುತ್ತದೆ. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ಪ್ರಭುಗಳಾದ್ದರಿಂದ ರಾಷ್ಟ್ರದ ಅಭ್ಯುದಯ ಪ್ರಜೆಗಳ ಕರ್ತವ್ಯ ಶಕ್ತಿ ವಿಚಾರಶೀಲತೆ ಯನ್ನು ಅವಲಂಬಿಸಿದೆ. ಈ ಸಮಯದಲ್ಲಿ ಮಠಗಳು ಮಠಾಧಿಪತಿಗಳು ಜನರನ್ನು

ವಿಚಾರಶೀಲರೂ ಕರ್ತವ್ಯನಿಷ್ಠರೂ ಆಗುವಂತೆ ಮಾಡಿದರೆ ರಾಷ್ಟ್ರಕ್ಕೆ ಮಹದುಪ
ಮಾಡಿದಂತಾಗುತ್ತದೆ. ಅಂತಹ ಮಠಗಳಿಗೂ ಮಠಾಧಿಪತಿಗಳಿಗೂ ಸರ್ಕಾರ
ಋಣಿಯಾಗಿರುತ್ತದೆ ಎಂದರು. ಸಹಸ್ರಾರು ಮಂದಿ ವಿದ್ಯಾರ್ಥಿಗಳಿಗೆ ಅನ್ನ
ನಡೆಸಿ ಅವರ ಜೀವನವನ್ನು ರೂಪಿಸಲು ಯತ್ನಿಸುತ್ತಿರುವ ಸುತ್ತೂರು ಜಗದ
ಗಳವರ ಕಾರ್ಯ ಪ್ರಶಂಸನೀಯವಾದುದೆಂದು ಇಂತಹ ಸಮಾರಂಭದಲ್ಲಿ ಭಾಗ
ಸುವುದು ಸಂತೋಷದಾಯಕವೆಂದು ತಿಳಿಸಿದರು.

ಅತಿಥಿಗಳು ಮಹಾಮಂಗಳಾರತಿಯನ್ನು ಸ್ವೀಕರಿಸಿದ ನಂತರ ನೃತ್ಯ ಗೀ
ಸಾಂಸ್ಕೃತಿಕ ಕಾರ್ಯಕ್ರಮಗಳು ಅತ್ಯಂತ ವಿಜೃಂಭಣೆಯಿಂದ ನೆರವೇರಿದುವು.

## ರಾಷ್ಟ್ರಪತಿ ಸಂದರ್ಶನ

ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸವದ ಕಾರ್ಯಕ್ರಮ
ಎರಡು ದಿನಗಳೂ ಸಹ ಅತ್ಯಂತ ವಿಜೃಂಭಣೆಯಿಂದ ನೆರವೇರಿದುವು. ಮೂರನೆ
ದಿನವಾದ ತಾ|| 20-12-60 ರಂದು ಸಂಸ್ಥಾನದ ಅರಣ್ಯ ಶಾಖಾ ಸಚಿವರಾದ
ಕೆ. ಎಫ್. ಪಾಟೀಲ್ ಇವರ ಅಧ್ಯಕ್ಷತೆಯಲ್ಲಿ ಸಮಾರಂಭವನ್ನು ಏರ್ಪಡಿಸಲಾಗಿ
ಆದರೆ ಅನಿರೀಕ್ಷಿತವಾಗಿ ಮೈಸೂರು ಪ್ರವಾಸಕ್ಕೆ ಆಗಮಿಸಿದ್ದ ರಾಷ್ಟ್ರಪತಿ ರಾಜೇ
ಪ್ರಸಾದರು ಜಗದ್ಗುರುಗಳವರ ಸಂದರ್ಶನ ಪಡೆಯುವ ಸುಯೋಗ ಒದಗಿ ಬಂದ
ರಾಷ್ಟ್ರಪತಿಯವರು ವಿದ್ಯಾಪೀಠಕ್ಕೆ ಆಗಮಿಸುವ ಅಭಿಪ್ರಾಯವನ್ನು ವ್ಯಕ್ತಪಡಿ
ಮುನ್ನವೇ ಶ್ರೀ ಮಠದ ಇತಿಹಾಸ ಪರಂಪರೆಯನ್ನು, ಮಠದಿಂದ ನಡೆಯುತ್ತಿ
ರಾಷ್ಟ್ರದಭ್ಯುದಯ ಕಾರ್ಯಗಳನ್ನು ಮನವರಿಕೆಮಾಡಿಕೊಂಡಿದ್ದರು. ರಾಷ್ಟ್ರಪತಿ
ಸ್ವಭಾವತಃ ಧರ್ಮಾಭಿಮಾನಿಗಳೂ, ಸಂಸ್ಕೃತಿ ಸಾಹಿತ್ಯದ ಪ್ರಾಜ್ಞರೂ ಆದುದರ
ಶ್ರೀಗಳವರ ಸಂದರ್ಶನ ಪಡೆಯುವ ಇಚ್ಛೆಯನ್ನು ವ್ಯಕ್ತಪಡಿಸಿದರು. ಅಂತೆಯೇ
ಕಾರ್ಯಕ್ರಮದಲ್ಲಿ ಭಾಗವಹಿಸುವ ಮುನ್ನವೇ ಜಗದ್ಗುರು ಶ್ರೀ ಶಿವರಾತ್ರಿ ವ
ಸ್ವಾಮಿಗಳವರು ಮತ್ತು ಜಗದ್ಗುರು ಶ್ರೀ ಶಿವರಾತ್ರಿರಾಜೇಂದ್ರಮಹಾಸ್ವಾಮಿಗಳ
ಸಂದರ್ಶನ ಪಡೆದು ಕುಶಲ ಸಂಭಾಷಣೆ ನಡೆಸಿದರು. ಜಗದ್ಗುರುಗಳು ನಡೆಸ
ರುವ ಮಂತ್ರ ತಪಸ್ಸನ್ನು ತಿಳಿದು ಆತ್ಮಾನಂದವನ್ನು ವ್ಯಕ್ತಪಡಿಸಿದರು. ಮ
ಲೇಖನವನ್ನು ನೋಡಿ ಆನಂದಪಟ್ಟಿದಲ್ಲದೆ ಇಂತಹ ಮಹಾನುಭಾವರ ದರ್ಶನದಿ
ತಮ್ಮ ಜೀವನ ಪಾವನವೆಂದು ಧನ್ಯತೆಯನ್ನು ವ್ಯಕ್ತಪಡಿಸಿದರು. ಮಠದಿಂದ ವಿ
ದಾನ ಸಂಸ್ಕೃತಿ ಸಾಹಿತ್ಯ ಪ್ರಸಾರವಾಗುತ್ತಿರುವುದನ್ನು ಮನಗಂಡು ಹರ್ಷಗೊಂ
ವಿದ್ಯಾಪೀಠಕ್ಕೆ ಆಗಮಿಸಲು ಒಪ್ಪಿದರು. ಅಂತೆಯೇ ಮೂರನೇ ದಿನದ ಜಯಂ
ತ್ಸವವು ರಾಷ್ಟ್ರಪತಿಗಳ ಸಮ್ಮುಖದಲ್ಲಿ ನೆರವೇರುವಂತಾಯಿತು.

ಜಗದ್ಗುರುಗಳವರಿಂದ ರಚಿತವಾದ ಮಂತ್ರ ಪುಸ್ತಕವನ್ನು ರಾಜ್ಯಪಾಲರು ಆಸಕ್ತಿಯಿಂದ ವೀಕ್ಷಿಸುತ್ತಿರುವುದು.



ಜಯಂತೀ ಮಹೋತ್ಸವದಲ್ಲಿ ರಾಷ್ಟ್ರಪತಿಗಳೂ, ರಾಜ್ಯಪಾಲರೂ ಭರತಪುರದ ಮಹಾರಾಜರೂ ಜಗದ್ಗುರುಗಳವರೊಡನೆ,

ಸಂಜೆ ವಿದ್ಯಾಪೀಠಕ್ಕೆ ಆಗಮಿಸಿದ ರಾಷ್ಟ್ರಪತಿಗಳು, ಮೈಸೂರಿನ ರಾಜ್ಯಪಾಲರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್‌ರವರು ಮತ್ತು ಭರತಪುರ ಸಂಸ್ಥಾನದ ಶ್ರೀಮನ್ಮಹಾರಾಜರವರುಗಳಿಗೆ ಪೂರ್ಣಕುಂಭ ಮತ್ತು ಇತರ ಗುರುಪೀಠದ ವೇದೋಕ್ತ ಗೌರವಗಳೊಡನೆ ಅತಿವೈಭವದ ಸ್ವಾಗತವನ್ನು ನೀಡಲಾಯಿತು. ಕಿಕ್ಕಿರಿದ ಜನಸಂದಣಿಯ ಜಯಘೋಷದ ಅಭಿಮಾನ ಪೂರ್ವಕ ಸ್ವಾಗತದೊಡನೆ ಅನುಭವಮಂಟಪದ ವೇದಿಕೆಯನ್ನು ಹತ್ತಿ ರಾಷ್ಟ್ರಪತಿಗಳು, ಜಗದ್ಗುರುಗಳವರೂ, ಮೈಸೂರು ಮತ್ತು ಭರತಪುರದ ಶ್ರೀಮನ್ಮಹಾರಾಜರವರೂ ಆಸನಾರೂಢರಾದರು. ಸಂಪ್ರದಾಯಕವಾಗಿ ಮಂಗಳಾಚರಣೆ, ಸಂಗೀತ, ಪ್ರಾರ್ಥನೆಗಳೊಡನೆ ಕಾರ್ಯಕ್ರಮವು ಪ್ರಾರಂಭಗೊಂಡಿತು. ಮಾನ್ಯ ಅತಿಥಿಗಳನ್ನು ಉತ್ಸವ ಸಮಿತಿಯ ಪರವಾಗಿ ಶ್ರೀ ಹೆಚ್. ಗಂಗಾಧರರವರು ಸ್ವಾಗತಿಸಿದರು.

## ರಾಷ್ಟ್ರಪತಿಗಳಿಗೆ ಸ್ವಾಗತ

Your Holiness Jagadguru Mahaswmiji, Your Excellency the President of India Your Excellency the Rajapramukh and his Higness the Maharaja of Mysore,

Ladies & Gentlemen,

Indeed it is the indescribable pleasure for me to extend my hearty welcome to you all for this unique celebration. India has blessed the world all through the ages with a number of illustrious spritual heroes who without deviating from the main traditional lines of Sanathana Dharma have inspired humanity with most subline vision of the Divine and have opened up new vistas of spiritual realisations. The Jayanthi Festival that we are celebrating to-day is a memory of a great spiritual hero of the South India known as Jagadguru Sri Shivarathri Mahaswamiji. It is about ten centuries ago that this part of the

nation has enjoyed the pleasure of resergence usherec in the advent of this Divine incarnation as a respones to the message of Geeta ( i. e., Dharma Samsthapanarthaya Sambavami Yuge Yuge)

**May it please your excellency**

It is this Divine incarnation in the human form had founded the sacred instituion called Suttur Veera simhasana Mutt on the banks of Holy Kapila River It is the Holy Festival of this founder of tha Institution. It is he who has scaled the highest peak of the insight and his messages springing directl from the inmost depths of communion with th source of all life, bear the impress of eternity an universality. This immense contribution of thi highest value to development of man's spiritua approach to reality by His Holiness Sri Jagadgur the founder of this Institution and the benevalen blessings of the present Jagadguru Sri Sivarath Mahaswamiji is solely responsible for creating golden opportunity like this. Now I am extremel happy to express my sincere thanks to your Excell ency the President of India, your Excellency the Ra pramukh of Mysore on behalf of all the two thousan present students who are deriving the benefit of fre social and cultural Education irrespective of cas and creed here.

It gives me great pleasure to express my than on behalf of ten thousand students who have be ducated form this instution and also on behalf

Thirty Lakhs of devotees spread all over the South India. It is the golden page in the History of this institution particularly in the history of our twelve free-boarding homes, Two Basic Teachers' Training Colleges and three High Schools and one sanskrit Patasala and the institution for Art and culture of India which are managed and maintained by this great Suttur Veerasimhasana Mutt and which are flourishing by the blessings of our present Jagadguru an embodyment of Mantra Sakthi.

Once again I Express my thanks on behalf of this institution for the gracious presence of your Excellency the President of India and your Excellency the Rajpramukh of Mysore State to this unique celebrations of Jagadguru Jayanthi Mahothsava and to all those who are present here.

Lastly it reminds me the call of Rugveda it is said there "*Yathra Gangacha Yamuna Yathra Prachee Saraswathi, Yathra someswaro Devasthathra Mamamrutham Krudheendrayendo Parisrvau*" make me immortal at the place where the three rivers Ganga Jamuna and Saraswathi meet and where there is the lord. Here is His Holiness Jagadguru Sri Sivarathri Mahaswamiji representing the Holi Ganges who removes the sins and sorrows of devotees by his messages and Manthra Sakthi. Here is His Excellency the President of India an embodyment of Gandhism representing Yamuna, the messenger of peace and presperity to the humanity. Here is His Excellency the Rajpramukh and His Highness the

Maharaja of Mysore an embodiment of Goddess Saraswathi, the Goddess of learning, representing prachi Saraswathi. All these three are here therefore here is Jagadguru Sri Sivarathreswara. Now all of us are here in the Holy place where all the three spiritual forces are met together. Let me pray the lord to shower the nector of immortalliy on all of us here.

## OM THATHSAT

(ಸ್ವಾಗತ ಭಾಷಣದ ಅನುವಾದ)

**ಪೂಜ್ಯ ಮಹಾಸ್ವಾಮಿಗಳೇ, ಭಾರತದ ರಾಷ್ಟ್ರಾಧ್ಯಕ್ಷರೇ, ರಾಜಪ್ರಮುಖ
ರಾದ ಮೈಸೂರಿನ ಶ್ರೀಮನ್ಮಹಾರಾಜರೇ, ಮಹನೀಯರೇ
ಮತ್ತು ಮಹಿಳೆಯರೇ,**

ಈ ವಿಶೇಷ ಸಂದರ್ಭದಲ್ಲಿ, ನಿಮ್ಮೆಲ್ಲರಿಗೂ ಹೃತ್ಪೂರ್ವಕವಾದ ಸುಸ್ವಾಗತವ
ವನ್ನು ಬಯಸಲು ನನಗೆ ಅಪಾರವಾದ ಆನಂದವಾಗಿದೆ. ಸನಾತನ ಧರ್ಮದ ಬುನಾ
ದಿಯ ಮೇಲೆ ಸಿದ್ಧಿಯನ್ನು ಪಡೆದು, ಜನತೆಗೆ ದೈವೀಕ ಸಿದ್ಧಿಯ ಹೊಸ ಹೊಸ
ಕಾಣಿಕೆಗಳನ್ನೂ ಮತ್ತು ಸಾಧಕರಿಗೆ ಹೊಸ ಹೊಸ ಮಾರ್ಗಗಳನ್ನೂ ತೋರಿಸಿ
ಕೊಟ್ಟಿರುವ ಅನೇಕ ಮಂದಿ ಧಾರ್ಮಿಕ ವ್ಯಕ್ತಿಗಳಿಗೆ ಭಾರತ ಅನಾದಿಕಾಲದಿಂದಲೂ
ಜನ್ಮಕೊಟ್ಟಿದೆ. ದಕ್ಷಿಣ ಭಾರತದ ಪ್ರಖ್ಯಾತ ಧಾರ್ಮಿಕ ಪುರುಷಾಗ್ರಣಿಗಳಲ್ಲಿ ಮುಖ್ಯ
ರಾದ ಶ್ರೀ ಶಿವರಾತ್ರಿಸ್ವಾಮಿಗಳ ಸ್ಮರಣಾರ್ಥವಾಗಿಯೇ ನಾವು ಈ ಜಯಂತಿ ಮಹೋ
ತ್ಸವವನ್ನು ನಡೆಸುತ್ತಿದ್ದೇವೆ. "ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ
ಯುಗೇ" ಎಂಬ ಗೀತೆಯಲ್ಲಿನ ಭಗವಂತನ ಆದೇಶದಂತೆ, ಸುಮಾರು ಹತ್ತು ಶತ
ಮಾನಗಳ ಹಿಂದೆ, ಭಾರತದ ಈ ಭಾಗದಲ್ಲಿ ಧಾರ್ಮಿಕ ಕ್ರಾಂತಿ ಉಂಟಾಗಿ, ಈ
ದೈವೀಪುರುಷರ ಪ್ರಭಾವವನ್ನೂ, ಸೌಭಾಗ್ಯವನ್ನೂ ಜನರು ಪಡೆದಿದ್ದರು.

**ಸನ್ಮಾನ್ಯರೇ,**

ಮೇಲೆ ಹೇಳಿದ ಈ ದೈವೀಪುರುಷರೇ ಕಪಿಲಾ ನದಿಯ ದಂಡೆಯ ಮೇಲೆ
ಸುತ್ತೂರು ಶ್ರೀ ವೀರಸಿಂಹಾಸನ ಮಠವನ್ನು ಸ್ಥಾಪಿಸಿದವರು ಈಗ ಇಲ್ಲಿ ಜರುಗುತ್ತಿ
ರುವ ಜಯಂತೀ ಮಹೋತ್ಸವವು ಆ ಮಹಾಪುರುಷರ ಜ್ಞಾಪಕಾರ್ಥವಾಗಿಯೇ
ಅಂತರ್ಮುಖಿಯಾಗಿ ಸಾಧನೆಯ ಉಚ್ಛ ಶಿಖರಗಳನ್ನು ಏರಿದ ಅವರ ಕಾಣಿಕೆಗಳ
ಮತ್ತು ಸುವಾರ್ತೆಗಳು ಎಲ್ಲಾ ಕಾಲಕ್ಕೂ ಎಲ್ಲಾ ದೇಶಕ್ಕೂ ಅನ್ವಯವಾಗುವಂತಿರು

ನಲ್ಲದೆ, ವಿಶ್ವಶಕ್ತಿಯೊಡನೆ ಅವರಿಗಿಷ್ಟ ಲೀನತೆ ಮತ್ತು ತನ್ಮಯತೆಯನ್ನು ಪ್ರತಿ
ಬಿಂಬಿಸುತ್ತವೆ. ಈ ಸಂಸ್ಥೆಯನ್ನು ಸ್ಥಾಪಿಸಿದ ಆ ಮಹಾಪುರುಷರು, ಮಾನವರ
ಲೌಕಿಕ ಅಭಿವೃದ್ಧಿಗಾಗಿ ಪಟ್ಟ ಶ್ರಮದ ಫಲವಾಗಿ ಮತ್ತು ಈಗಿನ ಶ್ರೀ ಶಿವರಾತ್ರಿ
ಸ್ವಾಮಿಗಳ ಪ್ರಯತ್ನದ ಫಲವಾಗಿ ಇಂದು ಈ ಶುಭಸಂದರ್ಭ ಒದಗಿದೆ. ಈ ಸಂದರ್ಭ
ದಲ್ಲಿ, ಸನ್ಮಾನ್ಯ ಭಾರತದ ರಾಷ್ಟ್ರಾಧ್ಯಕ್ಷರಿಗೂ ಮತ್ತು ರಾಜಪ್ರಮುಖರಿಗೂ, ಈ
ಸಂಸ್ಥೆಯಲ್ಲಿ ಜಾತಿ ಮತಗಳ ಭೇದವಿಲ್ಲದೆ, ಸಾಮಾಜಿಕ ಮತ್ತು ಸಾಂಸ್ಕೃತಿಕ ಶಿಕ್ಷಣ
ವನ್ನು ಪಡೆಯುತ್ತಿರುವ ಎರಡು ಸಹಸ್ರ ವಿದ್ಯಾರ್ಥಿಗಳ ಪರವಾಗಿ ವಂದನೆಗಳನ್ನು
ಅರ್ಪಿಸಲು ನನಗೆ ತುಂಬಾ ಸಂತೋಷವಾಗುತ್ತದೆ.

ಅಲ್ಲದೆ, ಈ ಸಂಸ್ಥೆಯ ಆಶ್ರಯದಿಂದ ಆಗಲೇ ವಿದ್ಯಾಪ್ರಯೋಜನವನ್ನು ಪಡೆದ
ಹತ್ತು ಸಹಸ್ರ ಮಂದಿ ವಿದ್ಯಾರ್ಥಿಗಳ ಪರವಾಗಿಯೂ ಮತ್ತು ದಕ್ಷಿಣ ಭಾರತದ
ಎಲ್ಲೆಡೆಯಲ್ಲೂ ಹರಡಿರುವ 30 ಲಕ್ಷ ಶಿಷ್ಯ ಮಂಡಲಿಯ ಪರವಾಗಿಯೂ ನಾನು ನಿಮಗೆ
ಸಂತೋಷದಿಂದ ವಂದನೆಗಳನ್ನು ಸಲ್ಲಿಸುತ್ತಿದ್ದೇನೆ. ಈ ಸಂದರ್ಭವು ಜಗದ್ಗುರುಗಳ
ಮಂತ್ರ ಶಕ್ತಿಯಿಂದ ಹಾಗೂ ಅವರ ಆಶೀರ್ವಾದದಿಂದ, ಸಾಂಸ್ಕೃತಿಕ ಕೇಂದ್ರವಾದ
ಮೈಸೂರಿನಲ್ಲಿ ನಡೆಯುತ್ತಿರುವ, ಹನ್ನೆರಡು ಉಚಿತ ವಿದ್ಯಾರ್ಥಿನಿಲಯಗಳು, ಎರಡು
ಮೂಲಶಿಕ್ಷಣ ಶಾಲೆಗಳು, ಮೂರು ಹೈಸ್ಕೂಲುಗಳು ಮತ್ತು ವೇದಪಾಠಶಾಲೆಗಳ ಇತಿ
ಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡತಕ್ಕದ್ದಾಗಿದೆ.

ಮತ್ತೊಮ್ಮೆ, ಈ ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸವಕ್ಕೆ ಆಗಮಿಸಿ,
ಮಹತ್ತನ್ನುಂಟುಮಾಡಿರುವ ಭಾರತದ ರಾಷ್ಟ್ರಾಧ್ಯಕ್ಷರಿಗೂ ಮತ್ತು ಮೈಸೂರಿನ ರಾಜ
ಪ್ರಮುಖರಿಗೂ ನನ್ನ ಹೃತ್ಪೂರ್ವಕ ವಂದನೆಗಳನ್ನು ಅರ್ಪಿಸುತ್ತೇನೆ.

ಕೊನೆಯದಾಗಿ ಋಗ್ವೇದದ ಕರೆಯೊಂದು ನನ್ನ ಸ್ಮೃತಿಪಟಲದ ಮೇಲೆ
ಹೊಳೆಯುತ್ತಿದೆ.

ಯತ್ರ ಗಂಗಾಚ ಯಮುನಾ ಯತ್ರ ಪ್ರಾಚೀ ಸರಸ್ವತೀ ।
ಯತ್ರ ಸೋಮೇಶ್ವರೋ ದೇವಸ್ತತ್ರ ಮಾಮಮೃತಂ ಕೃಧೀಂದ್ರಾ
ಯೇಂದೋ ಪರಿಸ್ರವ ॥

ಸರ್ವವ್ಯಾಪಿಯಾದ ಭಗವಂತನಿರುವ ಗಂಗಾ, ಯಮುನಾ ಮತ್ತು ಸರಸ್ವತಿ
ಯವರ ತ್ರಿವೇಣಿ ಸಂಗಮದಲ್ಲಿ ನನಗೆ ಅಮರತ್ವವನ್ನು ಪಾಲಿಸು—ಎಂದು. ಇಲ್ಲೀ
ಈ ಮಹೋತ್ಸವದಲ್ಲೇ ಪವಿತ್ರ ಗಂಗಾನದಿಯಂತೆ ಶ್ರೀ ಶಿವರಾತ್ರಿಸ್ವಾಮಿಗಳು ತಮ್ಮ
ಮಂತ್ರಶಕ್ತಿಯಿಂದ ಹಾಗೂ ಆಶೀರ್ವಾದದಿಂದ ಭಕ್ತರ ದುಃಖವನ್ನೂ ಪಾಪಗಳನ್ನೂ
ತೊಳೆಯುತ್ತಿದ್ದಾರೆ. ಮಾನವರಿಗೆ ಶಾಂತಿ ಮತ್ತು ಸೌಖ್ಯದ ಸುವಾರ್ತೆಯನ್ನು

ಸಾರುವ ಯಮುನೆಯಂತೆ ಗಾಂಧಿ ತತ್ವಗಳೇ ಮೂರ್ತಿವೆತ್ತಂತಿರುವ ರಾಷ್ಟ್ರಾಧ
ರಿದ್ದಾರೆ. ಪ್ರಾಚೀಸರಸ್ವತಿಯನ್ನು ಪ್ರತಿನಿಧಿಸುತ್ತಿರುವರೋ ಎಂಬಂತೆ ವಿದ್ಯೆಯ ಗ
ಯಾದ ಶ್ರೀಮನ್ಮಹಾರಾಜರವರು ಇಲ್ಲಿ ಮಂಡಿಸಿದ್ದಾರೆ. ಈ ಸಂದರ್ಭದಲ್ಲಿ
ಮೂರು ಮಹಾವ್ಯಕ್ತಿಗಳ ಇರುವಿಕೆಯು ಶ್ರೀ ಶಿವರಾತ್ರೀಶ್ವರರೇ ಇರುವಂತೆ ತೋ
ತ್ತದೆ. ಇಲ್ಲಿ ಸೇರಿರುವ ನನ್ನೆಲ್ಲರಿಗೂ ಭಗವಂತನು ಅಮರತ್ವದ ಅಮೃತವ
ಕರುಣಿಸಲಿ ಎಂದು ಪ್ರಾರ್ಥಿಸುತ್ತೇನೆ.

ಸ್ವಾಗತಾಭಿನಂದನೆಗಳನ್ನರ್ಪಿಸಿದ ನಂತರ ಉತ್ಸವ ಸಮಿತಿಯ ಪರವಾಗಿಯ
ಶ್ರೀ ಮಠದ ಪರವಾಗಿಯೂ ಅತಿಥಿಗಳಿಗೆ ಅಭಿನಂದನಾಪೂರ್ವಕವಾಗಿ ಹಾರಗಳ
ರ್ಪಿಸಲಾಯಿತು. ಜಗದ್ಗುರುಗಳವರು ರಾಷ್ಟ್ರಪತಿಗಳನ್ನು ಆಶೀರ್ವದಿಸಿದರು. ನಂ
ಜಗದ್ಗುರು ಮಂದಿರದಲ್ಲಿ ಮಹಾಮಂಗಳಾರತಿಯನ್ನು ಸ್ವೀಕರಿಸಿ ಕಾಣಿಕೆಯನ್ನೊ
ಸಿದ ರಾಷ್ಟ್ರಪತಿಗಳು ಸಭಿಕರಿಗೆ ಕೃತಜ್ಞತೆಯನ್ನು ಸೂಚಿಸುತ್ತಾ ತಮ್ಮ ಬಿಡಾರ
ತೆರಳಿದರು. ಶ್ರೀಮಠದ ಹಾಗೂ ಜಗದ್ಗುರುಗಳವರ ಕಾರ್ಯಕ್ರಮಗಳನ್ನು ಪ
ಗಂಡು ತಮ್ಮ ಹೃತ್ಪೂರ್ವಕ ಮೆಚ್ಚಿಗೆಯನ್ನು ಸೂಚಿಸುತ್ತಾ ತಾವು ಸುತ್ತೂರು ವ
ಸಿಂಹಾಸನಮಠಕ್ಕೆ ಆಗಮಿಸಿ ಗುರುಗಳ ಆಶೀರ್ವಾದ ಪಡೆಯಬೇಕೆಂಬ ಅಭಿಲಾ
ಯನ್ನು ಸಹ ವ್ಯಕ್ತಪಡಿಸಿದರು. ನಂತರ ಗುರುದರ್ಶನದಿಂದ ತಮ್ಮ ಮನಸ್ಸಿ
ಮೇಲಾದ ಪರಿಣಾಮವನ್ನು ಕುರಿತು ಈ ಕೆಳಗೆ ತಿಳಿಸಿದಂತೆ ಬರೆದಿರುತ್ತಾರೆ. **ಹಿಂ
ಯಲ್ಲಿ ಬರೆದ ಲೇಖನದ ಭಾಷಾಂತರ**:—ನಿನ್ನೆ ದಿವಸ ಶ್ರದ್ಧಾಪೂರ್ವಕವಾ
ಸುತ್ತೂರು ಸ್ವಾಮೀಜಿಯವರ ದರ್ಶನಮಾಡಿದ್ದರಿಂದ ನನಗೆ ಬಹಳ ಸಂತೋ
ವಾಯಿತು. ಮತ್ತು ಈಪತ್ತಿನ ದಿವಸ ಆರತಿಯ ಸಮಯದಲ್ಲಿ ಭಾಗವಹಿಸು
ಸುಯೋಗವು ದೊರಕಿರುವುದರಿಂದ ನನಗೆ ಬಹಳ ಆತ್ಮಾನಂದವಾಗಿದೆ. ಇದು ನ
ಸೌಭಾಗ್ಯವೆಂದು ಮನಃಪೂರ್ವಕವಾಗಿ ತಿಳಿಯುತ್ತೇನೆ. ಸ್ವಾಮಿಜೀಯವರು ನಿ
ತತ್ವದ ಸಾಧನೆಯಲ್ಲಿ ನಿರತರಾಗಿದ್ದಾರೆ. ಪರೋಪಕಾರಕ್ಕಾಗಿ, ವಿದ್ಯಾದಾನಕ್ಕಾ
ತಮ್ಮ ತನುಮನಧನಗಳನ್ನು ನಿಸ್ವಾರ್ಥತೆಯಿಂದ ತ್ಯಾಗಮಾಡುತ್ತಿದ್ದಾರೆ. ಮತ
ಅವರ ಶರಣ ಸಂತತಿಯ ವಿದ್ಯಾರ್ಥಿಗಳಿಗೂ ಸಹ ವಿದ್ಯೆ ದೊರೆಯುತ್ತಿದೆ. ಅ
ಅಶನವಸತಿಗಳಲ್ಲದೆ, ಹೋಗಿ ಬರುವವರ ಹೊಣೆ ಸ್ವಾಮಿಜೀಯವರ ಮೇಲೆ ಇರುತ್ತ
ದೇಶದ ಸಲುವಾಗಿ ಇವರು ಮಾಡುತ್ತಿರುವ ಸೇವೆಯು ದೊಡ್ಡ ಸಂಪತ್ತಾಗಿರುತ್ತ
ಆತ್ಮದ (ಜೀವ, ಶಿವ) ನಿಜತತ್ವದ ವಿಕಾಸದ ಸಲುವಾಗಿ ಮಹಾಸ್ವಾಮಿಯವರು ಪ್ರ
ದಿವಸ ಒಂದು ಮಂತ್ರವನ್ನು ನಿತ್ಯನಿಯಮದಿಂದ ಐದು ಸಾವಿರ ಸಾರಿ ಬರೆಯುತ
ಇರುತ್ತಾರೆ. ಇದೂ ಕೂಡ ಸಾಧನದಲ್ಲಿ ಒಂದು ಅಂಗವಾಗಿದೆ.

ನನ್ನ ಭಕ್ತಿಪೂರ್ವಕವಾದ ವಂದನೆಗ

21-12-1960 **ರಾಜೇಂದ್ರ ಪ್ರಸಾದ್**

ಭಕ್ತಿಯ ಸಂಕೇತವಾಗಿ ಈ ಸಂಸ್ಥೆಯಲ್ಲಿ ನೆರವೇರುತ್ತಿರುವ ಜಯಂತಿ ಮಹೋ ತ್ಸವ ಸಮಾರಂಭದ ಇತಿಹಾಸದಲ್ಲಿ ಇದೊಂದು ಅದ್ವಿತೀಯ ಭವ್ಯಘಟನೆ. ಮಹಾ ಮಹಿಮರ ತಪಃಪ್ರಭಾವ ಜಗದ್ಗುರುಗಳ ಮಂತ್ರಶಕ್ತಿ ಮಹಾಸ್ವಾಮಿಗಳವರ ನಿಸ್ವಾರ್ಥ ಸೇವೆ ಧರ್ಮದ ಫಲವಾಗಿ ಉತ್ಸವವು ಇಷ್ಟು ವಿಜೃಂಭಣೆಯಿಂದ ನೆರವೇರುವಂತಾ ಯಿತು. ಭಾರತದ ಶ್ರೇಷ್ಠ ಅಧಿಪತಿಯಾದ ಬಾಬು ರಾಜೇಂದ್ರ ಪ್ರಸಾದರನ್ನು ಕರೆ ತಂದಿತು. ಪರಮಾತ್ಮನ ಕೃಪೆಯಿಲ್ಲದೆ ಜಗತ್ತಿನಲ್ಲಿ ಏನೊಂದೂ ನಡೆಯದು. ಲೋಕ ಹಿತಭಾವನೆ, ಭಕ್ತಿ ನಿಷ್ಠೆ ಶ್ರದ್ಧೆಗಳಿಂದ ಕೂಡಿ ಕರ್ತವ್ಯಪರಿಪಾಲನೆ ಮಾಡದೆ ಪರ ಮಾತ್ಮನ ಕೃಪೆಯೆಂದೂ ದೊರೆಯದು. ಅಂತೆಯೇ ಜಗದ್ಗುರುಗಳೀರ್ವರ ಆತ್ಮಶಕ್ತಿ ಗಳ ಪ್ರಭಾವದಿಂದ ಶ್ರೀ ಗುರುವಿನ ಜಯಂತಿ ಮಹೋತ್ಸವವು ನಿರೀಕ್ಷೆಗಿಂತ ಮಿಗಿ ಲಾದ ವೈಭವ ವೈಶಿಷ್ಟ್ಯಗಳೊಡನೆ ನೆರವೇರತೊಡಗಿದೆ.

ರಾಷ್ಟ್ರಪತಿಗಳು ಮಹಾಮಂಗಳಾರತಿಯನ್ನು ಸ್ವೀಕರಿಸಿ ದಯಮಾಡಿಸಿದ ಮೇಲೆ ಕಾರ್ಯಕ್ರಮಗಳು ಯಥಾವತ್ತಾಗಿ ಪ್ರಾರಂಭಗೊಂಡುವು. ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಶ್ರೀ ಎಸ್. ಎ. ನಿಕ್ಕಂರವರು ಭಾಷಣ ಮಾಡುತ್ತಾ ಭಾರತ ಧರ್ಮದ ಮತ್ತು ಧರ್ಮೋದ್ಧಾರಕರ ನೆಲೆವೀಡು. ಮಹಾನು ಭಾವರು ಈ ಪುಣ್ಯಭೂಮಿಯಲ್ಲಿ ಜನಿಸಿ ಜಗತ್ತಿಗೆ ಚಿರಶಾಂತಿ ಸುಖದ ಸಂದೇಶ ವನ್ನು ದಯಪಾಲಿಸಿದ್ದಾರೆ. ಆದುದರಿಂದಲೇ ಭಾರತಕ್ಕೆ ವಿಶ್ವಾದ್ಯಂತ ಮಾನ್ಯತೆ ಇಂದಿಗೂ ದೊರೆಯುತ್ತಿದೆ. ಆರ್ಥಿಕ ಸಂಪತ್ತಿನಿಂದ ಹಿಂದುಳಿದರೂ ಭಾರತೀಯರಿಗೆ ಸಂಪದ್ಯುತ ರಾಷ್ಟ್ರಗಳು ಗೌರವ ಸಲ್ಲಿಸುತ್ತವೆ. ಅದಕ್ಕೆ ಕಾರಣ ಜಗದ್ಗುರುಗಳವ ರಂತಹ ಮಹಾನುಭಾವರ ಉದಯ ಮತ್ತು ಜೀವನ ಕ್ರಮ. ಅದು ವಿಶ್ವದ ಎಲ್ಲ ಜನರಿಂದ ಅನುಕರಣೀಯ ಎಂದರು. ಹಿರಿಯ ಜಗದ್ಗುರುಗಳು ಮಂತ್ರ ಶಕ್ತಿಯಲ್ಲಿ ಅಪೂರ್ವ ಸಿದ್ಧಿ ಪಡೆದ ಮಹಾನುಭಾವರು. ಅವರಲ್ಲಿರುವ ಚಿತ್ತ ಸ್ಥೈರ್ಯ ಕಾರ್ಯ ನಿಷ್ಠೆ ನಮ್ಮನ್ನು ಅಚ್ಚರಿಗೊಳಿಸುವಂತಹುದು. ಅವರ ಕೃಪೆಯಿಂದಲೇ ಈ ಸಂಸ್ಥೆ ಯಲ್ಲಿ ಅಭ್ಯಾಸಮಾಡುತ್ತಿರುವ ಸಹಸ್ರಾರು ಮಂದಿ ಯುವಕರು ನಾಡಿನ ಶ್ರೇಷ್ಠ ಪ್ರಜೆಗಳೂ ರಾಜಕಾರಣಿಗಳೂ ರಾಷ್ಟ್ರೋಪಕಾರಿಗಳೂ ಆಗುತ್ತಿದ್ದಾರೆ. ಇಂತಹ ಶಿಷ್ಯ ಪರಂಪರೆಯ ಕೃತಜ್ಞತೆಯ ಪ್ರತೀಕವೇ ಈ ಜಯಂತಿ ಮಹೋತ್ಸವ. ಕೃತಜ್ಞತೆ ಎಲ್ಲಿ ಸಿದ್ಧಾಂತಿಗಳಿಗಿಂತಲೂ ಹಿರಿದಾದ ದರ್ಶನ. ಇದೊಂದು ಪ್ರವೃತ್ತಿ ನಮ್ಮಲ್ಲಿ ಬೆಳೆದರೆ ನಾವು ಧನ್ಯರು. ಇಲ್ಲಿನ ವಿದ್ಯಾರ್ಥಿವೃಂದ ಗುರುಹಿರಿಯರಲ್ಲಿ ಮಾತಾಪಿತೃ ಗಳಲ್ಲಿ ಕೃತಜ್ಞತಾ ಭಾವನೆಯನ್ನು ಬೆಳೆಸಿಕೊಂಡು ಬಂದು ತಮ್ಮ ಭವಿಷ್ಯ ಜೀವನ ವನ್ನು ಉನ್ನತಿಗೊಳಿಸಿಕೊಳ್ಳುವರೆಂದು ಆಶಿಸುತ್ತೇನೆಂದು ತಿಳಿಸಿದರು.

ಸಮಾರಂಭಕ್ಕೆ ಅಧ್ಯಕ್ಷರಾಗಿ ದಯಮಾಡಿಸಿದ ಶ್ರೀ ಕೆ. ಎಫ್. ಪಾಟೀಲ್

ರವರು ಮಾತನಾಡುತ್ತಾ, ಕನ್ನಡ ನಾಡಿನ ಶರಣರು ಅಖಿಲ ಮಾನವಕೋಟಿ
ಅಭ್ಯುದಯವನ್ನು ಸಾಧಿಸಲೆತ್ನಿಸಿದವರು. ಅವರ ತತ್ವಗಳು ಜೀವನಾದರ್ಶಗಳು
ಕಾಲಕ್ಕೂ ಸರ್ವ ಜನಾಂಗಕ್ಕೂ ಅನುಕರಣೀಯ. ಕನ್ನಡ ಜನತೆ ಒಂದು ರೀತಿ
ಶರಣಸಂತತಿಗೆ ಚಿರಋಣಿ. ಉದಾತ್ತ ತತ್ವದ ಬೆಳಕಿತ್ತ ಮಹಾನುಭಾವರಲ್ಲಿ
ಗೌರವಗಳನ್ನು ವ್ಯಕ್ತಪಡಿಸುವುದು ಮಾನವರ ಆದ್ಯ ಕರ್ತವ್ಯ. ನಾವು ಎಲ್ಲಿ
ಎಂತಾದರೂ ಇರಲಿ ಶರಣ ತತ್ವದ ದೀವಿಗೆ ಚಿರಂತನ ಬೆಳಗುವಂತೆ ಮಾಡಲು
ಸಬೇಕು. ಆ ತತ್ವದ ಅನುಸಂಧಾನದಲ್ಲಿ ಸಿದ್ಧಿ ಪಡೆದ ಜಗದ್ಗುರುಗಳವರು ವ
ಲೇಖನ ತಪಸ್ಸನ್ನಾಚರಿಸುತ್ತಾ ಭಕ್ತಕೋಟಿಯ ಉದ್ಧಾರಕ್ಕಾಗಿ ತಪಸ್ವಿನ
ಧಾರೆಯೆರೆಯುತ್ತಿದ್ದಾರೆ. ಅಂತೆಯೇ ಕಿರಿಯ ಜಗದ್ಗುರುಗಳವರು
ಆಶೀರ್ವಾದವನ್ನು ಹೊತ್ತು ಹತ್ತಾರು ಸಾರ್ವಜನಿಕ ಧರ್ಮಸಂಸ್ಥೆಗಳನ್ನು ಕಟ್ಟಿ
ಸೇವೆಯೆಸಗುತ್ತಿದ್ದಾರೆ. ನಮ್ಮ ದೇಶದ ಸಂಪತ್ತೆಂದೇ ನಾವೂ ಸಹ ಉಜ್ವಲವಾ
ಮಹಾಮಹಿಮರು ಇಲ್ಲಿ ಬೆಳಗಿ ತಪಸ್ಸನ್ನಾಚರಿಸಿದ್ದಾರೆ. ಅನೇಕ ಧರ್ಮಗ
ಗಳನ್ನು ರಚಿಸಿದ್ದಾರೆ. ಈ ಪೀಠದ ಕಾರ್ಯಕ್ರಮಗಳು ಕನ್ನಡ ನಾಡಿನಲ್ಲಿ
ಗೊಂಡಿವೆ. ಆದುದರಿಂದ ಹೆಚ್ಚು ಹೇಳಬೇಕಾದ ಅಗತ್ಯವಿಲ್ಲ. ಈ ಮಹತ್ಕಾರ್ಯ
ಭಾಗವಹಿಸುವುದು ನನಗೆ ಅತ್ಯಂತ ಸಂತೋಷವೆನಿಸಿದೆ. ಜಗದ್ಗುರುಗಳ
ಯಾವಾಗಲೆಲ್ಲಾ ಪ್ರತಿಹೇಳವೆ ಅವರ ದರ್ಶನ ಪಡೆಯುತ್ತಿದ್ದೇನೆ. ಉತ್ತಮ
ಗಳನ್ನು ನೋಡಿ ಅಲ್ಲಿನ ಮಹತ್ಕಾರ್ಯಗಳಲ್ಲಿ ಭಾಗವಹಿಸುವುದಕ್ಕಿಂತ ಮಹಾಭ
ಬೇರೆಯಿಲ್ಲವೆಂದು ನನ್ನ ಭಾವನೆ. ಈ ಸಮಾರಂಭದಲ್ಲಿ ಭಾಗವಹಿಸಿರುವ ತ
ರಿಗೂ ಪರಮಾತ್ಮನು ಸರ್ವಕ್ಷೇಮವನ್ನು ಕರುಣಿಸಲೆಂದು ಪ್ರಾರ್ಥಿಸಿ, ನನ್ನ ಕೃತ
ಯನ್ನು ಸಮರ್ಪಿಸುತ್ತೇನೆ. ಎಂದು ಶರಣತತ್ವದ ವಿಷಯದಲ್ಲಿ ವಿಚಾರಪೂರ್ಣ
ಭಾಷಣವನ್ನು ಮಾಡಿದರು.

ಮಹಾಮಂಗಳಾರತಿ ವಂದನಾರ್ಪಣೆಗಳೊಡನೆ ಸಾಂಸ್ಕೃತಿಕ ಕಾರ್ಯಕ್ರಮ
ಅತ್ಯಂತ ವಿಜೃಂಭಣೆಯಿಂದ ನೆರವೇರಿದುವು. ಅತಿಥಿಗಳು ಶ್ರೀಗಳವರ ಆಶೀವಾ
ವನ್ನು ಪಡೆದರು.

ತಾ॥ 20–12–60 ರಂದು ಮನರಂಜನ ಹಾಗೂ ಸಾಂಸ್ಕೃತಿಕ ಕಾ
ಕ್ರಮಗಳು ನಡೆದುವು.

ತಾ॥ 21-12-60 ರಂದು ಕಾಗಲವಾಡಿ ಮಠಾಧ್ಯಕ್ಷರಾದ ಶ್ರೀ ಶಿವ
ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಜಯಂತಿ ಮಹೋತ್ಸವವು ನೆರವೇರಿತು. ಪ್ರಜಾವ
ಪತ್ರಿಕೆಯ ಉಪಪ್ರಧಾನ ಸಂಪಾದಕರಾದ ಶ್ರೀ ಶ್ಯಾಮಣ್ಣನವರು ತಮ್ಮ ವಿ
ಪ್ರವಾಸವನ್ನು ಕುರಿತು ಹೃದಯಂಗಮವಾಗಿ ಚಿತ್ರಿಸಿದರು. ವಿದೇಶೀ ನಾಗರೀಕ



ಬಸವ ಜಯಂತೀಮಹೋತ್ಸವದಲ್ಲಿ ರಾಜ್ಯಪಾಲರಾದ ಶ್ರೀ ಮಂಗಳದಾಸ್ ಪಕ್ವಾಸ್
ರವರೊಡನೆ ಜಗದ್ಗುರುಗಳು ಮತ್ತು ಶ್ರೀ ಆರ್. ಆರ್. ದಿವಾಕರ್‌ರವರು



ಜಯಂತೀಮಹೋತ್ಸವದಲ್ಲಿ ವಿದ್ಯಾಸಚಿವ ಶ್ರೀ ಅಣ್ಣಾರಾಯರು ಮತ್ತು
ಹೈಕೋರ್ಟಿನ ನ್ಯಾಯಾಧೀಶರಾದ ಶ್ರೀ ಹೆಚ್. ಹೊಂಬೇಗೌಡರು

ನ್ಮ ನಾಗರೀಕತೆಗೂ ಇರುವ ಅಂತರವನ್ನು ಸಭೆಯ ಮುಂದಿಟ್ಟರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಶಿವರುದ್ರ ಸ್ವಾಮಿಗಳವರು ಮಾನವನ ಧರ್ಮದ ವಿಷಯದಲ್ಲಿ ವಿಚಾರ ಪೂರಿತ ಭಾಷಣ ಮಾಡಿದರು. ಯಥಾಪ್ರಕಾರ ಸಾಂಸ್ಕೃತಿಕ ಕಾರ್ಯಕ್ರಮಗಳು ನೆರವೇರಿದುವು. ಐದನೆ ದಿನವಾದ 22-12-60 ರಂದು ನಾಟಕಾದಿ ಸಾಂಸ್ಕೃತಿಕ ಕಾರ್ಯಕ್ರಮಗಳು ವಿಜೃಂಭಣೆಯಿಂದ ನೆರವೇರಿದುವು.

ಆರನೇ ದಿನ ಕಾರ್ಯಕ್ರಮಗಳು ತಾ|| 23-12-60 ರಂದು ಮೈಸೂರು ಡಿವಿಜನಲ್ ವಿದ್ಯಾಭ್ಯಾಸದ ಡೈರೆಕ್ಟರವರಾದ ಶ್ರೀ ಶ್ರೀರಂಗರಾಜು ಇವರ ಅಧ್ಯಕ್ಷತೆ ಯಲ್ಲಿ ಪ್ರಜಾವಾಣಿ ಪತ್ರಿಕಾ ಸಂಪಾದಕ ಮಂಡಲಿಯವರಾದ ಶ್ರೀ ಇ. ಆರ್. ಸೇತು ರಾಮ್‌ರವರು ಪ್ರಜಾಪ್ರಭುತ್ವ ಯುಗದಲ್ಲಿ ಪತ್ರಿಕೆಗಳ ಪಾತ್ರವನ್ನು ಕುರಿತು ಹೃದ ಯಂಗಮವಾಗಿ ಭಾಷಣ ಮಾಡಿದರು.

ಪ್ರಜಾಪ್ರಭುತ್ವದ ಯಶಸ್ಸಿಗೆ ಪತ್ರಿಕೆಗಳು ಹೇಗೆ ಕಾರಣವಾಗುತ್ತವೆಂದು ತಿಳಿಸಿ ದರು. ಶ್ರೀಮಾನ್ ಶ್ರೀ ಶ್ರೀರಂಗರಾಜುರವರು ನಮ್ಮ ದೇಶದಲ್ಲಿ ವಿದ್ಯಾಕ್ರಮದಲ್ಲಿ ಇಂದು ಕ್ರಾಂತಿಯುತ ಮಾರ್ಪಾಡುಗಳು ಆಗಬೇಕಾಗಿವೆ ಎಂದು ಸ್ವತಂತ್ರ ಭಾರತದ ಭವಿಷ್ಯ ನಿರ್ಮಾಣದಲ್ಲಿ ವಿದ್ಯಾಭ್ಯಾಸದಕಡೆಗೆ ಸಾರ್ವಜನಿಕರು ಹೆಚ್ಚು ಗಮನ ಕೊಡುವುದು ಅಗತ್ಯವೆಂದು ವಿದ್ಯಾಸುಧಾರಣೆಯ ವಿಷಯದಲ್ಲಿ ವಿಚಾರಪೂರಿತನಾದ ಭಾಷಣ ಮಾಡಿದರು.

ತಾ|| 24-12-60 ರಿಂದ ಮೈಸೂರು ಜಿಲ್ಲೆಯಲ್ಲಿರುವ ಜಗದ್ಗುರು ಶ್ರೀ ಶಿವ ರಾತ್ರೀಶ್ವರ ವಿದ್ಯಾರ್ಥಿನಿಲಯಗಳ ಎಲ್ಲಾ ವಿದ್ಯಾರ್ಥಿಗಳೂ ಒಂದು ಸೇರಿ ಸಮಾರಂಭ ವನ್ನು ವಿಜೃಂಭಣೆಗೊಳಿಸಿದರು. ಮೈಸೂರು ಡಿವಿಜನಲ್ ಕಮಿಷನರವರಾದ ಶ್ರೀ ಬಿ. ಬೀರಪ್ಪ ಐ. ಎ. ಎಸ್. ಇವರು ಅಧ್ಯಕ್ಷತೆ ವಹಿಸಿದ್ದರು. ಮೈಸೂರು ವಾರ್ತಾ ಇಲಾಖಾಧಿಕಾರಿಗಳಾದ ವಚನಶಾಸ್ತ್ರಾಚಾರ್ಯರೆನಿಸಿದ ಶ್ರೀ ಜೀರಿಗೆಕಟ್ಟೆ ಬಸಪ್ಪನವರು ಭಾಷಣಮಾಡುತ್ತ ಶರಣರು ಜೀವನದ ಸರ್ವಮುಖಗಳನ್ನು ಕುರಿತು ಹಿಂದೆಯೇ ವಿಚಾರಮಾಡಿದ್ದಾರೆ. ಯಾವುದೇ ರೀತಿಯ ಭಿನ್ನತೆಯನ್ನು ಮಾನವತೆ ಯಲ್ಲಿ ಕಾಣಬಾರದೆಂದು "ಇವನಾರವ ಇವನಾರವನೆಂದೆನಿಸದಿರಯ್ಯ ಇವನಮ್ಮವ ಇವನಮ್ಮವ ಎಂದೆನಿಸಯ್ಯ" ಎಂದು ಶರಣರು ಸಮಭಾವನೆಯ ಬೆಳೆಯನ್ನು ಜನತೆ ಯಲ್ಲಿ ಬಿತ್ತಿದ್ದಾರೆ. ಜನತೆಯ ಅಭ್ಯುದಯಕ್ಕೆ ಕಾಯಕವೆಂಬ ಮಹಾಮಂತ್ರವನ್ನು ಉಪದೇಶಿಸಿ ಜನತೆಯಲ್ಲಿ ಕಾಯಕವು ಒಂದು ಜೀವಂತ ಧರ್ಮವೆಂಬ ಭಾವನೆಯನ್ನು ಬೆಳೆಸಿದರು. ಅಂತಹ ಮಹಾನುಭಾವರ ತತ್ವಗಳು ನಿತ್ಯವೂ ಶಾಶ್ವತವೂ ಆಗುವಂತೆ ಮಹಾನುಭಾವರಾದ ಜಗದ್ಗುರುಗಳವರು [illegible] ಪ್ರಚಾರ ಸೇವೆಯನ್ನೆಸಗುತ್ತಿ

ದ್ದಾರೆ. ಹಿರಿಯ ಜಗದ್ಗುರುಗಳು ಆತ್ಮ ಸಾಕ್ಷಾತ್ಕಾರ ಸಾಧನದಲ್ಲಿ ನಿರತರಾ
ಲಕ್ಷೋಪಲಕ್ಷ ಮಂತ್ರಗಳನ್ನು ರಚಿಸಿದ್ದಾರೆ. ಕಿರಿಯ ಜಗದ್ಗುರುಗಳವರು ವಿದ್
ಮಂದಿರಗಳನ್ನು ರಚಿಸಿ ಸಹಸ್ರಾರು ಜನರ ಜೀವನವನ್ನು ಉನ್ನತಗೊಳಿಸುತ್ತಿದ್ದಾರ
ಈ ವೈಭವಕ್ಕೆಲ್ಲಾ ಕಾರಣಭೂತರಾದ ಮಹಾನುಭಾವರಾದ ಶ್ರೀ ಶಿವರಾತ್ರೀಶ್ವರ
ಜಯಂತಿ ಮಹೋತ್ಸವವನ್ನು ನೆರವೇರಿಸುವುದು ಶುಭೋದಯದ ಹೆಗ್ಗುರುತೆಂದ
ತಿಳಿಸುತ್ತಾ ಉದಾತ್ತ ವಿಚಾರಪೂರ್ಣವಾದ ಭಾಷಣಮಾಡಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಬೀರಪ್ಪನವರು ಸುಮಾರು ಇಪ್ಪತ್ತೈದು ವರ
ಗಳಿಂದ ಜಗದ್ಗುರುಗಳವರ ಪರಿಚಯವಿರುವುದನ್ನು ಅನೇಕ ವೇಳೆ ಅವರಿಂದ ಆಶೀ
ರ್ವಾದ ಪಡೆದಿರುವುದನ್ನು ತಿಳಿಸಿದರು. ಶ್ರೀಗಳವರು ನಡೆಸುತ್ತಿರುವ ಮಂತ್ರ ತ
ಸ್ಸನ್ನು ವಿದ್ಯಾದಾನ ಕಾರ್ಯಕ್ರಮಗಳನ್ನು ಮೊದಲಿನಿಂದಲೂ ಅರಿತು ಆ ಆನಂದದ
ತಾವು ಭಾಗಿಯಾಗಿರುವುದನ್ನು ತಿಳಿಸಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು
ಇಂತಹ ಜನೋಪಯುಕ್ತ ಕಾರ್ಯಗಳನ್ನೆಸಗುತ್ತ ಶ್ರೀ ಮಠವು ಸಂಸ್ಥಾನದ
ಆದರ್ಶ ಸಂಸ್ಥೆಯಾಗಿದೆ ಎಂದು ತಿಳಿಸಿದರು. ಮೂಲಗುರುಗಳ ಮಹಿಮೆಯಿಂ
ಇಲ್ಲಿ ಮಹತ್ಕಾರ್ಯಗಳು ನಡೆಯುತ್ತಿವೆ. ಅವರ ಅನುಗ್ರಹದಿಂದ ಈ ಸಂಸ್ಥೆ ಇನ್ನ
ಹೆಚ್ಚು ಅಧಿಕವಾಗಿ ಬೆಳೆಯಲೆಂದು ಕೀರ್ತಿಗಳಿಸಲೆಂದು ಹಾರೈಸಿದರು. ಜಿಲ್ಲೆಯ
ನಾನಾ ಕಡೆಗಳಿಂದ ಬಂದಿದ್ದ ವಿದ್ಯಾರ್ಥಿಗಳು ಕಾರ್ಯಕ್ರಮದಲ್ಲಿ ಭಾಗಿಗಳಾಗಿ ತಮ
ಕಲಾಶಕ್ತಿ ಪ್ರದರ್ಶನದೊಡನೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೆರವೇರಿಸಿದರು.

## ಮುಕ್ತಾಯ ಸಮಾರಂಭ

ಜಯಂತಿ ಮಹೋತ್ಸವದ ಮುಕ್ತಾಯ ಸಮಾರಂಭವು ಜಗದ್ಗುರು ಶ್ರೀ ಶಿ
ರಾತ್ರಿರಾಜೇಂದ್ರಮಹಾಸ್ವಾಮಿಗಳವರ ಸಮ್ಮುಖದಲ್ಲಿ ಸಂಸ್ಥಾನದ ವಿದ್ಯಾಸಚಿರಾ
ಶ್ರೀ ಅಣ್ಣಾರಾವ್ ಗಣಮುಖಿಯವರ ಅಧ್ಯಕ್ಷತೆಯಲ್ಲಿ ನೆರವೇರಿತು. ಹೈಕೋರ್ಟ
ನ್ಯಾಯಾಧೀಶರಾದ ಶ್ರೀ ಹೆಚ್. ಹೊಂಬೇಗೌಡರವರು ಮುಕ್ತಾಯ ಭಾಷಣ
ಮಾಡುತ್ತಾ ಜನತೆಯ ಜೀವನದಲ್ಲಿ ಧರ್ಮ ಶ್ರದ್ಧೆಗಳು ಬೆಳೆಯುವಂತೆ ಮಾಡಲ
ಮಠಗಳು ವಿಪುಲವಾಗಿ ಶ್ರಮಿಸಿವೆ. ಮಠಗಳು ಈ ದೃಷ್ಟಿಯಿಂದ ನಮ್ಮ ದೇಶ
ಸಂಪತ್ತೆನಿಸಿವೆ. ನಮ್ಮ ಸಂಸ್ಕೃತಿಯ ಸಂರಕ್ಷಕರೇ ಮಠಾಧಿಪತಿಗಳು "They ar
the Trustees of Indian culture" ಜಗದ್ಗುರು ಶ್ರೀ ಶಿವರಾತ್ರೀಶ್ವರ
ಆದೇಶದಂತೆ ಪೀಠಾಧಿಪತಿಗಳು ವಿದ್ಯಾಪ್ರಸಾರದಲ್ಲಿ ತೊಡಗಿ ದೇಶಕ್ಕೆ ಮಹದುಪಕಾ
ಮಾಡಿದ್ದಾರೆ. ನಾಡಿನ ಜನರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಈ ಸಮಾರಂಭದ
ಭಾಗವಹಿಸುವಂತಾದುದು ತಮ್ಮ ಪುಣ್ಯವೆಂದು ತಿಳಿಸಿದರು.

ಮುಕ್ತಾಯದ ಅಂಗವಾಗಿ ಉತ್ಸವ ಸಮಿತಿಯು ಜಗದ್ಗುರುಗಳವರಿಗೆ ಭಿನ್ನ ವತ್ತಳೆಯನ್ನು ಸಮರ್ಪಿಸಿತು.

## ಜಗದ್ಗುರು ಶ್ರೀ ಶಿವರಾತ್ರೀಶ್ವರ ವಿದ್ಯಾಮಂದಿರಗಳ ಹಿರಿಯ ಮತ್ತು ಇಂದಿನ ವಿದ್ಯಾರ್ಥಿಗಳು ಭಕ್ತಿಪೂರ್ವಕವಾಗಿ ಸಮರ್ಪಿಸಿದ ಬಿನ್ನವತ್ತಳೆ

ಜಗದ್ಗುರು ಪೂಜ್ಯಪಾದರೇ !

ಭಗವದನುಗ್ರಹವೂ ದೈವಸಂಕಲ್ಪವೂ ಇಲ್ಲದೆ ಮಹತ್ಕಾರ್ಯಗಳ ಸಾಧನೆ ಸಾಧ್ಯವಲ್ಲ. ಪರಾತ್ಪರ ವಸ್ತುವಿನಿಂದ ಆವಿರ್ಭವಿಸಿ ಭುವನದಲ್ಲಿ ಅವತರಿಸಿ ಅನಂತ ಜೀವರಾಶಿಗಳ ಭಾಗ್ಯೋದಯಕ್ಕೆ ಕಾರಣರಾದ ಮಹಾನುಭಾವರಾದ ಜಗದ್ಗುರು ಶ್ರೀ ಶಿವರಾತ್ರೀಶ್ವರರು ಹತ್ತು ಶತಮಾನಗಳ ಹಿಂದೆ ಪವಿತ್ರ ಕಪಿಲಾ ತೀರದಲ್ಲಿ ದಿವ್ಯವಾದ ವೀರಸಿಂಹಾಸನ ಧರ್ಮಪೀಠವನ್ನು ಸಂಸ್ಥಾಪಿಸಿ ಹರಸಿದರು. ಆ ವೀರ ಸಿಂಹಾಸನವನ್ನು ಇಲ್ಲಿಯವರೆಗೆ ಅನೇಕ ಪುಣ್ಯ ಪ್ರಭಾವಯುತರಾದ ಗುರುವರೇಣ್ಯರು ಅಲಂಕರಿಸಿ ಅಪಾರ ಲೋಕ ಕಲ್ಯಾಣವೆಸಗುತ್ತಾ ಬಂದಿರುವರು. ತಮ್ಮ ಪೀಠಾಧೀಶ್ವರರು ಸ್ವತಃ ಕವಿಗಳಾಗಿ ದಾರ್ಶನಿಕರಾಗಿ ಸಾಹಿತ್ಯ ಸೇವೆ ಧರ್ಮಸೇವೆಯೆಸಗುತ್ತಾ ಬಂದು ಜಾಗೃತ ಪ್ರಪಂಚಕ್ಕೆ ಸಾಹಿತ್ಯರೂಪವಲ್ಲಿ ತತ್ವದರ್ಶನದ ದಾರಿಯಲ್ಲಿ ಅಮೂಲ್ಯ ಕಾಣಿಕೆಗಳನ್ನರ್ಪಿಸಿದ್ದಾರೆ. ಮೂಲಪುರುಷರು ಹೊತ್ತಿಸಿದ ಲೋಕಾಭ್ಯುದಯದ ನಂದಾದೀವಿಗೆಯನ್ನು ವಿಶ್ವಕ್ಕೇ ಬೆಳಕು ನೀಡುವಂತೆ ತಾವು ಪ್ರಜ್ವಲಗೊಳಿಸುತ್ತಿರುವಿರಿ. ಇಂದಿನ ನಮ್ಮ ವೈಭವಾನಂದಗಳಿಗೆ ಕಾರಣರಾದ ಮೂಲಪೀಠಾಚಾರ್ಯರ ಜಯಂತೀ ಮಹೋತ್ಸವ ಸಂದರ್ಭದಲ್ಲಿ ಅವರ ಅನುಗ್ರಹಾಶೀರ್ವಾದ ಬಲದಿಂದ ಅಭ್ಯುದಯದ ಹಾದಿಯನ್ನು ಕಂಡುಕೊಂಡ ನಾವು ಇಂದು ಈ ಮೂಲಕ ನಮ್ಮ ಭಕ್ತಿ ಪೂರ್ವಕ ಕೃತಜ್ಞತೆಯನ್ನು ಸಮರ್ಪಿಸಲು ಆಶಿಸುತ್ತೇವೆ.

ಮಹಾನುಭಾವರೇ !

ಹಿರಿಯ ಗುರುಗಳವರು ನಮ್ಮ ಸುತ್ತೂರು ವೀರಸಿಂಹಾಸನವು ಆರ್ಥಿಕ ಆಂದೋಳನದ ಸುಳಿಗೆ ಸಿಕ್ಕಿದಾಗ ನಿಷ್ಕಾಮಂತ ಕರ್ಮಯೋಗ ಶೀಲರಾಗಿ ಶ್ರಮಿಸಿ ಕಾಯಕದ ಮಹಿಮೆಯಿಂದ ಶ್ರೀಮಠದ ಭವ್ಯತೆಯನ್ನು ಸಂರಕ್ಷಿಸಿದರು. ಶ್ರಮಿಸಿ ಗಳಿಸಿದ ಬಾಹ್ಯ ಸಂಪತ್ತು ಆಂತರ ಆತ್ಮಶಕ್ತಿ ಸಂಪತ್ತಿಗೆ ಕಾರಣವಾಗಲೆಂದು ಹರಸಿದುದರ ಫಲವಾಗಿ ತಮ್ಮಭೀಷ್ಟ ಕರ್ಮಯೋಗವು ಶಿವಯೋಗದ ಸ್ವರೂಪತಾಳಿ, ಸಂಸ್ಕೃತ ಪಾಠಶಾಲೆ, ಎರಡು ಸಹಸ್ರ ಜನರಿಗೆ ಉಚಿತ ಅಶನ ವಸತಿಗಳನ್ನು ನೀಡುವ ಸುಮಾರು ಹನ್ನೆರಡು ವಿದ್ಯಾರ್ಥಿ ನಿಲಯಗಳು, ಎರಡು ಹೈಸ್ಕೂಲುಗಳು, ಹೆಣ್ಣು

ಮಕ್ಕಳು ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕವಾದ ಅಧ್ಯಾಪಕರ ಮೂಲಶಿಕ್ಷಣ ವಿದ್ಯಾ
ಪೀಠಗಳು, ಇತ್ಯಾದಿ ನಾನಾವಿಧ ಸಂಸ್ಥೆಗಳು ಸ್ಥಾಪನೆಯಾಗಲು ಕಾರಣವಾಯಿತು.
ಹಿರಿಯ ಗುರುಗಳಾದರೋ ಹಗಲಿರುಳು ಶ್ರೀ ಶಿವಪಂಚಾಕ್ಷರೀ ಮಂತ್ರ ತಪಸ್ಸಿನಲ್ಲಿ
ನಿರತರಾಗಿ ಕೋಟ್ಯಾನುಕೋಟಿ ಮಂತ್ರಗಳನ್ನು ಬರೆದು ಮಂತ್ರಶಕ್ತಿಯನ್ನು ಅವರ
ಚರಣಕಮಲದಾಶ್ರಯವನ್ನು ಪಡೆಯುತ್ತಿರುವ ಎರಡು ಸಹಸ್ರ ವಿದ್ಯಾರ್ಥಿಗಳ ಅಭ್ಯು
ದಯಕ್ಕಾಗಿ ಧಾರೆಯೆರೆತ್ತಿದ್ದಾರೆ.

ಯೋಗೀಂದ್ರರೇ

ಜಗದ್ಗುರು ವಿದ್ಯಾಪೀಠದ ಆಶ್ರಯದಲ್ಲಿ ಯಾವ ಜಾತಿಮತಭೇದವಿಲ್ಲದೆ ಪ್ರಾಂತ್ಯ
ಭಿನ್ನವಿಲ್ಲದೆ ಅಖಂಡ ಕರ್ನಾಟಕ, ನೀಲಗಿರಿ ಕೊಯಮುತ್ತೂರು, ಸೇಲಂ, ಆಂಧ್ರ
ದೇಶ ಮುಂತಾದ ಕಡೆಗಳಿಂದ ಬಂದು ಪ್ರತಿವರ್ಷವೂ ಎರಡು ಸಹಸ್ರ ಮಂದಿ ವಿದ್ಯಾ
ಸಂಪತ್ತನ್ನು ಆರ್ಜಿಸುತ್ತಿದ್ದಾರೆ. ತಮ್ಮ ಅನುಗ್ರಹದಿಂದ ನಮ್ಮಲ್ಲಿ ಇದುವರೆಗೆ ಹತ್ತು
ಸಹಸ್ರಕ್ಕೂ ಮಿಗಿಲಾಗಿ ಆಶ್ರಯ ಪಡೆದು ವಿದ್ಯಾರ್ಜನೆಮಾಡಿ ಜೀವನರಂಗಕ್ಕಿಳಿದು
ದೇಶದ ನಾನಾ ಕ್ಷೇತ್ರಗಳಲ್ಲಿ ಉನ್ನತೋನ್ನತ ಸ್ಥಾನಮಾನಗಳನ್ನು ಗಳಿಸಿಕೊಂಡು
ಗುರುಸ್ಮರಣೆಯಿಂದ ಜೀವನದಲ್ಲಿ ಭವ್ಯತೆಯನ್ನು ಸಾಧಿಸುತ್ತಿದ್ದಾರೆ. ಸಾಹಿತಿಗಳೂ,
ವಾಗ್ಮಿಗಳೂ ರಾಜಕಾರಣಿಗಳೂ ಪ್ರಚಲಿತರಾಗಿ ರಾಷ್ಟ್ರಕ್ಕೇ ತಮ್ಮ ಕಾಣಿಕೆಯನ್ನು
ನಾನಾಮುಖವಾಗಿ ಸಮರ್ಪಿಸುತ್ತಿದ್ದಾರೆ. ಈ ಎಲ್ಲ ವೈಭವಕ್ಕೆ ಕಾರಣರೂಪರಾದ
ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿವಯೋಗೀಂದ್ರರ ಜಯಂತಿಯನ್ನು ನಮ್ಮ ಮನೆಯ
ಆನಂದದ ಹಬ್ಬವಾಗಿ ನಾವು ಆಚರಿಸುತ್ತಿದ್ದರೂ ಸಹ ನಮ್ಮ ಮಾತೃಸ್ಥಾನವೆನಿಸಿದ
ಈ ಕ್ಷೇತ್ರದಲ್ಲಿ ಒಂದುಗೂಡಿ ಹಾಡಿ ನಲಿಯುವ ಈ ಸದವಕಾಶ ನಮ್ಮ ಭಾಗ್ಯದ ಪರಿ
ಣಾಮವಾಗಿ ನಮಗೆ ದೊರೆಯುತ್ತಿದೆ.

ಶಿವಯೋಗಶೀಲರೇ !

ಗುರುವನುಗ್ರಹಕ್ಕೆ ಪಾತ್ರರಾದ ವಿದ್ಯಾರ್ಥಿ ವೃಂದದವರು ನೆರವೇರಿಸುತ್ತಿರುವ
ಈ ಜಯಂತೀ ಮಹೋತ್ಸವವು ಅತ್ಯಂತ ವಿಜೃಂಭಣೆಯಿಂದ ನಡೆಯುತ್ತಾ ಜನರ
ಆತ್ಮವಿಕಾಸಕ್ಕೆ, ಜ್ಞಾನಪ್ರಕಾಶಕ್ಕೆ, ಮನೋವಿಲಾಸಕ್ಕೆ ಸಾಧನವಾಗುವ ಎಲ್ಲ
ಸಾಂಸ್ಕೃತಿಕ ಕಾರ್ಯಕ್ರಮಗಳಿಂದ ಕೂಡಿ ಮೈಸೂರು ನಗರದಲ್ಲಿ ಯುವಜನರ ಮಹಾ
ಜಾತ್ರೆಯಾಗಿ ಪರಿಣಮಿಸುತ್ತಿದೆ. ದೇಶವಿದೇಶಗಳಿಂದ ವಿದ್ವಾಂಸರೂ, ಕಲಾವಿದರೂ
ಈ ಸಮಾರಂಭದಲ್ಲಿ ಭಾಗವಹಿಸಿ ನಮಗೆ ಉತ್ಸಾಹ ಧಾರೆಯೆರೆಯುತ್ತಿದ್ದಾರೆ. ಈ
ಸಮಾರಂಭವು ರಾಷ್ಟ್ರೀಯ ಸಮಾರಂಭವಾಗಿ ಶಾಶ್ವತವಾಗಿ ನಡೆಯುವಂತೆ ಏರ್ಪಡಿಸ
ಬೇಕೆಂಬ ಹಂಬಲ ನಮಗಿದೆ. ಗುರುಕೃಪೆಯೊದಗಿದರೆ ಯಾವುದು ತಾನೇ ಅಸಾಧ್ಯ

ಮ್ಮ ರಾಜ್ಯದ ಅನೇಕ ಮಂದಿ ಮಂತ್ರಿಗಳು ಈ ಸಮಾರಂಭದಲ್ಲಿ ಭಾಗವಹಿಸಿ ನಮಗೆ ಪ್ರೋತ್ಸಾಹ ನೀಡಿದ್ದಾರೆ. ಈ ವರ್ಷದ ಸಮಾರಂಭಕ್ಕೆ ರಾಷ್ಟ್ರಪತಿ ಬಾಬುರಾಜೇಂದ್ರ ಪ್ರಸಾದ್‌ರವರೂ, ಮೈಸೂರಿನ ರಾಜ್ಯಪಾಲರಾದ ಶ್ರೀಮನ್ಮಹಾರಾಜರವರೂ, ಭರತ ರದ ಮಹಾರಾಜರೇ ಮುಂತಾದ ಮಹಾನುಭಾವರು ಆಗಮಿಸಿ ತಮ್ಮ ಆನಂದವನ್ನು ಕ್ತಪಡಿಸಿದ್ದಾರೆ. ಈ ವರ್ಷದ ಜಯಂತೀ ಮಹೋತ್ಸವದ ಮುಕ್ತಾಯ ಸಮಾಭವು ಸಂಸ್ಥಾನದ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶರಾದ ಶ್ರೀ ಹೊಂಬೇಗೌಡರ ಅಧ್ಯಕ್ಷತೆಯಲ್ಲಿ ವಿದ್ಯಾಸಚಿವರಾದ ಶ್ರೀ ಅಣ್ಣಾರಾವ್ ಗಣಮುಖಿಯವರ ಸಮ್ಮುಖದಲ್ಲಿ ನಡೆಯುತ್ತಿರುವುದು ನಮಗೆ ಅಪಾರವಾದ ಸಂತೋಷವನ್ನುಂಟು ಮಾಡಿದೆ. ಈ ಸಂದರ್ಭದಲ್ಲಿ ಉತ್ಸವ ಸಮಿತಿಯ ಪರವಾಗಿ ಜಗದ್ಗುರು ಪೂಜ್ಯಪಾದರವರಿಗೆ ಭಕ್ತಿಪೂರ್ವಕವಾದ ನಮ್ಮ ಕೃತಜ್ಞತೆಗಳನ್ನು ಸಮರ್ಪಿಸಬಯಸುತ್ತೇವೆ. ನಮ್ಮ ಉತ್ಸವದಲ್ಲಿ ಭಾಗಿಗಳಾದ ಮಹನೀಯರಿಗೂ ಈ ಉತ್ಸವದ ಯಶಸ್ಸಿಗೆ ಸರ್ವತೋಮುಖ ನೆರವು ನೀಡಿದ ಮಹಾ ಜನತೆಗೂ ಸಹ ಶ್ರೀ ಗುರುವು ಸರ್ವಸನ್ಮಂಗಳವನ್ನುಂಟುಮಾಡಲೆಂದು ಪ್ರಾರ್ಥಿಸುತ್ತೇವೆ.

ಇತಿ ತಮ್ಮ

**ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸವ ಸಮಿತಿ**

ಅಧ್ಯಕ್ಷತೆ ವಹಿಸಿದ್ದ ಶ್ರೀ ಅಣ್ಣಾರಾಯರು ಸ್ವತಂತ್ರರಾಷ್ಟ್ರದಲ್ಲಿ ಸುಖೀರಾಜ್ಯ ಸ್ಥಾಪನೆಮಾಡಲು ಯತ್ನಿಸುತ್ತಿರುವಾಗ ಧರ್ಮದ ಪುನರುಜ್ಜೀವನವೇ ಆಗಬೇಕಾಗಿದೆ. ಮಠಗಳು ಮತ್ತು ಮಠಾಧಿಪತಿಗಳ ಮೇಲೆ ಸರ್ಕಾರಕ್ಕಿರುವಷ್ಟೇ ಹೊಣೆ ಇರುತ್ತದೆ. ಈ ಹೊಣೆಯನ್ನು ಅತ್ಯಂತ ಹೆಮ್ಮೆಯಿಂದ ಸುತ್ತೂರು ಶ್ರೀ ಮಠವು ನೆರವೇರಿಸುತ್ತಿದೆ. ಇಲ್ಲಿ ನಡೆಯುತ್ತಿರುವ ವಿದ್ಯಾದಾನ ಅನ್ನದಾನಗಳು ಪ್ರಶಂಸನೀಯವಾಗಿವೆ. ಜನಾಭಿಮಾನದಿಂದ ಗುರುಗಳು ನೆರವೇರಿಸುತ್ತಿರುವ ಕಾರ್ಯಕ್ರಮದಲ್ಲಿ ಸಾರ್ವಜನಿಕರೂ ಸರ್ಕಾರವೂ ನೆರವಾಗುವುದವಶ್ಯಕ. ಇಲ್ಲಿ ಆಶ್ರಯ ಪಡೆದ ವಿದ್ಯಾರ್ಥಿಗಳು ನಾಡಿನ ಉತ್ತಮ ಪ್ರಜೆಗಳಾಗಬೇಕು. ವಿದ್ಯಾರ್ಥಿಗಳಲ್ಲಿ ಬುದ್ಧಿಶಕ್ತಿ ಬೆಳೆಯಬೇಕು. ಅದಕ್ಕಿಂತಲೂ ಹೆಚ್ಚಾಗಿ ನೈತಿಕ ಶಕ್ತಿ ಬೆಳೆಯಬೇಕು. ಅದನ್ನು ಬೆಳಸಲು ಸಂಸ್ಥೆಗಳು ಉತ್ತಮ ಸ್ಥಾನಗಳು ಎಂದು ತಿಳಿಸುತ್ತಾ ಜಗದ್ಗುರುಗಳವರ ಸೇವೆಯನ್ನು ಪ್ರಶಂಸಿಸಿ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿದರು. ಉದಾತ್ತ ತತ್ವಪೂರ್ಣವಾದ ಸಾಂಸ್ಕೃತಿಕ ಚಟುವಟಿಕೆಗಳು ಮಹಾಮಂಗಳಾರತಿಯೊಂದಿಗೆ ಜಯಂತೀ ಮಹೋತ್ಸವವು ಮುಕ್ತಾಯಗೊಂಡಿತು.

---

# ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸ
## ಸಪ್ತಾಹ

## 1962

ಮಾನವ, ಜಗತ್ತಿನ ವ್ಯಾಪಾರದಲ್ಲಿ ನಿಮಿತ್ತಮಾತ್ರ, ಸೂತ್ರದ ಬೊಂಬೆ ಇದ್ದಂ ಪರಮಾತ್ಮನು ತನ್ನ ಕೆಲಸವನ್ನು ತಾನೇ ಮಾಡಿಸಿಕೊಳ್ಳುತ್ತಾನೆ. ಅಂತೆ ಜಗದ್ಗುರುವಿನ ಜಯಂತೀ ಮಹೋತ್ಸವ ಸಪ್ತಾಹ ಹಿಂದಿನಂತೆ ಇಂದೂ ನಡೆಯು ಏರ್ಪಾಡಾಯಿತು. ಈ ಮಹೋತ್ಸವದ ಆಯವ್ಯಯಗಳಿಗೆ ಕಾರ್ಯಕ್ರಮಗ ನಿರ್ಧಾರಕ್ಕೆ ಯಾವೊಂದು ಪೂರ್ವೋಚಿತ ಯೋಜನೆಗಳನ್ನೂ ಸಿದ್ಧತೆಗಳನ್ನೂ ಮಾ ಕೊಳ್ಳುವ ಹವ್ಯಾಸ ಇಲ್ಲಿಲ್ಲ. ಎಲ್ಲರ ಕರ್ತವ್ಯ ಎಲ್ಲರೂ ಕೂಡಿ ತನ್ನದೆಂದು ನಡೆಸು ಸೇವೆ. ಯಾವ ಮಹಾನುಭಾವರಾದ ಜಗದ್ಗುರುವರೇಣ್ಯರ ಅನುಗ್ರಹ ಪಾತ್ರವಾ ಭಕ್ತವೃಂದವಿರುವುದೋ ಅದು ತಾನಾಗಿ ಮುಂದೆ ಬರುತ್ತದೆ. ಅಂತೆಯೇ ಈ ವರ್ಷ ಸಮಾರಂಭ ಏರ್ಪಟ್ಟುದು.

ಗುರುಕರುಣೆಯಿಂದ ಭಕ್ತರ ಅಭಿಮಾನಿಗಳ ಅಂತಃಶಕ್ತಿ ಮನೋಭಾವನೆಗ ವೃದ್ಧಿಗೊಂಡಂತೆ ಸಮಾರಂಭದ ಬಾಹ್ಯ ಏರ್ಪಾಡುಗಳು ಹೆಚ್ಚು ವಿಜೃಂಭಣೆಗೊ ಲಾರಂಭಿಸಿದುವು. ಈ ವರ್ಷದ ಜಯಂತೀ ಮಹೋತ್ಸವದ ವೈಶಿಷ್ಟ್ಯಗಳೆಂದ ಮೈಸೂರಿನ ರಾಜ್ಯಪಾಲರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂ ಒಡೆಯರ್ ಇವರು ಮುಕ್ತಾಯ ಸಮಾರಂಭಕ್ಕೆ ದಯಮಾಡಿಸಿದ್ದು. ವ್ಯವಸ್ಥೆಗಳ ನಾಟಕಗಳ ಸ್ಪರ್ಧೆಯನ್ನೇರ್ಪಡಿಸಿದ್ದು. ಕಾರ್ಯಕ್ರಮಗಳ ಚಲನ ಚಿತ್ರೀಕರ ಇತ್ಯಾದಿ ಹಲವಾರು ಹೊಸ ಏರ್ಪಾಡುಗಳಿಂದ ಸಮಾರಂಭವು ಅಭಿಮಾನಿಗಳ ಆಶ ಕ್ಕಿಂತ ಹೆಚ್ಚು ಯಶಸ್ವಿಯಾದುವು. ಈ ಸಮಾರಂಭವು ದಿನ ದಿನಕ್ಕೆ ಅನಾದಿ ಕಾಲ ಸಾಂಸ್ಕೃತಿಕ ಪರಂಪರೆ ಪುನರ್‌ಸ್ಮರಣೆ ತರುವಂತೆ ಅಂದವಾಗಿ ಆನಂದಮಯವಾ ಜರುಗಲಾರಂಭಿಸಿದುವು.

ಜಗದ್ಗುರು ಶ್ರೀ ಶಿವರಾತ್ರೀಶ್ವರ ಅನುಭವಮಂಟಪದಲ್ಲಿ ತಾ॥ 7-1-196 ರಿಂದ 13-1-1962 ರ ವರೆಗೆ ನಿತ್ಯವೂ ನೂತನ ಆಕರ್ಷಣೆಗಳಿಂದ ಸಮಾರಂ ಜರುಗಿತು. ಶ್ರೀಮಠದ ಐತಿಹ್ಯಗಳು ಪುಣ್ಯಪುರುಷರ ಜೀವನ ಚಿತ್ರಗಳು ಮಾನವ ಭಾಗ್ಯೋದಯದ ಸಾಧನಮಾರ್ಗಗಳು ಆಗಂತುಕರ ಮನಸ್ಸಿನ ಮೇಲೆ ಪರಿಣಾ ಕಾರಿಯಾಗುವಂತೆ ವಿವರಿಸುವ ಭಾವಪೂರ್ಣ ಸಂದೇಶವನ್ನಿತ್ತ ವಿದ್ವನ್ಮಣಿಗಳೂ ಕಲ

ದವರೂ ತತ್ವಜ್ಞರೂ ಸಮಾರಂಭದಲ್ಲಿ ಸಮಾವೇಶಗೊಂಡಿದ್ದರು. ದೇಶದ ನಾನಾ ತೆಗಳಿಂದ ಅವರನ್ನು ಸಮಾರಂಭವು ಆಕರ್ಷಿಸಿತು. ಎಲ್ಲವೂ ಯೋಗೀಂದ್ರರ ಕೃಪೆ ಹಿಮೆ ಮೇಲಾಗಿ ಜಗದ್ಗುರು ಶ್ರೀ ಶಿವರಾತ್ರಿಮಹಾಸ್ವಾಮಿಗಳವರ ಮಂತ್ರಯಜ್ಞದ ಲ. ಜಗದ್ಗುರು ಶ್ರೀ ಶಿವರಾತ್ರಿರಾಜೇಂದ್ರ ಸ್ವಾಮಿಗಳವರ ಕಾರ್ಯನಿಷ್ಠೆಯ ಪರಿ ಣಾಮ. ಸಮಾರಂಭದಲ್ಲಿ ಪುಣ್ಯಭಾಗಿಯಾದವರಿಗೆ ಈ ವಿವರಣೆ ಅಪ್ರಾಸಂಗಿಕ. ದರೆ ಕಾಲಚಕ್ರದಲ್ಲಿ ಇಂದಿನ ಆನಂದ ಎಂದೆಂದಿಗೂ ಉಳಿದಿರುವಂತೆ ಮಾಡುವ ಯತ್ನವೇ ಈ ಕೃತಿರೂಪ. ಇನ್ನು ಸಮಾರಂಭ ವೈಭವವನ್ನು ಅರಿಯಲೆತ್ನಿಸುವ.

## ಧ್ವಜಾರೋಹಣ ಸಮಾರಂಭ

ಉತ್ಸವ ಸಮಾರಂಭದ ಯಶಸ್ಸನ್ನು ಹಾರೈಸಿ ಜಿಟ್ಟದಪುರದ ಮಠಾಧ್ಯಕ್ಷರಾದ ಶ್ರೀ ಚನ್ನವೀರದೇಶಿಕೇಂದ್ರ ಮಹಾಸ್ವಾಮಿಗಳವರು ಷಟ್‌ಸ್ಥಲ ಧ್ವಜಾರೋಹಣವನ್ನು ಶ್ರೀ ಕೃಷ್ಣಮೂರ್ತಿರಾಯರು ರಾಷ್ಟ್ರಧ್ವಜಾರೋಹಣವನ್ನು ನೆರವೇರಿಸಿ ಸಮಾರಂಭಕ್ಕೆ ಯಶಸ್ಸನ್ನು ಹಾರೈಸಿದರು.

## ಪ್ರಾರಂಭೋತ್ಸವ ಸಮಾರಂಭ

ತಾ॥ 7-1-62 ರಂದು ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರ ದಿವ್ಯ ಸಮ್ಮುಖದಲ್ಲಿ ಜಯಂತಿಯ ಮಹೋತ್ಸವದ ಪ್ರಾರಂಭೋತ್ಸವವು ಸಂಸ್ಥಾನದ ಶ್ರೇಷ್ಠ ನ್ಯಾಯಾಲಯದ ಶ್ರೇಷ್ಠನ್ಯಾಯಾಧೀಶರಾದ ಶ್ರೀಮಾನ್ ನಿಟ್ಟೂರು ಶ್ರೀನಿವಾಸ ರಾಯರಿಂದ ನೆರವೇರಿಸಲ್ಪಟ್ಟಿತು. ಮಾಜಿ ವಿದ್ಯಾಸಚಿವರಾದ ಶ್ರೀಮಾನ್ ಎ.ಜಿ. ರಾಮ ಚಂದ್ರರಾಯರು ಧರ್ಮದ ವಿಷಯದಲ್ಲಿ ವಿಚಾರಪೂರ್ಣ ಭಾಷಣಮಾಡಿದರು. ಸಾಂಸ್ಕೃತಿಕವಾಗಿ ಸಂಗೀತ ನಾಟಕಾದಿ ಮನರಂಜಕ ಕಾರ್ಯಕ್ರಮಗಳು ನೆರವೇರಿ ದುವು.

## ಸಾವಿರ ಸಂವತ್ಸರದ ಹಿಂದೆ—ಇಂದು

ಉತ್ಸವ ಸಮಿತಿಯ ಪರವಾಗಿ ಶ್ರೀ ಹೆಚ್. ಗಂಗಾಧರ್ರವರು ಅತಿಥಿಗಳಿಗೆ ಸ್ವಾಗತ ನೀಡುತ್ತಾ, ಉತ್ಸವ ಮತ್ತು ಸಂಸ್ಥೆಯ ಸ್ಥೂಲಪರಿಚಯವನ್ನು ಸಭೆ ಮುಂದಿ ಟ್ಟರು. ಶ್ರೀಯುತರು ಸ್ವಾಗತ ಭಾಷಣಮಾಡುತ್ತಾ "ಸಾವಿರ ಸಂವತ್ಸರಗಳ ಹಿಂದೆ ಲೋಕಕಲ್ಯಾಣಕ್ಕೆಂದು ಅವತರಿಸಿ ಮಾನವತೆಯ ಅಭ್ಯುದಯಕ್ಕೆ ಅನುಗ್ರಹದಅಮೃತ ಧಾರೆಯೆರೆದ ಜಗದ್ಗುರು ಶ್ರೀ ಶಿವರಾತ್ರೀಶ್ವರರ ಜಯಂತಿ ಮಹೋತ್ಸವ ಸಮಾರಂಭ ದಲ್ಲಿ ನಾವು ಇಂದು ಸಮಾವೇಶಗೊಂಡಿದ್ದೇವೆ.

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ |
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ||

ಎಂಬ ಗೀತೋಕ್ತಿಯಂತೆ ಮಾನವತೆಯು ಅಜ್ಞಾನದ ಅಂಧಕಾರದಲ್ಲಿ ಬ
ವಾಗ ಭಗವದಂಶವೇ ಮಾನವತೆಯ ರೂಪವೆತ್ತಿ ಲೋಕಕ್ಕೆ ಸಂರಕ್ಷಣೆಯ ಸನ್ಮಾ
ವನ್ನು ತೋರಿಸಿದ ಮಹಾನುಭಾವರ ಮಹಿಮೆಗಳಿಂದಲೇ ಭಾರತದ ಇತಿಹಾಸ
ತುಂಬಿ ತುಳುಕುತ್ತಿದೆ. ಈ ಪ್ರಾಂತ್ಯದಲ್ಲಿ ಗಂಗರು, ಚೋಳರು ಇತ್ಯಾದಿ ಅರಸ
ರಾಜ್ಯಮದದ ಕಲಹದಲ್ಲಿ ನಿರತರಾಗಿ ಜನಜೀವನದಲ್ಲಿ ಅಶಾಂತಿ, ಕಲಹಗಳು ತುಂ
ದಾಗ ಶಾಂತಿ ಸಮೃದ್ಧಿಯ ಸಂದೇಶವನ್ನು ನೀಡುವುದಕ್ಕಾಗಿ ಅವತರಿಸಿ ಬಂ
ಮಹಾನುಭಾವರ ಪುಣ್ಯಸ್ಮರಣೆ ಮಾಡುವುದು ಮಾನವತೆಯ ಆದ್ಯ ಕರ್ತವ
ಅಂತೆಯೇ ಈ ಸಂಸ್ಥೆಯಲ್ಲಿ ಬೆಳೆದು ಬಾಳುತ್ತಿರುವ ಸಹಸ್ರಾರು ಮಂದಿ ವಿದ್ಯಾರ್ಥಿ
ಪರವಾಗಿ ಜಗದ್ಗುರು ಶ್ರೀ ಶಿವರಾತ್ರೀಶ್ವರರ ದಿವ್ಯ ಜಯಂತಿ ಮಹೋತ್ಸವನ
ನಡೆಸುತ್ತಿದ್ದೇವೆ. ಯಾವ ಮಹಾನುಭಾವರಿಂದ ಚೋಳ ಚಕ್ರಾಧೀಶ್ವರನಾದ ಇಮ್ಮ
ರಾಜೇಂದ್ರ ಚೋಳನ ಪ್ರಾರ್ಥನೆಯಂತೆ ಪವಿತ್ರ ಕಪಿಲಾತೀರದಲ್ಲಿ ಸಂಸ್ಥಾಪಿತವಾ
ಸುತ್ತೂರು ವೀರಸಿಂಹಾಸನಮಠದ ಆಶ್ರಯದಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕವಾ
ಅನೇಕ ಮಹತ್ಕಾರ್ಯಗಳು ನಡೆದಿರುವುದನ್ನು ನಾವು ವರ್ಣಿಸುತ್ತೇವೆ.

ಚೋಳ ರೇಣುಕ ಸಂವಾದ ಟೀಕೆ, ವೃಷಭೇಂದ್ರ ಪುರಾಣ, ಅನುಗಿದೇವ
ಸಾಂಗತ್ಯ, ಘನಲಿಂಗಿ ಚಕ್ರವರ್ತಿಯ ವಚನಗಳು ಇತ್ಯಾದಿ ಅಮೂಲ್ಯ ಕೃತಿಗಳನ
ರಚಿಸಿದ ಯೋಗೀಶ್ವರರು ಈ ಪೀಠವನ್ನಲಂಕರಿಸಿದ್ದಾರೆ. ಸಾಂಸ್ಕೃತಿಕವಾಗಿ
ರಾಷ್ಟ್ರವು ಬ್ರಹ್ಮ ಸತ್ಯ ಜಗನ್ಮಿಥ್ಯವೆಂಬ ನಿರಾಶಾವಾದದ ತೊಡಕಿನಲ್ಲಿ ಸಿಲುಕಿದಾ
"ದೇವಕಂಬಳಕ್ಕೆ ಹೋಗಿ ಕನಕದ ಕೊಡನಕಂಡಂ", ಮರ್ತ್ಯ ಲೋಕಕ್ಕೆ ಬಂ
ಮಾನವ ಜನ್ಮವ ಕಂಡೆ, ಮಾನವ ಜನ್ಮಕ್ಕೆ ಘುಣಾಕ್ಷರ ನ್ಯಾಯವಾದಂತೆ, ಲಿಂ
ಬಂದುದ ಕಂಡೆ. ಎನಗಿದು ಚೋದ್ಯವಯ್ಯಾ, ಎನಗಿದು ವಿಪರೀತವಯ್ಯ, ಇವ
ನುಡಿದಂತೆ ನಡೆಸು ನಡೆದಂತೆ ನುಡಿಸು, ನುಡಿನಡೆಗೆ ಭಿನ್ನವಾದರೆ ಶರಣರೊಪ್ಪರ
ನಿಮ್ಮ ಶರಣರೊಪ್ಪದಲ್ಲಿಯೇ ನೀನೊಪ್ಪೆ, ನೀನೊಪ್ಪದಲ್ಲಿಯೆ ಎನಗೆ ಬಂದಿತ್ತು ಭವ
ಹೆಮ್ಮಾರಿ, ಅದಕ್ಕೆ ನಾನಂಜುವೆನಯ್ಯಾ, ನಾನಳುಕುವೆನಯ್ಯಾ ನಡೆನುಡಿ ಎರಡಾ
ದಂತೆ ನಡೆಸಯ್ಯಾ, ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ" ಎಂ
ದಿವ್ಯ ಸಂದೇಶವನ್ನಿತ್ತುದು ಸುತ್ತೂರು ಮಠ.

ಇಂತಹ ಸಂಸ್ಥೆಯ ಮೂಲಕರ್ತೃಗಳಾದ ಮಹಾಯೋಗೀಂದ್ರರ ಆದಿಗುರುಗ
ಪುಣ್ಯ ಜಯಂತಿಯನ್ನು ಹತ್ತು ವರ್ಷಗಳಿಂದ ಅತಿವಿಜೃಂಭಣೆಯಿಂದ ಈ ಮೈಸೂ
ನಗರದಲ್ಲಿ ನೆರವೇರಿಸುತ್ತಾ ಜನತೆಯಲ್ಲಿ ಧರ್ಮಸ್ಫೂರ್ತಿಯನ್ನು ಕಲಾಭಿರುಚಿಯನ

ೞ್ಟಿಸುವುದಕ್ಕಾಗಿ ಉತ್ಸವ ಸಮಿತಿಯು ಶ್ರಮಿಸುತ್ತಿದೆ. ಈ ಉತ್ಸವಗಳಲ್ಲಿ ರಾಷ್ಟ್ರದ ಪ್ರಮುಖ ಸುಧಾರಕರೂ, ರಾಜಕಾರಣಿಗಳೂ, ವಿದ್ವಮಣಿಗಳು, ತಪೋಧನರು ಭಾಗವಹಿಸಿ ಸಮಾರಂಭವನ್ನು ಯಶಸ್ವಿಗೊಳಿಸಿದ್ದಾರೆ.

ಅಂತೆಯೇ ಈ ವರ್ಷದ ಈ ಸಪ್ತಾಹ ಸಮಾರಂಭದ ಪ್ರಾರಂಭವು ಮಹಾ ವ್ಯಕ್ತಿಗಳ ಸಮ್ಮುಖದಲ್ಲಿ ನೆರವೇರುವುದು ನಮ್ಮ ನಿಮ್ಮೆಲ್ಲರ ಸುದೈವ. ಈಸಮಾರಂಭದ ವೈಭವಕ್ಕೆ ಮತ್ತೊಂದು ಹೊಂಗಳಸವೆಂದರೆ ಶಿವಮಂತ್ರಲೇಖನ ಜಪಯಜ್ಞನಿರತರು, ತಪೋಧನರು ಆದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರು ಕೃಪೆ ಮಿಟ್ಟು ದಯಮಾಡಿಸಿರುವುದು ಒಂದು ವೈಶಿಷ್ಟ್ಯವಾಗಿದೆ. ದೈಹಿಕ ದೃಷ್ಟಿಯಿಂದ ತೊಂಭತ್ತು ಸಂವತ್ಸರವನ್ನು ಸಮಾಪಿಸುತ್ತಿರುವ ಪೂಜ್ಯಪಾದರು ಹತ್ತು ವರ್ಷಗಳಿಂದ ಲೌಕಿಕ ಜೀವನದ ಹಂಗು ತೊರೆದು ಆತ್ಮ ಸಾಕ್ಷಾತ್ಕಾರದ ಹಾದಿ ಹಿಡಿದು ಮಹಾ ಮಂತ್ರಲೇಖನವನ್ನು ಕೈಗೊಂಡು ನಿತ್ಯವೂ ಹತ್ತು ಹನ್ನೆರಡು ಗಂಟೆಗಳ ಕಾಲ ಮಂತ್ರಲೇಖನ ತಪಸ್ಸನ್ನಾಚರಿಸುತ್ತಾ, ಎರಡು ಕೋಟಿ ಮಹಾಮಂತ್ರ ಲೇಖನ ಗಳನ್ನು ಬರೆದೂ ತಪಸ್ಸಿನ ಫಲವನ್ನು ಲೋಕದ ಕಲ್ಯಾಣಕ್ಕಾಗಿ ಧಾರೆಯರೆದ ಮಹಾ ನುಭಾವರು. ಮಂತ್ರಶಕ್ತಿ ಮೈಗೂಡಿ ಅನುಭವದ ಅಮೃತವಾಗಿ ಅವರಿಂದ ರಚಿತವಾಗಿ ರುವ ಶಿವಮಂತ್ರ ಮಹಿಮೆ ಎಂಬ ಅಮೂಲ್ಯ ಕೃತಿಯು ಮುಮುಕ್ಷುಗಳ ಮೋಕ್ಷ ಚಿಂತಾಮಣಿಯಾಗಿದೆ.

ಕರ್ಮಯೋಗಿಗಳೆನಿಸಿದ ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿ ಗಳವರ ಕ್ರಿಯಾಶಕ್ತಿಗೆ ಪೂಜ್ಯ ಹಿರಿಯ ಜಗದ್ಗುರುಗಳವರ ಆತ್ಮಶಕ್ತಿಯು ಜ್ಞಾನ ಶಕ್ತಿಯಾಗಿ ಈ ಮಹಾಸಂಸ್ಥೆಯನ್ನು ಬೆಳೆಸಿದ್ದಾರೆ. ಪೂಜ್ಯಪಾದರ ತಪಃಶಕ್ತಿಯನ್ನು ಮನಗಂಡು ಭಾರತದ ರಾಷ್ಟ್ರಪತಿ ಡಾಕ್ಟರ್ ರಾಜೇಂದ್ರಪ್ರಸಾದ್ ರವರು, ಉಪರಾಷ್ಟ್ರಪತಿ ರಾಧಾಕೃಷ್ಣರವರು, ಮೈಸೂರು ಶ್ರೀಮನ್ಮಹಾರಾಜ ಜಯ ಚಾಮರಾಜ ಒಡೆಯರ್‌ರವರು, ಭರತಪುರದ ಶ್ರೀಮನ್ಮಹಾರಾಜರವರು ಇತ್ಯಾದಿ ಸಂಸ್ಥಾನಗಳ ರಾಜರುಗಳು, ರಾಷ್ಟ್ರದ ಪ್ರಮುಖ ವಿದ್ವನ್ಮಣಿಗಳು ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ. ಇಂತಹ ಮಹಾನುಭಾವರು ಈ ಸಮಾರಂಭಕ್ಕೆ ಕೃಪೆಯಿಟ್ಟು ದಯಮಾಡಿಸಿರುವ ಈ ಸಂದರ್ಭದಲ್ಲಿ ಉತ್ಸವ ಸಮಿತಿಯ ಪರವಾಗಿ ಸಾಷ್ಟಾಂಗ ಪ್ರಣಾಮದೊಡನೆ ಸ್ವಾಗತವನ್ನು ಬಯಸುತ್ತೇನೆ.

ಈ ಸಮಾರಂಭವನ್ನು ಉದ್ಘಾಟಿಸಲು ವಿಶಾಲ ಮೈಸೂರಿನ ಶ್ರೇಷ್ಠ ನ್ಯಾಯಾ ಲಯದ ಪ್ರಧಾನ ನ್ಯಾಯಾಧೀಶರಾದ ಶ್ರೀಮಾನ್ ನಿಟ್ಟೂರು ಶ್ರೀನಿವಾಸರಾಯರನ್ನು ಸ್ವಾಗತಿಸಲು ಸಂತೋಷಪಡುತ್ತೇನೆ. ಶ್ರೀ [illegible] ರಾಜಕಾರಣಿಗಳು,

ಪ್ರಭಾವಶಾಲಿ ನ್ಯಾಯವಾದಿಗಳೆಂದು ಕೀರ್ತಿಗೊಂಡಿದ್ದಾರೆ. ಅವರ ಪ್ರತಿಭಾಶಕ್ತಿ ಫಲವಾಗಿ ಇಂದು ಪ್ರಧಾನ ನ್ಯಾಯಾಧೀಶರಾಗಿ ಕನ್ನಡನಾಡಿನಲ್ಲಿ ಶ್ರೇಷ್ಠ ಧ ಸಂಪ್ರದಾಯ ಬೆಳೆಯಲು ಕಾರಣಕರ್ತರಾಗಿದ್ದಾರೆ. ಸರಳಜೀವಿಗಳು, ಸದಾ ಶೀಲರು ಆದ ಶ್ರೀಯುತರನ್ನು ಇಂದಿನ ಸಮಾರಂಭದ ಉದ್ಘಾಟನೆಗೆ ಹೃತ್ಪೂ ವಾಗಿ ಸ್ವಾಗತಿಸುತ್ತೇನೆ.

ಅಂತೆಯೇ ಇಂದು ಧರ್ಮದ ಪುನರುಜ್ಜೀವನ ಕೇಂದ್ರವಾಗಿರುವ ಈ ಸ ಯಲ್ಲಿ ಧರ್ಮದ ವಿಷಯವಾಗಿ ಸಂದೇಶವನ್ನು ನೀಡಲು ದಯಮಾಡಿಸಿರುವ ವಿದ್ಯಾಸಚಿವರಾದ ಶ್ರೀಮಾನ್ ಎ. ಜಿ. ರಾಮಚಂದ್ರರಾಯರು ಮೈಸೂರಿನ ವಿ ಸಚಿವರಾಗಿ ನಾಡಿಗೆ ಸೇವೆಯನ್ನು ಸಲ್ಲಿಸಿದ್ದಾರೆ. ನಮ್ಮ ಸಂಸ್ಥೆಯ ಅಭ್ಯುದ ಅನೇಕ ರೀತಿಯಿಂದ ಕಾರಣಕರ್ತರಾಗಿದ್ದಾರೆ. ಇವರನ್ನು ಈ ಸಮಾರಂಭಕ್ಕೆ ಹೃ ರ್ವಕವಾಗಿ ಸ್ವಾಗತಿಸುತ್ತೇನೆ.

## ಜೀವನದ ಎರಡು ಮುಖಗಳು

ಸ್ವಾಗತಾನಂತರ ಶ್ರೀಮಾನ್ ನಿಟ್ಟೂರು ಶ್ರೀನಿವಾಸರಾಯರು ವಿಚಾರಭ ವಾದ ಭಾಷಣ ಮಾಡಿ ಸಮಾರಂಭವನ್ನು ಉದ್ಘಾಟಿಸಿದರು.

ಶ್ರೀ ಸ್ವಾಮೀಜಿಯವರೆ, ಮಹಿಳೆಯರೆ, ಮತ್ತು ಮಹನೀಯರೆ,

ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತಿಯ ಸಂದರ್ಭದಲ್ಲಿ ಈ ಸ ತಮ್ಮೆಲ್ಲರೊಡನೆ ಸೇರಿ ಈ ಮಹೋತ್ಸವದಲ್ಲಿ ಭಾಗಿಯಾಗುವ ಆನಂದವನ್ನು ನ ಒದಗಿಸಿಕೊಟ್ಟಿದ್ದಕ್ಕಾಗಿ ಉತ್ಸವದ ಕಾರ್ಯಕರ್ತರಿಗೆ ನಾನು ಬಹಳ ಕೃತಜ್ಞನಾ ದ್ದೇನೆ. ಇತರ ನಾಗರಿಕ ರಾಷ್ಟ್ರಗಳಲ್ಲಿ ಹೇಗೋ ಹಾಗೆಯೇ ಭಾರತದಲ್ಲೂ ಕು ಬಹಳ ಹಿಂದಿನಿಂದಲೂ ಧಾರ್ಮಿಕ ಸಂಸ್ಥೆಗಳೆಷ್ಟೋ ಹುಟ್ಟಿ ಬೆಳೆದಿವೆ. ಕೆಲಕಾ ಸುತ್ತಮುತ್ತಲಿನ ಜನತೆಗೆ ಸ್ಫೂರ್ತಿಯನ್ನು ನೀಡಿ, ಅವರ ಜೀವನವನ್ನು ರೂಪಿ ಅನಂತರ ಕಾಲಮಹಿಮೆಯಿಂದಲೋ, ಅಥವಾ ಸಂಸ್ಥೆಯಲ್ಲೇ ಸುಪ್ತವಾಗಿದ್ದ ಕುಂ ಕೊರತೆಗಳಿಂದಲೋ ಕುಗ್ಗಿ ಹೆಸರು ಮಾತ್ರಕ್ಕೆ ಧಾರ್ಮಿಕ ಸಂಸ್ಥೆಯೆನ್ನಿಸಿಕೊಂ ಸತ್ವರಹಿತವಾಗಿ ಬಾಳನ್ನ ನೂಕುತ್ತಾ ಬಂದಿವೆ. ಆಧ್ಯಾತ್ಮಿಕ ಜೀವನಕ್ಕೆ ಸಂಬ ಪಟ್ಟ ಸಂಸ್ಥೆಯಾವುದನ್ನೂ ಮಾನವನು ಸುಲಭವಾಗಿ ಬಿಟ್ಟು ಕೊಡಲೊಲ್ಲ. ಸಂ ತನ್ನ ಕರ್ತವ್ಯವನ್ನು ನಿರ್ವಹಿಸುತ್ತ ಇರಲಿ, ಇಲ್ಲದಿರಲಿ, ಹೀಗಾಗಿ ನಾಗರಿಕ ಪ್ರಪಂ ಎಲ್ಲಾ ಕಡೆಗಳಲ್ಲೂ ಜರೆಮುಸುಕಿನಿಸ್ತೇಜವಾದ ಸಂಸ್ಥೆಗಳೆಷ್ಟೋ ಇನ್ನೂ ಅರೆಜೀ ಬದುಕನ್ನು ಸಾಗಿಸುತ್ತಿವೆ. ಇಂಥ ಸಂಸ್ಥೆಗಳನ್ನು ನೋಡಿ ನಾವು ವ್ಯಸನಪಡಬಹು ಆದರೆ ಆತಂಕಗೊಳ್ಳಬೇಕಾಗಿಲ್ಲ. ಮಾನವನೇನೂ ಪರಿಪೂರ್ಣತೆಯನ್ನು ಪಡೆದಿಲ್ಲ

ಬೀಳಾದ ಸಂಸ್ಥೆಗಳನ್ನು ನೋಡಿ ಮನೋದೌರ್ಬಲ್ಯಕ್ಕೆ ಎಡೆಗೊಡುವ ಬದಲು ಸುತ್ತೂರು ಶ್ರೀ ವೀರಸಿಂಹಾಸನಮಠದಂತೆ ಚಿರಕಾಲ ಯಶಸ್ವಿಯಾಗಿ ಬದುಕಿ ಚಿರಯೌವನದ ಭಾಗ್ಯವನ್ನು ಪಡೆದು, ಇನ್ನೂ ಸಹಸ್ರಕಾಲ ಮಾನವಸೇವೆಯನ್ನು ನಡೆಸುವ ನಿರೀಕ್ಷೆಯಲ್ಲಿರುವ ಸಂಸ್ಥೆಗಳನ್ನು ನೋಡಿ ನಾವು ಧೈರ್ಯ ತಂದುಕೊಳ್ಳಬಹುದು. ಮಾನವನ ಸ್ವಭಾವದಲ್ಲಿ ಅವನನ್ನು ಅವನತಿಗೆ ಎಳೆಯುವ ಶಕ್ತಿಗಳಿರುವಂತೆಯೇ ಉದಾತ್ತತೆಗೆ ಏರಿಸುವ ಶಕ್ತಿಗಳೂ ಇವೆ. ಒಟ್ಟಿನಲ್ಲಿ ಸಚ್ಛಕ್ತಿಯ ಪ್ರಭಾವವೇ ಹೆಚ್ಚು—ಎಂಬುದಕ್ಕೆ ಶ್ರೀ ಶ್ರೀ ವೀರಸಿಂಹಾಸನಮಠದ ಬೆಳವಣಿಗೆಯೇ ಸಾಕ್ಷಿ. ಇದೇನೂ ನೆನ್ನೆ ಮೊನ್ನೆಯ ಸಂಸ್ಥೆಯಲ್ಲ. ನಮಗೆ ತಿಳಿದಿರುವ ಮಟ್ಟಿಗೆ ಸಾವಿರ ವರ್ಷಗಳ ಹಿಂದೆಯೇ ಇದು ರಾಜರ ಗಮನವನ್ನು ಸೆಳೆದು ಅವರ ಆಶ್ರಯವನ್ನು ಪಡೆಯುವಷ್ಟು ಪುಷ್ಟವಾಗಿ ಬೆಳೆದು, ಅಂದಿನಿಂದ ಇದುವರೆಗೆ ಸತತವಾಗಿ ಆಧ್ಯಾತ್ಮಿಕದೃಷ್ಟಿಯನ್ನು ಬೆಳೆಸಿಕೊಳ್ಳುತ್ತ ಬಂದಿದೆ. ತಾನು ವ್ಯಾಸಂಗದಿಂದಲೂ ಚಿಂತನೆಯಿಂದಲೂ ಸಂಪಾದಿಸಿದ ಜ್ಞಾನವನ್ನು ಗ್ರಂಥಗಳ ಮೂಲಕ ಜನಸಾಮಾನ್ಯಕ್ಕೆ ಒದಗಿಸಿಕೊಟ್ಟಿದೆ. ಕಾಲದ ಮಹಿಮೆಯನ್ನೆದುರಿಸಿ ದೃಢವಾಗಿ ನಿಲ್ಲುವ ಶಕ್ತಿ ಈ ಸಂಸ್ಥೆಗೆ ಇದೆಯೆನ್ನುವುದು ಸ್ಪಷ್ಟ. ಎಷ್ಟೋ ಶತಮಾನಗಳನ್ನು ಕಂಡಿರುವ ಈ ಸಂಸ್ಥೆಗೆ ಮುಪ್ಪೇನೋ ಬಂದಿದೆ. ಆದರೆ ಆ ಮುಪ್ಪು "ವೃದ್ಧತ್ವಂಜರ ಸಾ ವಿನಾ" ಜೀರ್ಣತೆಯನ್ನೂ ದೌರ್ಬಲ್ಯವನ್ನೂ ತರುವ ಮುಪ್ಪಲ್ಲ. ಸಾಮಾನ್ಯವಾಗಿ ಮುಪ್ಪಿನ ಲಕ್ಷಣವೆಂದರೆ ತನ್ನ ಸುತ್ತಲೂ ಬದಲಾವಣೆ ಹೊಂದುತ್ತಿರುವ, ತಲೆಮಾರಿನಿಂದ ತಲೆಮಾರಿಗೆ ಹೊಸ ಹೊಸ ರೂಪಗಳನ್ನು ತಾಳುತ್ತಿರುವ ಜಗತ್ತಿಗೆ ಹೊಂದಿಕೊಳ್ಳುವ ಶಕ್ತಿಯನ್ನು ಕಳೆದುಕೊಳ್ಳುವುದು. ಈ ಸಂಸ್ಥೆಯಲ್ಲಿ ಇಂಥ ಶಕ್ತಿ ನಷ್ಟವಾಗದೆ ಇಂದಿಗೂ ಜಾಗೃತವಾಗಿದೆ. ಇದು ಈ ಮಠದ ಭಾಗ್ಯ ಮಾತ್ರವಲ್ಲ. ವೀರಶೈವ ಸಮಾಜದ ಭಾಗ್ಯ ಮಾತ್ರವಲ್ಲ, ದೇಶದ ಭಾಗ್ಯ.

ಈ ಮಠದ ಇತಿಹಾಸವನ್ನು ನೋಡಿದರೆ ಅದರ ವಿಶಾಲದೃಷ್ಟಿ ಹೊಸದಾಗಿ ಬೆಳೆಸಿಕೊಂಡದ್ದಲ್ಲ. ಮೊದಲಿನಿಂದಲೂ ಇದ್ದದ್ದೆ ಎನ್ನಿಸುತ್ತದೆ. ಸುತ್ತೂರಿನ ಪುರಾತನ ದೇವಾಲಯದಲ್ಲಿರುವ ಶಂಕರನಾರಾಯಣಸ್ವಾಮಿಯ ವಿಗ್ರಹವನ್ನು ನೆನೆದಾಗ "ಆ ವಿಗ್ರಹವೇ ಇಲ್ಲಿಯ ಮಠಾಧಿಪತಿಗಳ ಮನೋಧರ್ಮದ ಸಂಕೇತ" ಎನ್ನಿಸಿತು. ಶಿವ ಪಾರಮ್ಯದ ಅಥವಾ ವಿಷ್ಣು ಪಾರಮ್ಯದ ವಿಷಯದಲ್ಲಿ ತರ್ಕಹೂಡಿ, ವಾದ ವಿವಾದಗಳನ್ನು ಬೆಳೆಸಿ ಹೊಡೆದಾಟದವರೆಗೂ ಹೋಗುವ ದ್ವೇಷವನ್ನು ಸಾಧಿಸುವ ಜನಕ್ಕೆ ನಮ್ಮಲ್ಲೇನೂ ಕೊರತೆಯಿಲ್ಲ. ಮಾನವ ಮಾತ್ರನಾದವನು ದೇವರುಗಳಿಗೆ ಮೊದಲನೆಯ ಅಥವಾ ಎರಡನೆಯ ದರ್ಜೆಯನ್ನು ಅನುಗ್ರಹಿಸಿ ಹೋಗುವುದು ಅಕ್ಷಮ್ಯವಾದ ಧಾರ್ಷ್ಟ್ಯ. ಈ ತಿಳುವಳಿಕೆ ಇನ್ನೂ ಅನೇಕರಿಗೆ ಬಂದಿಲ್ಲ. ಇಂತಹ ಜನರು ಶಂಕರ

ನಾರಾಯಣಸ್ವಾಮಿಯ ವಿಗ್ರಹವನ್ನು ನೋಡಿ ಅದರಲ್ಲಿ ರೂಪಗೊಂಡಿರುವ ಘನವ
ತತ್ವವನ್ನು ಗ್ರಹಿಸಬೇಕು. ಆ ವಿಗ್ರಹದಲ್ಲಿ ನಮಗೆ ಕಾಣುವುದು ಎರಡು ದೇವ
ಗಳಲ್ಲ! ಮೊದಲು ಎರಡಾಗಿದ್ದ ದೇವರುಗಳು ಸೇರಿ ಒಂದಾದ ದೇವರೂ ಅಲ್ಲ. ಒಂ
ದೇವರ ಎರಡು ಮುಖ–ಅಥವಾ ಇನ್ನೂ ನಿಷ್ಕೃಷ್ಟವಾಗಿ ಹೇಳಬೇಕಾದರೆ ನೋಡ
ವನ ದೃಷ್ಟಿ ಕೋನದ ಫಲವಾಗಿ ಬೇರೆ ಬೇರೆ ರೂಪಗಳನ್ನು ತಾಳುವ ಒಂದೇ ಮು
ಆ ದೇವರಿಗೆ ನಾವು ಎರಡಲ್ಲ ಸಾವಿರ ಮುಖಗಳನ್ನು ಕೊಡಬಹುದು. ಆದರೆ ದೇ
ರೊಬ್ಬನೆ "ದೇವನೊಬ್ಬ ನಾಮ ಹಲವು" ಸಾವಿರಾರು ವರ್ಷಗಳ ಹಿಂದೆಯೇ ಈ ತ
ವನ್ನು ಗ್ರಹಿಸಿ ಅದಕ್ಕೆ ಮೂರ್ತಿರೂಪವನ್ನು ಕೊಟ್ಟ ಜ್ಞಾನಿಗಳೆದುರಿಗೆ ನಾವು ನ
ನಿಲ್ಲಬೇಕಾಗುತ್ತದೆ. ಇಂಥಹ ದೇವರ ಅನುಗ್ರಹದಲ್ಲಿ ಬೆಳೆದ ಮಠದಲ್ಲಿ ವಿಶಾ
ದೃಷ್ಟಿ ಕಂಡುಬರುವುದು ಸ್ವಾಭಾವಿಕವೆ.

ಈ ಮಠದ ಚಟುವಟಿಕೆಗಳಲ್ಲಿ ಕಂಡುಬರುವ ವೈಶಾಲ್ಯ ನಿಜವಾಗಿಯೂ ಆಶ್ಚ
ಕರ. ಎರಡು ಬೇಸಿಕ್ ಟ್ರೈನಿಂಗ್ ಕಾಲೇಜುಗಳು–ಹೆಂಗಸರಿಗೊಂದು ಗಂಡ
ಗೊಂದು, ಸಂಸ್ಕೃತ ವೇದ ಜ್ಯೋತಿಷ್ಯಗಳನ್ನು ಬೋಧಿಸುವ ಶಾಲೆ, ಮೈಸೂರಿನ
ಚಾಮರಾಜನಗರದಲ್ಲಿ, ಹುಲ್ಲಹಳ್ಳಿಯಲ್ಲಿ–ಇನ್ನೂ ಇತರ ಕಡೆಗಳಲ್ಲಿ ಒಂದೊಂ
ಊರಿನಲ್ಲೂ ಒಂದೊಂದು ಸೆಕೆಂಡರಿ ಶಾಲೆ, ಸ್ಕೂಲು ಕಾಲೇಜುಗಳಲ್ಲಿ ಓದ
ವಿದ್ಯಾರ್ಥಿಗಳಿಗೆ ಸೌಕರ್ಯಗಳನ್ನು ಉಚಿತವಾಗಿ ಒದಗಿಸುವ ಹತ್ತಾರು ಹಾಸ್ಟೆ
ಗಳು–ಇದೇನೂ ಸಾಮಾನ್ಯದ ಕೆಲಸವಲ್ಲ. ಇಷ್ಟೊಂದು ಸಂಸ್ಥೆಗಳನ್ನು ಯಶ
ಯಾಗಿ ನಡೆಸಲು ಬೇಕಾದ ಹಣವೆಷ್ಟು, ಉತ್ಸಾಹವೆಷ್ಟು, ದಕ್ಷತೆಯೆಷ್ಟು, ಎ
ಕ್ಕಿಂತಲೂ ಹೆಚ್ಚಾಗಿ ಔದಾರ್ಯವೆಷ್ಟು, ನನ್ನ ಮನಸ್ಸಿಗೆ ಈ ಸಂಸ್ಥೆಗಳ ವಿಷಯದ
ಬಹು ದೊಡ್ಡದೆಂದು ತೋರುವ ಒಂದು ಗುಣವನ್ನು ಇಲ್ಲಿ ಪ್ರಸ್ತಾಪಿಸುವುದು ಅವಶ್ಯ
ಈ ಸಂಸ್ಥೆಗಳೆಲ್ಲಾ ಯಾವುದೊಂದು ಕೋಮು ಜಾತಿ ಅಥವಾ ಪಂಗಡಕ್ಕೆ ಮೀಸ
ದುದಲ್ಲ. "ನಾವು ಸಂಗ್ರಹಿಸುವ ಹಣ, ನಾವು ಪಡುವ ಕಷ್ಟ, ನಮ್ಮ ವ್ಯವಹಾ
ಕೌಶಲ, ನಮ್ಮ ದಕ್ಷತೆ ಇವುಗಳಿಂದ ಬರುವ ಫಲ ನಮ್ಮ ಜಾತಿ ಅಥವಾ ಪಂಗ
ದವರಿಗೆ ದೊರಕಬೇಕಾಗಿದದ್ದು ನ್ಯಾಯ; ಇತರರಿಗೆ ಅಂಥ ಫಲಬೇಕಾದರೆ ಅವರ
ಕಷ್ಟಪಡಲಿ" ಎನ್ನುವ ಮನೋವೃತ್ತಿಯೇ ಮಾನವನಲ್ಲಿ ಕಂಡುಬರುತ್ತದೆ. ವೇದಿಕೆ
ಮೇಲೆ ನಿಂತು "ಮಾನವರೆಲ್ಲರೂ ಒಂದು. ಈ ಜಾತೀಯತೆಯು ಕಸಿ ತೊಲಗಬೇಕು
ಎಂದು ನಾವೆಲ್ಲರೂ ಎಷ್ಟೇ ಕೂಗಿದರೂ ಇಂದಿಗೂ ನಮ್ಮಲ್ಲಿ ಆ ಮನೋಭಾ
ಹೋಗಿಲ್ಲ; ಅದು ಮೊದಲಿಗಿಂತಲೂ ಹೆಚ್ಚಾಗುತ್ತಿದೆಯೇನೋ ಎಂಬ ಸಂದೇಹ
ಕೂಡ ಕೆಲವು ವೇಳೆ ಅವಕಾಶ ಕಾಣುತ್ತದೆ. "ಉಳಿದವರೂ ಕಷ್ಟಪಡಲಿ" ಎನ್ನು
ಮಾತೇನೊ ಸರಿಯೆ; ಯಾವ ಸಮಾಜದಲ್ಲೂ ಸೋಮಾರಿಗಳಿಗೆ ಅವಕಾಶವಿರಬಾರ
ಆದರೆ ಕಷ್ಟಪಟ್ಟವರು ಯಾರೇ ಆಗಲಿ, ಆ ದುಡಿಮೆಯ ಫಲ ಜನತೆಯಲ್ಲ

ೂರೆಯಬೇಕು. "ನಾವು, ಉಳಿದವರು" ಎಂಬ ಭೇದಕ್ಕೆ ನಮ್ಮ ಮನಸ್ಸಿನಲ್ಲಿ ಸ್ಥಳ ೂರೆಯಬಾರದು. ಶ್ರೀ ವೀರಸಿಂಹಾಸನ ಮಠದ ದೃಷ್ಟಿಯಲ್ಲಿ "ನಮ್ಮ ಜನ" ಎಂದರೆ ಡೀ ಜನತೆ. ಈ ಉದಾತ್ತದೃಷ್ಟಿಯನ್ನು ಸಾಧಿಸಿರುವುದಕ್ಕಾಗಿ ಮಠಕ್ಕೆ ನಮ್ಮೆಲ್ಲರ ಭಿನಂದನೆ ಮತ್ತು ಕೃತಜ್ಞತೆ ಸಲ್ಲಬೇಕು.

ಮಠದವರ ಔದಾರ್ಯ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದೆ. ನಮ್ಮಲ್ಲಿ ಾತೀಯತೆ ಹೋಗಬೇಕೆಂದು ನಿಜವಾಗಿ ನಂಬಿ, ಆ ಆದರ್ಶಕ್ಕಾಗಿ ಶ್ರಮಿಸಿದವ ಲ್ಲೂ ಕೂಡ ಅನೇಕರು ಹರಿಜನರ ಯೋಗಕ್ಷೇಮವನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ರಿಜನರು ಯಾವ ಜಾತಿಗೂ ಸೇರದ ಅಸ್ಪೃಶ್ಯರೆಂದು ಗಣಿಸಲ್ಪಟ್ಟದ್ದವರಷ್ಟೇ? ುಹಾತ್ಮ ಗಾಂಧಿಯವರು ಜೀವಮಾನವೆಲ್ಲಾ ಹರಿಜನರಿಗೆ ಸಾಮಾಜಿಕ ನ್ಯಾಯ ನ್ನು ದೊರಕಿಸಿಕೊಡಲು ಶ್ರಮಿಸಿದರು. ಇಷ್ಟಾದ ಮೇಲೂ ಕೂಡ "ಅಸ್ಪೃಶ್ಯತೆ"ಯ ುನೋಭಾವದ ಅವಶೇಷ ಉಳಿದಿದೆ. ಅದನ್ನು ಗಣನೆಗೆ ತಂದುಕೊಳ್ಳದೆ ಜೀವನ ಡೆಸಲು ಈಗಲೂ ಕೆಲವರು ಅಂಜುತ್ತಾರೆ. ಶ್ರೀ ವೀರಸಿಂಹಾಸನ ಮಠದ ಔದಾ ರ್ಯವಾವರೋ ಹರಿಜನರಲ್ಲೂ ವ್ಯಾಪಿಸಿದೆ. ಮಠದವರು ಅವರಿಗಾಗಿಯೇ ಒಂದು ಂಸ್ಥೆಯನ್ನು ಏರ್ಪಡಿಸಿದ್ದಾರೆ.

"ಸ್ಕೂಲು ಕಾಲೇಜುಗಳನ್ನು ಸ್ಥಾಪಿಸುವುದು, ವಿದ್ಯಾರ್ಥಿನಿಲಯಗಳನ್ನು ನಡೆ ಸುವುದು ಇದೆಲ್ಲಾ ಸರಿಯೆ. ಆದರೆ ಆಧ್ಯಾತ್ಮಿಕ ವಿಷಯಗಳಿಗಾಗಿ ಮೀಸಲಾದ ಧಾರ್ಮಿಕ ಸಂಸ್ಥೆ ಈ ಕೆಲಸಗಳನ್ನೆಲ್ಲಾ ಮಾಡಬೇಕೆ? ನಶ್ವರವಾದ ಐಹಿಕ ಜೀವನದ ಗೊಡವೆ ಇವರಿಗೇಕೆ?" ಎಂದು ಕೆಲವರು ವಾದಿಸಬಹುದು. ಇಹ–ಪರಗಳ ನಡುವೆ ದೊಡ್ಡದೊಂದು ಕಮರಿಯಿದೆ ಎಂಬ ಭ್ರಮೆ ಎಲ್ಲಾ ಕಡೆಗಳಲ್ಲೂ ಆಗಾಗ ಕಂಡು ಬಂದಿದೆಯಾದರೂ, ಭಾರತದಲ್ಲಿ ಅದು ಹೆಚ್ಚು ಪ್ರಮಾಣದಲ್ಲಿ ಇರುವಂತೆ ತೋರು ತ್ತದೆ. ಇಂಥ ಭ್ರಮೆಗೆ ನಮ್ಮ ಪುರಾತನ ಧರ್ಮಗ್ರಂಥಗಳಲ್ಲಿ ಆಧಾರ ಸಿಕ್ಕುವುದಿಲ್ಲ. ವೇದೋಪನಿಷತ್ತುಗಳು ಒಣ ವೈರಾಗ್ಯವನ್ನು ಬೋಧಿಸುವುದಿಲ್ಲ. ಇಹಜೀವನ ಸಂಪದ್ಯುಕ್ತವಾಗಬೇಕು; ನಾವು ದೃಢಾಂಗರಾಗಿರಬೇಕು, ಮನೆಯಲ್ಲಿ ನೂರು ಹಸು ಕರೆಯಬೇಕು, ಸಂತತಿ ಬೆಳೆಯಬೇಕು. ಕಿವಿಗೆ ಮಂಗಳವಾರ್ತೆ ಕೇಳುತ್ತಿರಬೇಕು. ಕಣ್ಣಿಗೆ ಶುಭ ಕಾಣುತ್ತಿರಬೇಕು. ಇಂಥ ಮಾತನ್ನು ಮತ್ತೆ ಮತ್ತೆ ಹೇಳುವ ಮಂತ್ರ ಗಳನ್ನು ನಾವು ಮನೆಗಳಲ್ಲಿ ಉಚ್ಚರಿಸುತ್ತೇವೆ. ಹೀಗಿರುವಾಗ ಸಹಜೀವನದಲ್ಲಿ ಅಸಡ್ಡೆಯೇಕೆ? ನಮ್ಮ ಪರಲೋಕದ ಕಲ್ಪನೆ ಏನಿದ್ದರೂ ಅದು ಇಹ ಜೀವನದ ಅನುಭವದ ಆಧಾರದ ಮೇಲೆಯೇ ರೂಪುಗೊಳ್ಳಬೇಕು. ಆದ್ದರಿಂದ ಇಹಜೀವನ ಬರಡಾದರೆ ನಮ್ಮ ಆತ್ಮವು ಪರಿಪಕ್ವವಾಗಲಾರದು; ನಮ್ಮ ಪರಲೋಕವೂ ಬಂದೇ ಆಗಬೇಕು. "ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ" ಎಂದ ಮೇಲೆ ಇಲ್ಲಿ ಸಲ್ಲುವು

ದಕ್ಕೆ ತಕ್ಕ ಪರಿಕರಣಗಳನ್ನೆಲ್ಲಾ ಹೊಂದಿಸಿಕೊಳ್ಳುವುದು, ಇತರರಿಗೆ ಹೊಂದಿ ಕೊಡುವುದು, ನಮ್ಮೆಲ್ಲರ ಕರ್ತವ್ಯ. ಇದನ್ನು ಮನಗಂಡೇ ಈ ಮಠದವರು ಇ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ಅದನ್ನು ಐಹಿಕ ವಿಷಯಗಳಿಗೆ ಸಂಬಂಧಪಟ್ಟ ಎಂದು ಅಲ್ಲಗಳೆಯುವುದು ತರವಲ್ಲ. ಸುತ್ತೂರು ಮಠದ ವಿದ್ಯಾರ್ಥಿನಿಲಯಗ ಸುಮಾರು 2000 ವಿದ್ಯಾರ್ಥಿಗಳಿಗೆ ಅನ್ನ ವಸತಿಗಳ ಸೌಕರ್ಯವನ್ನು ಒದಗಿ ಲಾಗಿದೆ–ಎಂದು ಕೇಳಿದ್ದೇನೆ. "ಇದು ಕೇವಲ ದೇಹಪೋಷಣೆಯ ಕೆಲಸ" ಎ ಲಾದೀತೆ. ಕೇವಲ ದೇಹಪೋಷಣೆಯೇ ಆದರೂ ಅದಕ್ಕೆ ಪ್ರಶಂಸೆ ಸಲ್ಲಬೇಕಾದ ಆ ದೇಹಪೋಷಣೆ ಆತ್ಮಪೋಷಣೆಗೆ ಅವಶ್ಯವಾದ ಸಾಧನವಾದ ಮೇಲೆ ಅದರ ಮಹ ಮತ್ತೂ ಹೆಚ್ಚುತ್ತದೆ. ಇಂದಿನ ಜೀವನ ಜಟಿಲವಾದದ್ದು, ಜ್ಞಾನವೂ ಜಟಿ ವಾದದ್ದು. ನಾವು ಪಾಶ್ಚಾತ್ಯರ ಜೊತೆಗೆ ಸರಿಗಟ್ಟಿ ನಿಂತು ಜೀವನಪಥ ಸುಗ ವಾಗುವಂತೆ ಮಾಡಿಕೊಳ್ಳಬೇಕಾದರೆ ನಾವೂ ವಿಜ್ಞಾನದಲ್ಲಿ ಪರಿಣಿತರಾಗಬೇಕ ಯಂತ್ರ ಶಾಸ್ತ್ರವನ್ನು ಅಭ್ಯಾಸಮಾಡಬೇಕು. ಇದಕ್ಕೆ ಸಹಾಯವಾಗಲೆಂದು ಮ ದವರು ಎಂಜಿನಿಯರಿಂಗ್ ಕಾಲೇಜನ್ನೂ, ಪಾಲಿಟೆಕ್ನಿಕ್‌ಅನ್ನು ಸ್ಥಾಪಿಸುವ ಪ್ರಯ ದಲ್ಲಿದ್ದಾರೆಂದು ಕೇಳಿದ್ದೇನೆ. ಈ ಸ್ತುತ್ಯವಾದ ಪ್ರಯತ್ನ ಬೇಗ ಕೈಗೂಡಲೆಂ ನಮ್ಮೆಲ್ಲರ ಹಾರೈಕೆ.

ಸ್ಕೂಲು, ಕಾಲೇಜು ಹಾಸ್ಟಲ್‌ಗಳು–ಇವುಗಳ ವಿಷಯ ಇಷ್ಟು ಹೇಳಿದ ಅಪ್ರಕೃತವಲ್ಲವೆಂದು ನನ್ನ ನಂಬಿಕೆ. ಆದರೆ ಈ ಕೆಲಸಗಳ ಜೊತೆಗೆ ಆಧ್ಯಾತ್ಮಿ ವಿಷಯಗಳ ಚಿಂತನೆಯೂ ತತ್ವ ಶಾಸ್ತ್ರ ವ್ಯಾಸಂಗವೂ ನಡೆಯುತ್ತಲೇ ಇದೆ. ಎಲ ಧರ್ಮಗಳ ಮತ್ತು ತತ್ವ ಶಾಸ್ತ್ರಗಳ ಅಧ್ಯಯನಕ್ಕಾಗಿಯೇ ಒಂದು ಸಂಸ್ಥೆಯನ ಸ್ಥಾಪಿಸುವ ಯೋಜನೆಯೂ ಮಠದ ಪರಿಶೀಲನೆಯಲ್ಲಿದೆ. ನಾವು ಇಹಜೀವನವನ ಸಮರ್ಪಕವಾಗಿ ನಡೆಸಿ ವಿಶಾಲವಾದ ಅನುಭವವನ್ನು ಪಡೆಯಬೇಕು. ಅನಂತ ಪಡೆದ ಅನುಭವವನ್ನು ಸಮಗ್ರವಾಗಿ ಪರಿಶೀಲಿಸಿ ಅದರ ಬಳಿ ತತ್ವವನ್ನು ಗ್ರಹಿ ಬೇಕು. ನಮ್ಮ ಜೀವನ ಬಹಿರ್ಮುಖಿಯಾಗಿಯೂ ಇರಬೇಕು. ಅಂತರ್ಮು ಯಾಗಿಯೂ ಇರಬೇಕು. ಇವೆರಡಕ್ಕೂ ಅವಶ್ಯವಾದ ಸಹಾಯ ಸಂಪತ್ತುಗಳನ ಒದಗಿಸಲು ಶ್ರೀ ವೀರಸಿಂಹಾಸನ ಮಠದವರು ಸತತವಾಗಿ ಪ್ರಯತ್ನಿಸುತ್ತಿರುವ ಕ್ಕಾಗಿ ನಾವು ಎಷ್ಟು ಕೃತಜ್ಞರಾಗಿದ್ದರೂ ಸಾಲದು.

ಇಂಥ ಸಂಸ್ಥೆ ವರ್ಷಕ್ಕೊಂದು ಸಾರಿ ಜಯಂತಿಯನ್ನು ಆಚರಿಸುವುದರಲ್ಲಿ ವಿಶೇ ಅರ್ಥವಿದೆ. ಜಯಂತಿ ಸಂದರ್ಭ ಕಳೆದ ವರ್ಷ ನಡೆದ ಕೆಲಸದ ತನಿಖೆ ತೆಗೆ ಕೊಳ್ಳುವ ಕಾಲ; ಮುಂದಿನ ವರ್ಷದ ಕಾರ್ಯಕ್ರಮವನ್ನು ರೂಪಿಸಿಕೊಳ್ಳುವ ಕಾ ಅಷ್ಟೇ ಅಲ್ಲದೆ, ಇಂಥ ಉತ್ಸವಗಳು ಹೊರಗಿನ ಪ್ರಪಂಚಕ್ಕೂ ನಮಗೂ ಇರು

ಸಂಪರ್ಕವನ್ನು ಹೆಚ್ಚಿಸುತ್ತನೆ. ಸುತ್ತೂರು ಮಠದವರು ಈ ಸಂದರ್ಭವನ್ನು ಉಪಯೋಗಿಸಿಕೊಂಡು, ಹತ್ತು ವರ್ಷದ ಹಿಂದಿನಿಂದಲೂ ಜಯಂತಿಯ ಅಂಗವಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಾ ಬಂದಿದ್ದಾರೆ. ನಾಡಿನ ಪ್ರಸಿದ್ಧ ವಿದ್ವಾಂಸರು, ಕಲಾವಿದರು, ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ದಕ್ಷತೆಯಿಂದ ಸೇವೆ ಸಲ್ಲಿಸಿದವರು ಇಲ್ಲಿಗೆ ಭೇಟಿ ಕೊಟ್ಟು, ಇಲ್ಲಿಯ ಕಾರ್ಯಕ್ರಮಗಳನ್ನು ನೋಡಿ ಹರ್ಷಗೊಂಡು, ತಮ್ಮ ಅನುಭವದ ಮತ್ತು ಚಿಂತನೆಯ ಫಲವನ್ನು ಇಲ್ಲಿಯ ಯುವಕರಿಗೆ ದಾನಮಾಡಲು ಇದು ಒಳ್ಳೆಯ ಅವಕಾಶ. ಈ ವರ್ಷ ಉತ್ಸವದಲ್ಲಿ ಭಾಗವಹಿಸಲಿರುವ ಭಾಷಣಕಾರರ ಮತ್ತು ಕಲಾವಿದರ ಹೆಸರುಗಳನ್ನು ನೋಡಿದರೆ ಉತ್ಸವವು ಅತ್ಯಂತ ಯಶಸ್ವಿಯಾಗಿ ನಡೆಯುತ್ತದೆಂದು ನಿಸ್ಸಂಶಯವಾಗಿ ಹೇಳಬಹುದು. ಈ ವರ್ಷದ ಉಪನ್ಯಾಸಮಾಲೆಯಲ್ಲಿ ಮೊದಲನೆಯ ಉಪನ್ಯಾಸವನ್ನು ಶ್ರೀಮಾನ್ ಎ. ಜಿ. ರಾಮಚಂದ್ರರಾಯರು ಮಾಡಲಿದ್ದಾರೆ. ಉಪನ್ಯಾಸದ ವಿಷಯ "ಧರ್ಮ". ಇದು ಎಲ್ಲ ದೃಷ್ಟಿಯಿಂದಲೂ ಯುಕ್ತ. ಶ್ರೀ ರಾಮಚಂದ್ರರಾಯರು ಹಿಂದೆ ವಿದ್ಯಾಮಂತ್ರಿಗಳಾಗಿದ್ದುದರಿಂದ ಸ್ವಾಭಾವಿಕವಾಗಿ ವಿದ್ಯಾಸಂಸ್ಥೆಗಳಲ್ಲಿ ಅವರಿಗೆ ವಿಶೇಷ ಆಸಕ್ತಿಯುಂಟು. ಅಲ್ಲದೆ ಅವರು ಧರ್ಮದ ವಿಷಯದಲ್ಲಿ ಆಳವಾಗಿ ಚಿಂತನೆ ಮಾಡಿದವರು, ಅವರ ಭಾಷಣವನ್ನು ಕೇಳಿ ಆನಂದಿಸಲು ನಿಮ್ಮೆಲ್ಲರಂತೆ ನಾನೂ ಆತುರನಾಗಿದ್ದೇನೆ.

ಈ ಸಮಾರಂಭವನ್ನು ಅತ್ಯಾನಂದದಿಂದ ಉದ್ಘಾಟಿಸುತ್ತೇನೆ.

## ಧರ್ಮರಹಿತವಾದ ಜೀವನ ನೀರಸಮಯ

ಮಾಜಿ ವಿದ್ಯಾ ಸಚಿವರಾದ ಶ್ರೀ ಎ. ಜಿ. ರಾಮಚಂದ್ರರಾಯರು ಧರ್ಮದ ವಿಷಯದಲ್ಲಿ ವಿದ್ವತ್ ಪೂರ್ಣ ಭಾಷಣಮಾಡಿದರು. ಭಾರತದ ಜನ ಜೀವನವು ಧರ್ಮದ ಬುನಾದಿಯ ಮೇಲೆ ನಿಂತಿದೆ ಭಾರತವು ಸರ್ವ ಸಂಪತ್ತಿನಿಂದ ಬೆಳಗಿದ ಕಾಲ ಧರ್ಮದ ಹಿರಿಮೆಯ ಕಾಲ, ಧರ್ಮರಹಿತ ಜೀವನ ಬರಡು ಜೀವನ, ಧರ್ಮವು ಮಾನವನು ಮಾನವನಾಗಿ ಬಾಳುವುದನ್ನು ಕಲಿಸುವ ಸಾಧನವೇ ಹೊರತು ಮಾನವನ ಪ್ರಗತಿಗೆ ಕಂಟಕಪ್ರಾಯವಾದುದಲ್ಲ ನಾವು ಧರ್ಮವನ್ನು ಕಡೆಗೊಳಿಸುತ್ತಾ ಬಂದಂತೆಲ್ಲಾ ಅಜ್ಞಾನ, ದಾಸ್ಯ ದಾರಿದ್ರಗಳಲ್ಲಿ ಬಳಲುತ್ತಾ ಬಂದಿದ್ದೇವೆ. ಭರತ ಖಂಡದಲ್ಲಿ ಧರ್ಮವನ್ನು ಶಾಶ್ವತಗೊಳಿಸಲು ಮಠಗಳು ಸತತವೂ ದುಡಿಯುತ್ತಿವೆ ಎಂಬುದನ್ನು ಚರಿತ್ರೆಯಲ್ಲಿ ತಿಳಿಯಬಹುದು. ನಮ್ಮ ಮುಂದೆ ಮಂಡಿಸಿರುವ ಜಗದ್ಗುರುಗಳವರು ಮಹಾಮಂತ್ರವನ್ನು ರಚಿಸುವುದನ್ನು ನೋಡಿ ಆನಂದಪಟ್ಟಿದ್ದೇನೆ. ಆ ಮಂತ್ರದ ಫಲವನ್ನು ಲೋಕ ಕಲ್ಯಾಣಕ್ಕೆ ಧಾರೆಯೆರೆದಿರುವುದು ಅವರ ಹಿರಿಮೆಯ ಹೆಗ್ಗುರುತಾಗಿದೆ. ಇಂತಹ ಪ್ರಶಾಂತ ಪರಿಸರದಲ್ಲೇ ಭಾರತೀಯರು ಇಂದಿಗೂ

ಜಗತ್ತಿನಲ್ಲಿ ಮಾನ್ಯತೆಯನ್ನು ಪಡೆಯುವ ಶಕ್ತಿಯನ್ನು ಗಳಿಸಿಕೊಂಡಿದ್ದಾ
ಶ್ರೀಗಳವರ ತಪಃ ಪ್ರಭಾವದಿಂದ ಶ್ರೀ ಪೀಠದ ಕಿರಿಯ ಶ್ರೀಗಳವರು ವಿದ್ಯಾದಾನಕ
ತುಂಬಾ ಶ್ರಮಪಟ್ಟು ನಿತ್ಯವೂ ಎರಡುಸಹಸ್ರಮಂದಿ ವಿದ್ಯಾರ್ಥಿಗಳಿಗೆ ಅನ್ನದಾನವ
ನಡೆಸುತ್ತಲಿರುವುದನ್ನು ನಾನು ಪ್ರತ್ಯಕ್ಷವಾಗಿ ನೋಡಿರುವುದನ್ನು ಇಲ್ಲಿ ತಿಳಿಸ
ಸಂತೋಷಪಡುತ್ತೇನೆ.

ಸುತ್ತೂರು ಶ್ರೀ ಮಠವು ವಿದ್ಯಾಕ್ಷೇತ್ರದಲ್ಲಿ ಮಾಡಿರುವ ಮತ್ತು ಮಾಡುತ್ತಿ
ಧರ್ಮ, ಜ್ಞಾನದಾನ, ಅನ್ನದಾನ ಇವುಗಳ ವಿಚಾರವನ್ನು ಸರ್ವರೂ ತಿಳಿದಿರು
ವಿಷಯವಾಗಿರುತ್ತದೆ. ಪರಮಾತ್ಮನು ಹಿರಿಯ ಮತ್ತು ಕಿರಿಯ ಶ್ರೀ ಸ್ವಾಮಿ
ಯವರುಗಳಿಗೆ ಆಯುರಾರೋಗ್ಯ ಭಾಗ್ಯವನ್ನಿತ್ತು ಜಗತ್ಕಲ್ಯಾಣಕ್ಕಾಗಿ ಇ
ನಡೆಸುತ್ತಿರುವ ಧರ್ಮ ಚಿರಕಾಲವೂ ಇದೇರೀತಿ ನಡೆದುಕೊಂಡು ಬರಬೇಕೆಂಬುದ
ನಾನು ಪ್ರಾರ್ಥಿಸುತ್ತೇನೆಂದರು.

## ಆತ್ಮವಿಕಾಸಕ್ಕೆಯುಕ್ತಿನಿಸಲಿ

ಸಮಾರಂಭದ ಅಧ್ಯಕ್ಷತೆವಹಿಸಿದ್ದ ಜಗದ್ಗುರು ಶ್ರೀ ಶಿವರಾತ್ರಿಮಹಾಸ್ವಾ
ಗಳವರು ಉದಾತ್ತ ಸಂದೇಶವನ್ನಿತ್ತರು. ಯುವಕ ವೃಂದಕ್ಕೆ ಜೀತನ ವಿವೇಚನೆ
ಅಮೃತಧಾರೆಯೆರೆದರು.

## ಶ್ರೀ ಮಜ್ಜಗದ್ಗು ಶ್ರೀ ಶಿವರಾತ್ರೀಶ್ವರ ಜಯಂತಿಮಹೋತ್ಸವದಲ್ಲಿ ಸುತ್ತೂ ವೀರಸಿಂಹಾಸನಾಧೀಶ್ವರರಾದ ಜಗದ್ಗುರು ಶ್ರೀ ಶಿವರಾತ್ರಿಮಹಾಸ್ವಾಮಿ ಗಳವರು ಅಪ್ಪಣೆ ಕೊಡಿಸಿದ ದಿವ್ಯ ಸಂದೇಶ–

ಶ್ರೇಷ್ಠ ನ್ಯಾಯಾಧೀಶರಾದ ಶ್ರೀಮಾನ್ ಸಿಟ್ಟೂರು ಶ್ರೀನಿವಾಸರಾಯರೇ ಶ್ರೀ ಎ. ಜಿ. ರಾಮಚಂದ್ರರಾಯರೇ ಸಭಿಕರೇ ಮತ್ತು ನಮ್ಮ ಪ್ರಿಯವಿದ್ಯಾರ್ಥಿಗಳೇ—

ಮಹಾಮಹಿಮರು, ವಿಭೂತಿಪುರುಷರೂ ಆದ ಜಗದ್ಗುರು ಶ್ರೀ ಶಿವರಾತ್ರಿ
ಜಯಂತಿ ಮಹೋತ್ಸವ ಸಮಾರಂಭದಲ್ಲಿ ಭಾಗವಹಿಸುವುದು ನಮಗೆ ಆನಂ
ವಿಷಯವಾಗಿದೆ. ಕಾರಣ ಪುರುಷರಾದ ಶ್ರೀ ಗುರುಗಳ ಕೃಪೆಯಿಂದ ನಡೆಯುತ್ತಿರ
ಸಂಸ್ಥೆಗಳಲ್ಲಿ ಪ್ರಸಾದವನ್ನು ಪಡೆದು ತಮ್ಮ ಅಂತರಂಗ ಬಹಿರಂಗಗಳ ವಿಕಾಸ
ಮಾರ್ಗಮಾಡಿಕೊಳ್ಳುತ್ತಿರುವ ವಿದಾರ್ಥಿವೃಂದವನ್ನ ನೋಡಿ ಆನಂದಪಡು
ಒಂದು ವಿಶೇಷ ಅವಕಾಶ ಇದರಿಂದ ಪ್ರಾಪ್ತವಾಗಿದೆ. ಗುರುವಿನ ಅಪ್ಪಣೆಯಂತೆ ನ
ಯುತ್ತಿರುವ ನಮಗೆ ಅವರ ಅನುಗ್ರಹದಿಂದ ಸ್ಥಾಪಿತವಾದ ಸಂಸ್ಥೆಗಳಲ್ಲಿ



ಜಯಂತಿಯಲ್ಲಿ ಸಮಾವೇಶಗೊಂಡ ಜನಸಂದಣಿ

ಜಯಂತೀ ಮಹೋತ್ಸವದಲ್ಲಿ ಜಗದ್ಗುರುಗಳವರು
ಭಾಷಣ ಮಾಡುತ್ತಿರುವುದು.

ಯುತ್ತಿರುವ ವಿದ್ಯಾರ್ಥಿಗಳು ಗುರುಭಕ್ತಿ, ದೈವಭಕ್ತಿಗಳನ್ನು ಬೆಳೆಸಿಕೊಳ್ಳುತ್ತಿರುವುದನ್ನು ನೋಡಿ ಅತ್ಯಾನಂದವಾಗುತ್ತದೆ. ನಮ್ಮ ದೇಹ ಬಲವು ಅಳಿಯುತ್ತಿದ್ದರೂ ಶ್ರೀ ಗುರುವಿನ ಒಲುಮೆಯಿಂದ ಮಹಾಮಂತ್ರಲೇಖನ ತಪಸ್ಸಿನಲ್ಲಿ ನಿರತರಾದ ನಮಗೆ ನಮ್ಮ ವಿದ್ಯಾರ್ಥಿಗಳು ಧರ್ಮಾಭಿಮಾನಿಗಳಾಗುತ್ತಿರುವರೆಂದು ಕೇಳಿದಂತೆಲ್ಲಾ ನಮ್ಮ ಆಯುಷ್ಯವೇ ಹೆಚ್ಚುತ್ತಿರುವಂತೆ ಭಾಸವಾಗುತ್ತದೆ. ಏಕೆಂದರೆ ನಮ್ಮ ತಪಸ್ಸಿನಿಂದ ನಾವು ಅಪೇಕ್ಷಿಸುವ ಫಲ ಅದೊಂದೇ; ನಮ್ಮಲ್ಲಿರುವ ವಿದ್ಯಾರ್ಥಿಗಳು ಜ್ಞಾನಿಗಳೂ, ಧರ್ಮಾಭಿಮಾನಿಗಳೂ, ಗುರುಭಕ್ತಿ, ದೈವಭಕ್ತಿಸಂಪನ್ನರೂ ಆದರೆಂದರೆ ಅದರಿಂದ ನಮಗೆ ಸಾಯುಜ್ಯ, ಸಾರೂಪ್ಯ, ಸಾಲೋಕ್ಯಗಳಪ್ರಾಪ್ತಿಯಾದಷ್ಟು ಆನಂದ ವಾಗುತ್ತದೆ.

ಇಂದು ವಿದ್ಯಾರ್ಥಿಗಳಿಗೆ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ತಾಂತ್ರಿಕ ಶಿಕ್ಷಣವಿತ್ತು ಅವರಲ್ಲಿ ನೈಪುಣ್ಯತೆಯನ್ನು ಬೆಳೆಸಲು ಸಹಸ್ರಾರು ಸಂಸ್ಥೆಗಳಿವೆ ಈ ವಿಚಾರಗಳಲ್ಲಿ ನಮ್ಮ ವಿದ್ಯಾರ್ಥಿಗಳು ಪರಿಣಿತರಾಗಬೇಕಾದದ್ದು ಅವಶ್ಯಕ. ಆದರೆ ಅವೇ ಅವರ ಜೀವನದ ಪರಮಗುರಿಯಾಗಿರಬಾರದು. ಜೀವನವನ್ನು ಪೂರ್ಣಗೊಳಿಸಲು ಎಲ್ಲಾ ನೈಪುಣ್ಯತೆಯು ಸಾಧನಮಾತ್ರವಾಗಿರಬೇಕು. ಪೂರ್ಣತೆಯನ್ನು ಗಳಿಸುವುದೇ ಜೀವನದ ಗುರಿಯಾಗಿ ಎಲ್ಲ ವೃತ್ತಿಗೂ ಧರ್ಮ, ಶ್ರದ್ಧೆ, ಭಕ್ತಿಗಳು ಅಡಿಗಲ್ಲಾಗಿರಬೇಕು. ನಾಗರೀಕತೆಯ ಹೆಸರಿನಲ್ಲಿ ಅಡ್ಡದಾರಿ ಹಿಡಿಯುತ್ತಿರುವ ಜನತೆ ಧರ್ಮ ಭಕ್ತಿ ಎಂದರೆ ಹಳೆಯ ಕಾಲದ ಜನರ ಅಪ್ರಯೋಜಕವಾದ ನುಡಿಗಳೆಂದೂ, ಅವು ಮಾನವೀಯತೆಯ ಮುನ್ನಡೆಗೆ ಕಂಟಕಗಳೆಂದೂ ಅಲ್ಲಗಳೆಯುವುದಕ್ಕೆ ತೊಡಗಿದ್ದಾರೆಂದು ಕೇಳಿದ್ದೇವೆ. ಧರ್ಮಬಾಹಿರವಾದ ಕೃತಿ ಯಾವುದೂ ಶಾಶ್ವತವಾಗಿಲ್ಲ. ಆದುದರಿಂದ ನಮ್ಮ ಯುವಕರು ಬುದ್ಧಿಯನ್ನು ಬೆಳೆಸಿಕೊಳ್ಳುವುದರ ಜೊತೆಗೆ ಆತ್ಮ ವಿಕಾಸವನ್ನು ಮಾಡಿಕೊಳ್ಳಲು ಪ್ರಯತ್ನಿಸಲೆಂದು ಹಾರೈಸುತ್ತೇವೆ.

ಧರ್ಮಾಭಿಮಾನಿಗಳೂ, ವಿಚಾರಶೀಲರೂ, ನ್ಯಾಯನಿಷ್ಠರೂ ಆದ ಸಂಸ್ಥಾನದ ಶ್ರೇಷ್ಠನ್ಯಾಯಾಲಯದ ಪ್ರಧಾನನ್ಯಾಯಾಧೀಶರಾದ ಶ್ರೀಮಾನ್ ನಿಟ್ಟೂರು ಶ್ರೀನಿವಾಸ ರಾಯರೂ ಮತ್ತು ಸಂಸ್ಥಾನದ ರಾಜಕೀಯ ಪರಿಣಿತರಲ್ಲಿ ಒಬ್ಬರಾದ ಶ್ರೀಮಾನ್ ಎ. ಜಿ. ರಾಮಚಂದ್ರರಾಯರೂ ಈ ಸಮಾರಂಭಕ್ಕೆ ಅಭಿಮಾನದಿಂದ ಆಗಮಿಸಿ ಅಮೂಲ್ಯ ವಿಷಯಗಳನ್ನು ನಿಮಗೆ ತಿಳಿಸಿದ್ದಾರೆ. ಆದುದರಿಂದ ಜೀವನವನ್ನು ಕುರಿತು ನಾವು ಹೆಚ್ಚು ಹೇಳಬೇಕಾದ ಅಗತ್ಯವಿಲ್ಲ. ಮಾನವ ಜೀವನದ ಇತಿಹಾಸದಲ್ಲಿ ನಿಮಿಷ ನಿಮಿಷಕ್ಕೂ ಕ್ರೂರವೂ, ಘೋರವೂ ಆದ ಘಟನೆಗಳನ್ನು ಮಾನವ ಎದುರಿಸುತ್ತಾ ಬಂದಿರುವುದನ್ನು ಕಾಣುತ್ತೇವೆ. ಮಾನವ ಕ್ರೂರಮೃಗಗಳನ್ನು ಎದುರಿಸಲು ಆಯುಧಗಳನ್ನು ರಚಿಸಿಕೊಂಡ. ಬುದ್ಧಿ ಬೆಳೆಯಿತು. ಆದರಿಂದ ನಿರಪರಾಧಿ ಮಾನವರನ್ನು

ನಾಶಗೊಳಿಸುವ ಆಯುಧವನ್ನು ರಚಿಸಿಕೊಂಡಿದ್ದಾನೆ. ಹೀಗಾಗಿ ಬುದ್ಧಿ ಮಾನವತೆಯ ವಿನಾಶಕ್ಕೆ ಕಾರಣವಾಗಿದೆ. ಅದರಂತೆಯೇ ವಿಪತ್ತುಗಳೂ ವಿಲಕ್ಷಣವಾಗುತ್ತಿವೆ. ಜಗತ್ತಿನ ಎಲ್ಲಾ ವಿಪತ್ತನ್ನು ಸುಲಭವಾಗಿ ಎದುರಿಸಬಲ್ಲ ಸಮರ್ಥಸಾಧನವೆಂದರೆ ಧರ್ಮ ಜೀವನ ಒಂದೇ. ಆದುದರಿಂದ ಆಧುನಿಕ ಮಾನವ, ಧರ್ಮ ಜೀವಿಯಾಗಿ ಬಾಳುವುದನ್ನು ಕಲಿತರೆ ಎಲ್ಲ ವಿಪತ್ತಿನಿಂದ ಪಾರಾಗುತ್ತಾನೆ. ಮಾನವ ಜೀವನದಲ್ಲಿ ಧರ್ಮದ ವಿಪ್ಲವವಾಗಿ ವಿಪತ್ತಿನಿಂದ ಮಾನವತೆ ತಲ್ಲಣಿಸಿದಾಗ ಪರಮಾತ್ಮನು ಕಾರಣ ಪುರುಷನಾಗಿ ಅವತರಿಸಿ ಲೋಕಕಲ್ಯಾಣವನ್ನುಂಟುಮಾಡುತ್ತಾನೆ. ಅಂತೆಯೇ ಲೋಕ ಕಲ್ಯಾಣಕ್ಕಾಗಿ ಅವತರಿಸಿದ ಮಹಾನುಭಾವರಲ್ಲಿ ಆದಿಗುರು ಶ್ರೀ ಶಿವರಾತ್ರೀಶ್ವರರು ಒಬ್ಬರು. ಅವರ ಕೃಪೆಯಿಂದಲೇ ನಮ್ಮ ಸಂಸ್ಥೆಗಳು ಮಾನವತೆಗೆ ತಮ್ಮ ಸೇವೆಯನ್ನು ಸಲ್ಲಿಸುತ್ತಿವೆ. ಆದುದರಿಂದ ಲೋಕ ಹಿತಕ್ಕಾಗಿ ಅವತರಿಸಿದ ಯೋಗೀಶ್ವರರ ಪುಣ್ಯ ಸ್ಮರಣೆ ಮಾಡಿ ತಮ್ಮ ಆತ್ಮವಿಕಾಸಮಾಡಿಕೊಳ್ಳುವವರು ಧನ್ಯರು.

ದಿವ್ಯಾತ್ಮರನ್ನು ಭಜಿಸುವುದರಿಂದ ನಮ್ಮ ಜೀವನವನ್ನು ನಾವು ಪಾವನಗೊಳಿಸಿ ಕೊಳ್ಳಬೇಕು. ಪರಮಾತ್ಮನ ಸ್ಮರಣೆ, ಸ್ತುತಿಗಳಿಂದ ನಾವೇ ದೇವತ್ವವನ್ನು ಪಡೆಯ ಬಹುದು. ಸಿದ್ಧಾಂತಶಿಖಾಮಣಿಯಲ್ಲಿ,

> ಶ್ರವಣಂ, ಕೀರ್ತನಂ, ಶಂಭೋಃ ಸ್ಮರಣಂ ಪಾದಸೇವನಂ ।
> ಅರ್ಚನಂ, ವಂದನಂ, ದಾಸ್ಯಂ ಸಖ್ಯಂ ಆತ್ಮನಿವೇದನಂ ॥

ಎಂದರೆ ಪರಮಾತ್ಮನ ಲೀಲೆಗಳನ್ನು ಕೇಳುವುದು, ಸ್ತುತಿಸುವುದು, ಸ್ಮರಿಸುವುದು ಚರಣಸೇವೆ, ಪೂಜೆ, ವಂದನೆ, ದಾಸ್ಯ, ಸ್ನೇಹ, ಆತ್ಮಾರ್ಪಣ ಮುಂತಾದ ಒಂಬತ್ತು ಮಾರ್ಗಗಳಿಂದ ವಿಶ್ವಾತ್ಮನನ್ನು ಒಲಿಸಿ ನಾವು ದೈವತ್ವವನ್ನು ಪಡೆಯಬಹುದೆಂದು ಹೇಳಿದೆ. ಮಾನವ ತನ್ನ ಕಲ್ಯಾಣವನ್ನು ಸಾಧಿಸಲು ಭಕ್ತಿಯೇ ಸುಲಭವಾದ ಮಾರ್ಗ. ಭಕ್ತಿ ಮೇಲೆ ಹೇಳಿದಂತೆ ಒಂಭತ್ತು ಸುಲಭರೀತಿಯಾಗಿವೆ. ಇಂದು ನೆರ ವಾಗುತ್ತಿರುವ ಸಮಾರಂಭದಲ್ಲಿ ಒಂಭತ್ತು ಮಾರ್ಗಗಳೂ ಒಂದುಗೂಡಿದಂತೆ ಕಾರ್ಯ ಕ್ರಮಗಳೇರ್ಪಟ್ಟಿರುವುದು ಅತ್ಯಂತ ಸಂತೋಷದ ವಿಷಯ. ಮಾನವನಿಗೆ ಸುಖದ ಆಸೆಯಿಂದು ಬಹಳವಾಗಿದೆ. ಆದರೆ ಅವನು ಸುಖವನ್ನು ಬಯಸಿದಷ್ಟು ಕಷ್ಟಗಳೇ ಬರುತ್ತಿವೆ. ಏಕೆಂದರೆ ಅವನು ಇಂದು ಬಯಸುತ್ತಿರುವ ಸುಖ ಕ್ಷಣಿಕವಾದದ್ದು, ಸಂಕುಚಿತವಾದದ್ದು. ಅದಕ್ಕಾಗಿ "ಯೋ ವೈಭೂಮಾತತ್ಸುಖಂ । ನಾ ಅಲ್ಪೆ ಸುಖ ಮಸ್ತಿ" ಅಂದರೆ ನಿತ್ಯವಾದ ಸತ್ಯವನ್ನು ಹರಸುವುದೇ ನಿಜವಾದ ಸುಖ, ಅಲ್ಪವೂ, ಅನೀಶ್ವರವೂ ಆದುದು ಸುಖವಲ್ಲವೆಂದು ಉಪನಿಷತ್ತಿನಲ್ಲಿ ಹೇಳಿದೆ. ನಿತ್ಯವಾದ ಸತ್ಯ ಸುಖವೆಂದರೆ ಆತ್ಮ ಸುಖ ಅರ್ಥಾತ್ ಅಧ್ಯಾತ್ಮ ಸುಖವನ್ನು ಬಿಟ್ಟು ಮತ್ತೊಂದಿಲ್ಲ. ಸುಖ ಯಾವುದೇ ಆಗಲಿ ಭಕ್ತಿ ಯಿಂದಲ್ಲದೆ ಲಭ್ಯವಾಗದು.

ಭಕ್ತ್ಯಾ ಸಂತಾರಯೋತ್ಸರ್ವಂ ಆತ್ಮಾನಂವಶಮಾತ್ಮನಃ ।
ಭಿತ್ವಾ ಚರಾಚರಂ ವಿಶ್ವಂ ಶಿವೋ ಭೂತ್ವಾ ಸುಖೀಭವೇತ್ ॥

ಭಕ್ತಿಯಿಂದ ಮಾನವ ವಿಶ್ವವನ್ನೆ ಏಕೆ, ವಿಶ್ವಾತ್ಮನನ್ನೆ ವಶವರ್ತಿಯಾಗಿ ಮಾಡಿಕೊಂಡು ಸುಖಿಸಬಹುದೆಂದು ಧರ್ಮ ಗ್ರಂಥಗಳಲ್ಲಿ ಹೇಳಿದೆ. ಶಿವಶರಣ ಗಂಭೀರ ವಾಣಿಯಿಂದ "ಜಗವ ಸುತ್ತಿಪ್ಪುದು ನಿನ್ನ ಮಾಯೆ, ನಿನ್ನ ಸುತ್ತಿಪ್ಪುದು ಎನ್ನ ಮನ ಜಗಕೆ ನೀನು ಬಲ್ಲಿದ ನಿನಗೆ ಆನುಬಲ್ಲಿದ" ಎನ್ನುತ್ತಾರೆ. ಮಾನವ ತನ್ನ ಮನಸ್ಸಿನ ಶಕ್ತಿಯಿಂದ ಪರಮಾತ್ಮನನ್ನೆ ಗೆಲ್ಲಬಹುದೆಂದು ಹೇಳುತ್ತಾರೆ. ಅಂದರೆ ಮಾನವ ತನ್ನ ಕರ್ತವ್ಯದಲ್ಲಿ ಅಭಿಮಾನಿಯೂ, ಶ್ರದ್ಧಾವಂತನೂ ಆದರೆ ತನ್ನ ಕರ್ತವ್ಯದ ಪೂರ್ಣ ಫಲವನ್ನು ಪಡೆಯುತ್ತಾನೆ. ಇಂದು ಮಾನವ ಯಾವ ಕಾರ್ಯದಲ್ಲೂ ಶ್ರದ್ಧೆಯಿಂದ ಅಭಿಮಾನದಿಂದ ದುಡಿಯುತ್ತಿಲ್ಲ. ರೈತ ತನ್ನ ವ್ಯವಸಾಯವನ್ನಾಗಲಿ, ನೌಕರ ತನ್ನ ನೌಕರಿಯನ್ನಾಗಲೀ, ವಿದ್ಯಾರ್ಥಿ ತನ್ನ ಅಭ್ಯಾಸವನ್ನಾಗಲೀ, ಶ್ರದ್ಧೆ ಮತ್ತು ಅಭಿಮಾನಗಳಿಂದ ಮಾಡುತ್ತಿಲ್ಲ. ಆದುದರಿಂದ ಎಲ್ಲಾ ಕ್ಷೇತ್ರಗಳಲ್ಲೂ ಅಪೂರ್ಣತೆ, ಅಶಾಂತಿಗಳು ತಾಂಡವವಾಡುತ್ತಿವೆ. ಕರ್ತವ್ಯದಲ್ಲಿ ಶ್ರದ್ಧೆಯಿದ್ದರೆ ಅದೇ ಭಕ್ತಿಯಾಗುತ್ತದೆ. ಅದೇ ಸುಖದ ಕಲ್ಪತರುವಾಗುತ್ತದೆ. ಅದನ್ನೆ ಶರಣರು 'ಕಾಯಕವೇ ಕೈಲಾಸ' ಎನ್ನುತ್ತಾರೆ. ಇದೇ ಆದಿಗುರು ಶ್ರೀ ಶಿವರಾತ್ರೀಶ್ವರರು ನಮಗಿತ್ತ ದಿವ್ಯ ಸಂದೇಶ. ನಮ್ಮ ನಮ್ಮ ಕರ್ತವ್ಯವನ್ನು ಶ್ರದ್ಧೆ ಮತ್ತು ನಿಷ್ಠೆಯಿಂದ ಪಾಲಿಸುವುದನ್ನು ಕಲಿತರೆ ಲೋಕದ ಕಲ್ಯಾಣವನ್ನು ಸಾಧಿಸಿದಂತಾಗುತ್ತದೆ. ಆದುದರಿಂದ ನಮ್ಮ ಈ ಸಮಾರಂಭ ಜನತೆಯಲ್ಲಿ ಶ್ರದ್ಧೆಯನ್ನು ಮೂಡಿಸುವ ಮಹಾಯಾಗವೆಂದು ನಾವು ಭಾವಿಸಿದ್ದೇವೆ. ಈ ಮಹಾಯಾಗದಿಂದ ನಮ್ಮೆಲ್ಲರಲ್ಲಿ ಕರ್ತವ್ಯನಿಷ್ಠೆಯ ಅರಿವು ಹೆಚ್ಚಿ ನಮ್ಮೆಲ್ಲರನ್ನೂ ಶ್ರೀ ಗುರುವು ಅನುಗ್ರಹಿಸಲೆಂದು ಹಾರೈಸಿ ವಿರಮಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ಈ ಸಮಾರಂಭವು ಉತ್ತಮ ಸಂದೇಶಗಳ ಸಮರಸದಿಂದ ಯೋಗ ಮಂಟಪದಂತೆ ಬೆಳಗಿತು. ನಂತರ ಮಹಾಮಂಗಳಾರತಿ ನಾಟಕಾದಿ ಸಾಂಸ್ಕೃತಿಕ ಕಾರ್ಯಗಳು ನೆರವೇರಿದುವು.

————

# ಸಪ್ತಾಹದ ಎರಡನೇ ದಿನ

ತಾ॥ 8-1-62

ಸಪ್ತಾಹ ಸಮಾರಂಭದ ದ್ವಿತೀಯದಿನದ ಕಾರ್ಯಕ್ರಮಗಳು ಮೈಸೂರು ವಿಭಾಗದ ಇನಾಂರದ್ದಿಯಾತಿ ಇಲಾಖಾಧಿಕಾರಿಗಳಾದ ಶ್ರೀಮಾನ್ ಕೆ. ಜಿ. ಪುಟ್ಟಣ್ಣಯ್ಯನವರ ಘನ ಅಧ್ಯಕ್ಷತೆಯಲ್ಲಿ ನಡೆದುವು. ಸಮಾರಂಭದ ಪ್ರಧಾನ ಭಾಷಣಕಾರರಾದ ಮೈಸೂರು ನಗರ ನ್ಯಾಯಾಧೀಶರಾದ ಶ್ರೀಮಾನ್ ಆರ್. ಬಿ. ನಾಯಕ್, ಎಂ.ಎ., ಎಲ್.ಎಲ್.ಎಂ., ಇವರು ಕನ್ನಡ ನಾಡಿನ ಸಂತರು ಶರಣರು ನಾಡಿನ ಸಂಸ್ಕೃತಿಯ ಅಭ್ಯುದಯಕ್ಕೆ ನೀಡಿದ ಸಂದೇಶವನ್ನು ಹೃದಯಂಗಮವಾಗಿ ವಿವರಿಸಿದರು.

## ಸಂತರು ಜನತೆಗಾಗಿ ಬದುಕಿದವರು

ಭಾರತ ಇಂದು ಸ್ವತಂತ್ರವಾಗಿದೆ. ಸ್ವತಂತ್ರರೆಂಬ ಅಭಿಮಾನ ನಮ್ಮಲ್ಲಿದೆ. ಆದರೆ ಕೇವಲ ರಾಜಕೀಯ ಸ್ವಾತಂತ್ರ ಬಂದುದಕ್ಕಾಗಿ ನಾವು ಹೆಮ್ಮೆಪಡುವುದು ಸರಿಯಲ್ಲ. ರಾಜ್ಯದಲ್ಲಿ ಆಳ್ವಿಕೆಗಳು ಒಂದಲ್ಲ ಒಂದು ರೀತಿಯಲ್ಲಿ ಬದಲಾವಣೆ ಹೊಂದುತ್ತಲೇ ಇರುತ್ತವೆ. ಆದರೆ ಯಾವ ಕಾಲಕ್ಕೂ ಯಾವ ಕಾರಣದಿಂದಲೂ ಅಳಿಯದೆ ಉಳಿಯುವಂತಹ ಸಂಪತ್ತಿಗಾಗಿ ನಾವು ಅಭಿಮಾನ ಪಡಬೇಕು. ಅದರ ರಕ್ಷಣೆಮಾಡಿ ಕೊಂಡು ಬರಬೇಕು. ಅದು ನಮ್ಮ ಬದುಕಿನ ಭವ್ಯತೆಗಾಗಿ ಸಂತರು ಮತ್ತು ಶರಣರು ಕೊಟ್ಟ ಸಂದೇಶ. ಆ ಮಹಾನುಭಾವರು ಕೇವಲ ಪಂಡಿತರಾಗಿ ಪಾಂಡಿತ್ಯವನ್ನು ಪ್ರದರ್ಶಿಸಿಲ್ಲ. ಜೀವನದ ಸಿಹಿ ಕಹಿಗಳೆಲ್ಲವನ್ನು ಅನುಭವಿಸಿ ಊರಿಬರಲಿ ಸಿರಿಬರಲಿ ಸಮಾನಭಾವನೆಯಿಂದಿದ್ದು ತಮ್ಮ ಅನುಭವವನ್ನು ಅನ್ಯರ ಅಭ್ಯುದಯವಾಗಲೆಂದು ನಮಗೆ ಕೊಟ್ಟಿದ್ದಾರೆ. ಜಾತೀಯ ಅಥವಾ ಪ್ರಾಂತೀಯ ದ್ವೇಷಗಳನ್ನಾಗಲಿ ಧರ್ಮ ಜಿಜ್ಞಾಸೆಯ ತೊಡಕನ್ನಾಗಲಿ ಯಾವ ಕಾರಣದಿಂದಲೂ ಬೆಳೆಯಬಾರದೆಂದು ಆಶಿಸಿ ಸರ್ವಧರ್ಮಗಳ ಸಮನ್ವಯಕ್ಕಾಗಿ ಅವರು ಶ್ರಮಿಸಿದರು. ಬಸವಣ್ಣನವರು 'ದೇವನೊಬ್ಬ ನಾಮಹಲವು' ಎಂದಾಗ ನಮ್ಮ ನಮ್ಮಲ್ಲಿ ಬೆಳೆಯುತ್ತಿರುವ ಸಂಕುಚಿತ ಮನೋಭಾವನೆಗಳನ್ನು ತೊಡೆದು ಹಾಕಲು ಯತ್ನಿಸಿದರು. ಕನ್ನಡದ ದಾಸರು ಸಹ ಅಂತೆಯೇ ಲೋಕಕಲ್ಯಾಣದ ನಾಂದಿಯನ್ನೇ ಹಾಡಿದವರು. ಆದುದರಿಂದ ಅವರ ಅಮರವಾಣಿ ಯಾವುದೇ ಒಂದು ಕಾಲಕ್ಕೆ ಒಂದು ದೇಶಕ್ಕೆ ಸಂಬಂಧಿಸಿಲ್ಲ. ಇಡೀಮಾನವಕೋಟಿಗೆ ಆಚಂದ್ರಾರ್ಕವಾಗಿ ಉಪಯುಕ್ತವಾಗಬೇಕೆಂದೂ ಸಮನ್ವಯ ಮನೋಭಾವನೆಯನ್ನು ತಿಳಿದು ಜನ ಬದುಕಬೇಕೆಂದೂ ಸಂತರು ಆಶಿಸಿದರು. ಅಂತಹ ಸಮನ್ವಯ ಸಂಸ್ಕೃತಿ ಜನಜೀವನದಲ್ಲಿ ಬರುವಂತೆ ನಡೆದು ತೋರಿಸಲು ಯತ್ನಿಸಿ ಜನತೆಗಾಗಿ ಅವರು ಬದುಕಿದರು. ಬಾಳದೋಣಿಯನ್ನು ನಡೆಸಿದರು.

ಅಂತಹ ಸಂತರಲ್ಲಿ ಆಚಾರ್ಯರಲ್ಲಿ ಶ್ರೀ ಶಿವರಾತ್ರೀಶ್ವರರು ಒಬ್ಬರು ಮಹಾನು ರರು. ಆ ಮಹಾನುಭಾವರ ಜಯಂತಿಯನ್ನು ವಿದ್ಯಾರ್ಥಿಗಳು ನೆರವೇರಿಸುತ್ತಿರು ು ಅತ್ಯಾನಂದದ ಸಂಗತಿ. ಈ ಸಂಸ್ಥೆಯ ಕಾರ್ಯಕ್ರಮದಲ್ಲಿ ಅನೇಕ ಬಾರಿ ಗವಹಿಸುವ ಸುಯೋಗ ನನಗೆ ಪ್ರಾಪ್ತವಾಗಿದೆ. ಇಲ್ಲಿನ ಕಾರ್ಯಕ್ರಮಗಳು ಘನೀಯವೆನಿಸಿವೆ. ಹಿರಿಯ ಜಗದ್ಗುರುಗಳವರ ಮಂತ್ರ ಲೇಖನ ತಪಸ್ಸು ಯ ಜಗದ್ಗುರುಗಳ ವಿದ್ಯಾದಾನ ಕ್ರಿಯೆಯು ನನಗೆ ಅಚ್ಚರಿಗೊಳಿಸುವ ಅದ್ಭುತ ಟನೆಗಳಾಗಿವೆ. ಎಂದು ಸಂಸ್ಥೆಗಳನ್ನು ಮತ್ತು ಗುರುಗಳೀರ್ವರ ತಪೋಶಕ್ತಿಯನ್ನು ಶಂಸಿಸಿದರು.

ಇಂದು ನಮ್ಮ ನಾಡಿನ ಯುವಕರಲ್ಲಿ ಧರ್ಮ ಜಾಗೃತಿಯಾಗುವುದು ಅಗತ್ಯ. ುವುದನ್ನೇ ಅಭ್ಯಾಸಮಾಡಲಿ ಯಾವುದೇ ವೃತ್ತಿಯನ್ನು ಅವಲಂಬಿಸಲಿ ಪ್ರತಿ ೊಬ್ಬರೂ ಜೀವನದಲ್ಲಿ ಆನಂದವನ್ನು ಮನಸ್ಸಿನಲ್ಲಿ ಶಾಂತಿಯನ್ನೂ ನೆಲೆಗೊಳಿಸಿ ಾಳ್ಳುವುದು ಅಗತ್ಯ. ಮನಸ್ಸಿನ ಶಾಂತಿ ಉತ್ತಮ ಸಾಹಿತ್ಯಾಭ್ಯಾಸದಿಂದ ಬರುತ್ತದೆ. ಂತರ ಸಂದೇಶಗಳನ್ನು ಅಭ್ಯಾಸಮಾಡಿ ಮನನಮಾಡುವುದರಿಂದ ಜೀವನದಲ್ಲಿ ಂತೋಷದ ನೂತನ ಪ್ರೇರಣೆಯೊದಗುತ್ತಿರುತ್ತದೆ. ಆದುದರಿಂದ ನಮ್ಮ ನಾಡಿನ ಯುವಜನರು ಕನ್ನಡದಲ್ಲಿ ಉತ್ತಮಕೃತಿಗಳನ್ನು ಅವಕಾಶ ಸಿಕ್ಕಿದಾಗಲೆಲ್ಲಾ ಓದುವ ಅಭ್ಯಾಸವನ್ನು ಬೆಳೆಸಿಕೊಂಡು ಬರಬೇಕು. ಈ ಸಮಾರಂಭದಲ್ಲಿ ಎಷ್ಟೋ ಉತ್ತಮ ವಿಷಯಗಳನ್ನು ತಿಳಿದುಕೊಳ್ಳಬಹುದು. ಅವುಗಳನ್ನು ಜೀವನದಲ್ಲಿ ಪ್ರಯೋಗಕ್ಕೆ ತರಲು ಪ್ರಯತ್ನಿಸಬೇಕು. ನಾವು ಮನಸ್ಸು ಮಾಡಿದರೆ ಎಂತಹ ಗುರಿಯನ್ನಾದರೂ ಸಾಧಿಸಬಹುದು. ಆದರೆ ಅದಕ್ಕೆ ತಕ್ಕ ಸಾಧನಾಶಕ್ತಿ ದೃಢಸಂಕಲ್ಪಗಳು ಬೇಕು. ನಮ್ಮಲ್ಲಿರುವ ಚೈತನ್ಯ ಕಿರಿದಲ್ಲ. ಅದನ್ನು ಬೆಳೆಸಿಕೊಳ್ಳುವ ಮನೋಭಾವನೆಗೆ ಇಂದು ಕೊರತೆಯಾಗಿದೆ. ಆ ಕೊರತೆಯನ್ನು ಈ ಸಮಾರಂಭವು ನೀಗುವುದೆಂದು ಆಶಿಸು ತ್ತೇನೆ ಎಂದು ಸ್ಫೂರ್ತಿಯುತ ಭಾಷಣ ಮಾಡಿ ಇಂದಿನ ಸಮಾರಂಭಕ್ಕೆ ಸಂದೇಶ ರೂಪವಾದ ತಾವೇ ರಚಿಸಿದ ಕವನವೊಂದನ್ನು ಓದಿದರು.

## ವಚನಾಮೃತ

ವಚನವಾಙ್ಮಯ ಬುಧಗೆ ಸರ್ವ ತತ್ವದ ತಿರುಳು
ಲೌಕಿಕಾ ಲೌಕಿಕದ ಸರಳ ಸಮರಸ ನುಡಿಯು ॥೧॥

ಈಶನೊಬ್ಬನೆ ಇಹನು ಶಿವಕೇಶವನು ಎನಿಪ
ಅವನಪದ ಸೇರಲ್ಕೆ ವಿವಿಧ ಪಥಗಳು ಇರಲು ॥೨॥

ಜ್ಞಾನ ವೈರಾಗ್ಯಗಳ ಮಿಗಿಲೆನಿಸಿ ಸಾಧಕಗೆ
ಸುಗಮವಾಗಿಹ ಭಕ್ತಿ ಮಾರ್ಗವೇ ಹರಪ್ರಿಯ ॥೩॥

ಇಹವ ಲೆಕ್ಕಿಸದವಗೆ ಪರದಿಮುಕುತಿಯದೆಂತು
ಪತಿತ ದಲಿತಾಭ್ಯುದಯ ಪರಮೇಶ್ವರನ ಪೂಜೆ
ಕುಲಕರ್ಮ ಮತಲಿಂಗ ವರ್ಣಭೇದಗಳಿಲ್ಲ
ಕುಟಿಲಕೃತಗಳೆಂದು ಜನತೆಗುಪದೇಶಿಸುತೆ
ಶಿವಶರಣರ್ ಹರಿದಾಸರ್ ಅರುಹುತಲಿ ನೀತಿಯನು
ಬಾಳಿನಾರೀತಿಯೊಳು ಪರಿಪೂರ್ಣತೆಯ ತೋರಿ
ಆತ್ಮಾನುಭವ ಜನ್ಯ ಅನುಭಾವ ಸಾಹಿತ್ಯ
ನಿತ್ಯಸತ್ಯದ ದಿವ್ಯ ದರ್ಪಣವೋ ದರ್ಶನವೋ

ಎಂಬುದಾಗಿ ತಿಳಿಸಿ ತಮ್ಮ ಭಾಷಣವನ್ನು ಮುಗಿಸಿದರು.

## ಸಪ್ತಾಹದ ಮೂರನೇ ದಿನ (9-1-62)

ಸಪ್ತಾಹ ಸಮಾರಂಭದ ಮೂರನೇ ದಿನದ ಕಾರ್ಯಕ್ರಮಗಳು ಸಂಸ್ಥಾ ಗೃಹಸಚಿವರಾದ ಶ್ರೀಮಾನ್ ಹೆಚ್. ಎಂ. ಚನ್ನಬಸಪ್ಪನವರ ಅಧ್ಯಕ್ಷತೆಯಲ್ಲಿ ನ ರಿತು. ಸಂಸ್ಥಾನದ ಸಂಸ್ಕೃತಿ ಪ್ರಸಾರ ಶಾಖಾ ಡೈರೆಕ್ಟರವರಾದ ಶ್ರೀಮಾನ್ ಕೆ. ಧರಣೇಂದ್ರಯ್ಯನವರು ಕನ್ನಡ ಸಾಹಿತ್ಯದಲ್ಲಿ ಕಂಡು ಬರುವ ಸಂಸ್ಕೃತಿ ದರ್ಶನ ಸಭೆಗೆ ವಿವರಿಸುತ್ತ ಚಿತ್ತಾಕರ್ಷಕ ಭಾಷಣ ಮಾಡಿದರು.

## ಆತ್ಮಶಕ್ತಿ ಬೆಳೆಯಬೇಕು

ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತೀ ಮಹೋತ್ಸವ ಸಮಾರಂ ಪುರಾತನ ಸಂಸ್ಕೃತಿ ವೈಭವದ ಪುನರುಜ್ಜೀವನಕ್ಕೆ ಭವಿಷ್ಯ ಸೂಚಕವಾಗಿದೆಯೆ ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಾ ಶ್ರೀ ಧರಣೇಂದ್ರಯ್ಯನವರು ಶರಣಸಾ ಮತ್ತು ಸಾಹಿತ್ಯಾಭ್ಯಾಸದಿಂದಾಗುವ ಸತ್ಫಲಗಳನ್ನು ತಿಳಿಸಿದರು. ಶ್ರೀಯು ಮುಂದುವರಿದು "ಭಾರತವು ಪರಕೀಯರ ಪಾಲಿಗೆ ಸಿಕ್ಕಿದಾಗಲೆಲ್ಲಾ ಭಾರತೀ ನಿಸ್ತೇಜರಾಗುತ್ತಾ ಬಂದು ನಮ್ಮ ಸರ್ವಶಕ್ತಿಯೂ ಕುಂದಿಹೋಗುತ್ತಿತ್ತು. ಅಂತ ನಮ್ಮ ಸಂಸ್ಕೃತಿ ನಶಿಸಿಹೋಗುತ್ತಿತ್ತು. ಪರಕೀಯರು ನಮ್ಮ ಮೇಲೆ ಶತಮಾ ಆಳ್ವಿಕೆ ನಡೆಸಿ ನಮ್ಮ ಸಂಸ್ಕೃತಿಯನ್ನು ಬೇರುಸಹಿತ ಕಿತ್ತೊಗೆಯಲು ಸತತ ಪ್ರ ನಡೆಸಿದರು. ಆದರೆ ಯಾವ ಆಡಳಿತಗಾರರೇ ಆಗಲಿ ನಮ್ಮ ಆರ್ಥಿಕ ಮತ್ತು ಸಾ ಜಿಕಜೀವನದಲ್ಲಿ ಮಾರ್ಪಾಡುಗಳನ್ನು ಮಾಡಲು ಸಮರ್ಥರಾಗಲಿಲ್ಲ. ಏಕೆ ಅಂತಹ ಪ್ರಸಂಗ ಒದಗಿದಾಗಲೆಲ್ಲಾ ಪ್ರವಾದಿಗಳು, ತರುಣರು ಅವತರಿಸಿ ಸಂಸ್ಕೃತಿಯ ಸಂರಕ್ಷಣೆ ಮಾಡಿದ್ದಾರೆ. ಅದರಂತೆ ನಮ್ಮ ನಾಡಿನ ಮಠಗಳು ಸಂ ಯನ್ನು ಮಾತ್ರ ಎಂತಹ ಕಷ್ಟ ಪ್ರಸಂಗದಲ್ಲೂ ಎಡೆಬಿಡದೆ ಸಂರಕ್ಷಣೆ ಮಾಡಿಕೊ

ದ್ದಾರೆ. ಅಂತಹ ಉಚ್ಚ ಸಂಪ್ರದಾಯಗಳಿಗೆ ಸೇರಿದ ಸುತ್ತೂರು ಜಗದ್ಗುರು ವ ಮೂಲಕರ್ತೃಗಳಾದ ಜಗದ್ಗುರು ಶ್ರೀ ಶಿವರಾತ್ರೀಶ್ವರರ ಜಯಂತೀ ಮಹೋ ಸಮಾರಂಭವು ಅಧ್ಯಾತ್ಮಶಕ್ತಿ ಚೇತನದ ಪ್ರತೀಕವಾಗಿದೆ.

## ಎಂಟನೂರು ವರ್ಷದ ಹಿಂದೆ

ಎಂಟು ಶತಮಾನದ ಹಿಂದೆ ಕಲ್ಯಾಣದಲ್ಲಿ ಬಸವಣ್ಣನವರು ಅವತರಿಸಿ ಕನ್ನಡ ಸ್ಕೃತಿಯನ್ನು ಉದ್ಧರಿಸಿದ ಮಹಾನುಭಾವರು. ಅವರು ರಚಿಸಿದ ವಿಶ್ವಭಾವನೆಗಳ ದ್ರವಾದ ಅನುಭವಮಂಟಪ ಮತ್ತು ಅನುಭವಮಂಟಪದಲ್ಲಿ ನಡೆದ ವಾದವಿವಾದ ಸಾಂಸ್ಕೃತಿಕ ಇತಿಹಾಸದ ಸ್ವರ್ಣಸಂಪುಟಗಳು. ಬಸವಣ್ಣನವರು ಮಾನವ ಾಜದ ಶುದ್ಧೀಕರಣಕ್ಕಾಗಿ ಅವತರಿಸಿದ ಯುಗಪುರುಷರು, ಮಾನವ ಧರ್ಮಕ್ಕೆ ತಿ ಅಸ್ತಿಭಾರವಾಗಿರಬೇಕು. ಇವು ಎಲ್ಲ ಮಾನವರ ಅಭ್ಯುದಯಕ್ಕೆ ಅಗತ್ಯವೆಂದು ಜೀವನದಲ್ಲಿ ನೈತಿಕ ಸಂಪತ್ತು ಬೆಳೆಯಲು ಶ್ರಮಿಸಿದರು. ಅವರ ಅನುಭವ ಟಪದಲ್ಲಿ ಜಾತಿಮತದ ಭೇದವಿರಲಿಲ್ಲ. ಗಂಡು ಹೆಣ್ಣೆಂಬ ಸಂಕುಚಿತಮನೋಭಾವ ಅವಕಾಶವಿರಲಿಲ್ಲ. ಅದಕ್ಕೆ ಮಹದೇವಿಯಕ್ಕನ ಜೀವನ ಸಾಕ್ಷಿ. ಅಕ್ಕ ರೂಪಿನಲ್ಲಿ ಣ್ಣು ಕರ್ತವ್ಯದಲ್ಲಿ ಗಂಡು. ಅಕ್ಕನ ವಾಣಿ ವಚನ ಸಾಹಿತ್ಯದಲ್ಲಿ ಅಗ್ರಸ್ಥಾನ ತಿದಿದೆ. ವಚನಸಾಹಿತ್ಯ ಕಾವ್ಯಮಯವಾಗಿದೆ. ನಮ್ಮ ಜನಜೀವನದಲ್ಲಿ ಆನಂದ ನ್ನು ಅನುಭವಿಸಲು ಯತ್ನಿಸಬೇಕು. ಕಾವ್ಯಗಳಲ್ಲಿರುವ ಅನುಭವಾಮೃತವನ್ನು ತೆಯಲು ನಮ್ಮಲ್ಲಿ ಕಾವ್ಯಾಭ್ಯಾಸ ಅದರಂತೆ ಆಚರಣೆ ನಮ್ಮಲ್ಲಿ ಬೆಳೆಯಬೇಕು. ರಿಂದ ನಮಗಾಗುವ ಲಾಭ ಕಾವ್ಯಾನಂದ. ಕಾವ್ಯಾನಂದ ಆತ್ಮಾನಂದಕ್ಕೆ ದಾರಿ ಾಗುತ್ತದೆ. ಆತ್ಮಾನಂದವೆಂದರೆ ಆತ್ಮಾಸಾಕ್ಷಾತ್ಕಾರದಿಂದ ನಮಗೆ ದೊರೆಯುವ ತ್ಯಾನಂದ. ಪ್ರಾಪಂಚಿಕ ವಸ್ತುವಿನ ಸಹಾಯವಿಲ್ಲದೆ ಆನಂದವನ್ನು ಪಡೆಯುವುದೇ ತ್ಮಾನಂದ ಅರ್ಥಾತ್ ಬ್ರಹ್ಮಾನಂದ. ಜನರಲ್ಲಿ ಆತ್ಮಶಕ್ತಿ ಹೆಚ್ಚಾಗಬೇಕು ಎಂದು ಚಾರಶೀಲ ಭಾಷಣಮಾಡಿದರು.

## ಯೋಜನೆಗಳೂ ಆಧುನಿಕ ಪವಾಡಗಳೇ !

ಅಧ್ಯಕ್ಷತೆ ವಹಿಸಿದ್ದ ಗೃಹಸಚಿವ ಶ್ರೀಮಾನ್ ಹೆಚ್. ಎಂ. ಚನ್ನಬಸಪ್ಪನವರು ಮಾತ ಾಡಿ "ಜನರಲ್ಲಿ ಇಂದು ರಚನಾತ್ಮಕವಾದ ಮಾನಸಿಕ ಬದಲಾವಣೆಯಾಗಬೇಕು. ಂದು ಸ್ವತಂತ್ರ ರಾಷ್ಟ್ರದಲ್ಲಿದ್ದೇವೆ. ದೇಶದಲ್ಲಿ ದಾರಿದ್ರ್ಯ ಅಜ್ಞಾನಗಳು ಅಳಿಯ ೇಕು. ಅದಕ್ಕಾಗಿ ಸರ್ಕಾರ ಸರ್ವಪ್ರಯತ್ನ ನಡೆಸುತ್ತಿದೆ. ಇಂದು ದೇಶದ ುಂದಿರುವ ಯೋಜನೆಗಳು ಆಧುನಿಕ ಯುಗದ ಪವಾಡಗಳು. ಹಿಂದೆ ಮಹಾನು ಾವರು ಪವಾಡಗಳಿಂದ ಮಹತ್ಕಾರ್ಯ ಸಾಧಿಸಿದ್ದರೆಂದು ಕೇಳಿದ್ದೇವೆ. ಅವರಂತೆ

ಹಲವಾರು ಅದ್ಭುತ ಯೋಜನೆಗಳನ್ನು ದೇಶದಲ್ಲಿ ನಡೆಸಿ ಸರ್ಕಾರ ಪವಾಡವನ್ನೆ
ಸುತ್ತಿದೆ. ಆದರೆ ಈ ಯೋಜನೆಗಳ ಫಲ ಜನತೆಗೆ ದೊರೆಯಬೇಕಾದರೆ
ಮನೋಭಾವ ಬದಲಾವಣೆ ಹೊಂದಬೇಕು. ಸೇವಾಮನೋಭಾವ ಬೆಳೆಯಬ
ಸೇವೆಮಾಡುವುದು ಅಧಿಕಾರಿಗಳಿಗೆ ಮಾತ್ರ ಸೇರಿದ್ದೆಂದು ಜನರು ಭಾವಿಸಬಾ
ಸೇವೆಮಾಡುವ ಅವಕಾಶ ದೇಶದಲ್ಲಿ ಎಲ್ಲರಿಗೂ ಇದೆ. ಯೋಜನೆಗಳಿಗೆ ಹೊ
ಕೊಂಡು ನಿಷ್ಠೆಯಿಂದ ಜನರು ತಮ್ಮ ತಮ್ಮ ಕರ್ತವ್ಯಪಾಲನೆ ಮಾಡುವುದ
ಅದೂ ಒಂದು ರೀತಿಯ ಸೇವೆಯೆನಿಸುತ್ತದೆ. ಜನತೆ ತಮ್ಮ ಅಭ್ಯುದಯಕ್ಕೆ ಸ
ವನ್ನೋ ಇತರ ಅಧಿಕಾರಿಗಳನ್ನೋ ಅವಲಂಬಿಸಿ ಸೋಮಾರಿತನವನ್ನು ಬೆಳೆಸಿಕೊ
ಪ್ರವೃತ್ತಿ ದೇಶದಲ್ಲಿ ಬಲವಾಗುತ್ತಿದೆ. ಇದನ್ನು ಅಳಿಸಿ ಕಾರ್ಯೋನ್ಮುಖ
ಮಾಡುವ ಕೆಲಸ ವಿದ್ಯಾವಂತ ಜನರ ಪಾಲಿಗಿದೆ. ಜನರಲ್ಲಿ ಉತ್ಸಾಹ ಕರ್ತವ್ಯ
ಗಳನ್ನು ಹೆಚ್ಚಿಸುವುದಕ್ಕಿಂತಲೂ ಮಿಗಿಲಾಗಿ ವ್ಯರ್ಥ ಟೀಕೆಮಾಡುತ್ತಾ ಕಾಲ
ಮಾಡುವವರ ಗುಂಪು ಬೆಳೆದಿದೆ. ಇಡೀ ರಾಷ್ಟ್ರವೇ ನನ್ನದು, ನನ್ನಮನೆ ಎಂಬ ವಿ
ಭಾವನೆ ಬೆಳೆದು ಸಮಾಜದ ಸರ್ವತೋಮುಖ ಬೆಳವಣಿಗೆಗೆ ಸರ್ವರೂ ಶ್ರಮಿಸಬ
ಯುಗಪುರುಷರಾದ ಬಸವಣ್ಣ, ಬುದ್ಧ, ಗಾಂಧೀಜಿಯವರು ಮಾನವ ಸಮಾ
ಏಳಿಗೆಗಾಗಿ ದುಡಿದು ದಾರಿ ತೋರಿದ್ದಾರೆ. ಅವರ ಮೇಲ್ಪಂಕ್ತಿಯನ್ನು ಅನು
ವಿಶಾಲಭಾವನೆಯ ತಳಹದಿಯ ಮೇಲೆ ನಮ್ಮ ರಾಷ್ಟ್ರ ನಿರ್ಮಾಣವಾಗಬೇಕು.
ರಾಷ್ಟ್ರದ ಭವಿಷ್ಯ ಇಂದಿನ ಯುವಕರನ್ನೇ ಅವಲಂಬಿಸಿದೆ. ಅವರಲ್ಲಿ ಇಂದು ವಿ
ಮನೋಭಾವ ಕರ್ತೃತ್ವ ಶಕ್ತಿ ಹೆಚ್ಚಬೇಕು. ಅವರು ನೀತಿವಂತರಾಗಿ ಬಾಳುವು
ಕಲಿಯಬೇಕು ಎಂದರು. ಜಗದ್ಗುರು ಶ್ರೀ ಶಿವರಾತ್ರೀಶ್ವರರ ಅನುಗ್ರಹದಲ್ಲಿ ನಡ
ತ್ತಿರುವ ಸಂಸ್ಥೆಗಳು ಯುವಕರಲ್ಲಿ ರಾಷ್ಟ್ರೀಯಭಾವನೆಯನ್ನು ಬೆಳೆಸಲು ಶ್ರ
ತ್ತಿವೆ. ನಮ್ಮ ಯುವಕರು ಅದನ್ನು ಸಫಲಗೊಳಿಸಬೇಕೆಂದು ಹಾರೈಸಿದರು. ಜ
ರುಗಳವರ ಸೇವಾ ತತ್ಪರತೆಯನ್ನು ಪ್ರಶಂಸಿಸಿದರು. ಸಾಂಸ್ಕೃತಿಕ ಕಾರ್ಯ
ಮಹಾಮಂಗಳಾರತಿಯೊಡನೆ ಸಮಾರಂಭವು ಮುಗಿಯಿತು.

## ನಾಲ್ಕನೆಯ ದಿನದ ಸಮಾರಂಭ (10-1-62)

ಜಯಂತಿ ಸಮಾರಂಭವು ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಿಂದ
ಉತ್ತಮ ಸಂದೇಶಗಳಿಂದಲೂ ಕೂಡಿ ದಿನದಿನಕ್ಕೆ ಹೆಚ್ಚು ಆಕರ್ಷಣೀಯವಾಗು
ಬಂದಿತು. ಅಂತೆಯೇ ನಾಲ್ಕನೇ ದಿನದ ಕಾರ್ಯಕ್ರಮಗಳು ಮೈಸೂರಿನ ಸಿ
ಜಡ್ಜ್‌ರವರು ಮತ್ತು ಜಿಲ್ಲಾಮ್ಯಾಜಿಸ್ಟ್ರೇಟ್‌ರವರೂ ಆದ ಶ್ರೀಮಾನ್ ಬಿ.ಎಸ್. ರು
ನನರ ಅಧ್ಯಕ್ಷತೆಯಲ್ಲಿ ನೆರವೇರಿದುವು. ರಾಜಸೇವಾಪ್ರಸಕ್ತ ಶ್ರೀಮಾನ್ ಸಿ.ಕೆ. ವೆ
ರಾಮಯ್ಯನವರು ಅಮೋಘವಾದ ಭಾಷಣ ಮಾಡಿದರು.

ಜಯಂತೀಮಹೋತ್ಸವದಲ್ಲಿ ಮೈಸೂರು ಸಿವಿಲ್ ಜಡ್ಜ್ ರವರಾದ ಶ್ರೀ ಬಿ. ಎಲ್.
ರುದ್ರಪ್ಪನವರು ಭಾಷಣ ಮಾಡುತ್ತಿರುವುದು.

ಜಯಂತೀಮಹೋತ್ಸವದಲ್ಲಿ ಗೃಹಸಚಿವರು ಶ್ರೀ ಹೆಚ್. ಎಂ.
ಚನ್ನಬಸಪ್ಪನವರು ಭಾಷಣ ಮಾಡುತ್ತಿರುವುದು.

## ಬಸವಣ್ಣನವರ ಆದರ್ಶ ಅನುಕರಣೀಯ

ರಾಜಸೇವಾಸಕ್ತ ಶ್ರೀ ಸಿ. ಕೆ. ವೆಂಕಟರಾಮಯ್ಯನವರು "ಭಕ್ತಿಭಂಡಾರಿ ಸವಣ್ಣನವರು ಕನ್ನಡ ಸಾಹಿತ್ಯಕ್ಕೆ ಸಂಸ್ಕೃತಿಗೆ ಕೊಟ್ಟ ಅಮೂಲ್ಯ ಕಾಣಿಕೆ ವಚನ ಾಹಿತ್ಯ. ಭಾರತದಲ್ಲಿ ಪ್ರಾಚೀನ ಕಾಲದಿಂದ ಇದ್ದು ನಶಿಸಿಹೋಗುತ್ತಿದ್ದ ಸಂಸ್ಕೃತಿ ುನ್ನು ಪುನರುಜ್ಜೀವನಗೊಳಿಸಲು ಪ್ರಯತ್ನಿಸಿದ ಮಹಾನುಭಾವರಲ್ಲಿ ಬಸವಣ್ಣ ವರು ಒಬ್ಬರು. ಜನತೆಯ ಕಲ್ಯಾಣಕ್ಕಾಗಿ ಬದುಕಿದ ಕಾರಣ ಪುರುಷರು ಅವರು. ನುಭವಮಂಟಪವನ್ನು ಕಟ್ಟಿ ಮಾನವರ ಅಂತರಂಗದ ಶೋಧನೆ ಮಾಡಿ ಆತ್ಮದರ್ಶನ ಾಡಿಸಲು ದಾರಿ ಮಾಡಿದ ಮಹಾಪುರುಷರು ಎಂದು ವಚನಶಾಸ್ತ್ರದ ಹಿರಿಮೆಯನ್ನು ುರಿತು ವಿದ್ವತ್ಪೂರ್ಣ ಭಾಷಣ ಮಾಡಿದರು.

ಬಸವಣ್ಣನವರು ದೇವನೊಬ್ಬನೆಂಬ ಸಂದೇಶವನ್ನಿತ್ತು ಜನತೆಯಲ್ಲಿ ವಿಶಾಲ ಾವನೆ ಬೆಳೆಯಲು ಅವಕಾಶಮಾಡಿದರು. ಜೀವನದಲ್ಲಿ ಧಾರ್ಮಿಕ ಪ್ರವೃತ್ತಿ ಹೆಚ್ಚು ಂತೆ ಮಾಡಿದರು. ಧರ್ಮವೆಂದರೆ ನಮ್ಮಲ್ಲಿ ಸಂಕುಚಿತಭಾವನೆಗೆ ಎಡೆಗೊಟ್ಟ ಾದವೀಕಲಹವನ್ನು ಉಂಟುಮಾಡುವ ನಿಯಮಾವಳಿಗಳಲ್ಲ-ಅವರ ದೃಷ್ಟಿಯಲ್ಲಿ ದಯುವೇ ಧರ್ಮದ ಮೂಲ" ಎಂದರೆ ಪರಹಿತಕ್ಕಾಗಿ ಪರೋಪಕಾರಿಯಾಗಿ ಬಾಳು ವೇ ಧರ್ಮ. ಇದು ಮಾನವೀಯ ಧರ್ಮ. ಒಂದು ಜಾತಿ ಮತದ ಗೊಂದಲ ಳಿಗೆ ದೇಶಕಾಲ ವರ್ತಮಾನಗಳಿಗೆ ಬಲಿಯಾಗದ ವಿಶಾಲ ಧರ್ಮ ಅರ್ಥಾತ್ ವಿಶ್ವ ರ್ಮ. ಇಂತಹ ಉದಾತ್ತ ತತ್ವಗಳನ್ನು ಬಸವಣ್ಣನವರು ಮತ್ತು ಶರಣರು ಕನ್ನಡ ಾಡಿಗೆ ಅರ್ಪಿಸಿದ್ದಾರೆ. ಸುಂದರವೂ, ಉದಾತ್ತವೂ ಆದ ವಚನಸಾಹಿತ್ಯ ಕನ್ನಡ ಾಡಿನ ಅಮೂಲ್ಯ ಸಂಪತ್ತು ವಚನಕಾರರು ಜೀವನದ ಎಲ್ಲ ಮುಖಗಳನ್ನೂ ಕುರಿತು ಚಾರಿಸಿದ್ದಾರೆ. ಮಾನವನ ಕಷ್ಟ ಸುಖಗಳು, ಜ್ಞಾನ ಅಜ್ಞಾನಗಳು, ಸಿರಿತನ ಡತನಗಳು ಇವೆಲ್ಲವುಗಳಿಗೆ ಕಾರಣವನ್ನು ವಿಚಾರ ಮಾಡಿದ್ದಾರೆ. ಬಾಹ್ಯ ಜೀವನ ನ್ನು ಶ್ರೇಯಸ್ಕರವಾಗಿ ಮಾಡಿಕೊಂಡು ಆತ್ಮಶಕ್ತಿ ಬೆಳೆಯಲು ನಾವು ಸಾಧಕರಾಗ ೇಕು. ನಮ್ಮ ಸಾಧನೆಗೆ ಮಾರ್ಗದರ್ಶನ ಶರಣರ ವಚನಾಮೃತ ರೂಪದಲ್ಲಿ ನಮಗೆ ಭಿಸುತ್ತದೆ ಎಂದು ಹತ್ತಾರು ಅತ್ಯುತ್ತಮ ವಚನಗಳನ್ನು ಉದಹರಿಸುತ್ತಾ ವಿಚಾರ ರಿತವಾದ ಭಾಷಣ ಮಾಡಿದರು.

ಸುತ್ತೂರು ವೀರಸಿಂಹಾಸನ ಮಠವು ಸಮಾಜದ ಪ್ರಗತಿಗಾಗಿ ನಡೆಸುತ್ತಿರುವ ದ್ಯಾಸೇವೆಯನ್ನು ಜಗದ್ಗುರುಗಳಲ್ಲಿರುವ ಉದಾರ ಭಾವನೆಗಳನ್ನೂ ಪ್ರಸ್ತಾಪಿಸಿ ಮ್ಮ ಆನಂದವನ್ನು ವ್ಯಕ್ತಪಡಿಸಿದರು.

ವಿದ್ಯಾರ್ಥಿವೃಂದವನ್ನುದ್ದೇಶಿಸಿ ಮಾತನಾಡುತ್ತಾ ಈ ಸಂಸ್ಥೆಗೆ ಮೂಲ ಕರ್ತೃ
ಗಳಾದ ಜಗದ್ಗುರು ಶ್ರೀ ಶಿವರಾತ್ರೀಶ್ವರರ ಪುಣ್ಯ ಜಯಂತಿಯನ್ನು ನಡೆಸಿ ತಮ
ಕೃತಜ್ಞತೆಯನ್ನು ಸಲ್ಲಿಸುತ್ತಿರುವ ವಿದ್ಯಾರ್ಥಿ ಜೀವನ ಧನ್ಯ ಜೀವನ. ಯುವಕರಲ್ಲಿ
ಗುರುಭಕ್ತಿ ದೈವಭಕ್ತಿಗಳು ಬೆಳೆಯುವುದು ನಮ್ಮ ನಾಡಿನ ಉತ್ತಮ ಭವಿಷ್ಯದ ಸೂಚನ
ಯೆಂದು ತಾವು ಆಶಿಸುವುದಾಗಿ ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀಮಾನ್ ಬಿ. ಎಂ. ರುದ್ರಪ್ಪನವರು ಮಾತನಾಡುತ್ತಾ
ಜಗದ್ಗುರುಗಳ ಸೇವಾತತ್ಪರತೆ ವಿದ್ಯಾಭಿಮಾನಗಳನ್ನು ಪ್ರಶಂಸಿಸಿದರು. ನಾವು
ಮನುಷ್ಯರಾಗಿ ಹುಟ್ಟಿದ್ದೇವೆ. ಆದರೆ ಜೀವನದ ಕೊನೆಯ ದಿನಗಳಲ್ಲಿ ನಾನು ಪರ
ಹಿತಕ್ಕಾಗಿ ಏನು ಮಾಡಿದ್ದೇನೆ ಎಂಬ ಪ್ರಶ್ನೆ ಹಾಕಿಕೊಂಡರೆ ಧೈರ್ಯವಾಗಿ ಉತ್ತರ
ಕೊಡಬಲ್ಲ ಸಾಮರ್ಥವನ್ನು ನಾವು ಬೆಳೆಸಿಕೊಳ್ಳಬೇಕು. ನಾವು ಯಾವುದೇ ರೀತಿಯ
ಜೀವನ ನಡೆಸಿದರೂ ಅನ್ಯರಿಗೆ ನಮ್ಮ ಕೈಲಾದ ಸೇವೆ ಸಲ್ಲಿಸುವ ಶಕ್ತಿಯನ್ನು ಬೆಳೆಸಿ
ಕೊಳ್ಳಬೇಕು—ಎಂದು ತಿಳಿಸಿದರು.

ಜಗದ್ಗುರುಗಳವರ ಆಶ್ರಯದಲ್ಲಿ ಅನೇಕ ಮಹತ್ಕಾರ್ಯಗಳು ನಡೆಯುತ್ತಿವೆ.
ಅನೇಕರು ಸಂಸ್ಕೃತಾಭ್ಯಾಸಮಾಡುತ್ತಿದ್ದಾರೆ. ಆದರೆ ಹೊಟ್ಟೆ ಹೊರೆಯುವ ಸಲುವಾಗಿ
ವಿದ್ಯಾಭ್ಯಾಸ ನಡೆಸಿದರೆ ಗುರುಗಳವರ ಶ್ರಮ ಪೂರ್ಣ ಸಾರ್ಥಕವಾಗುವುದಿಲ್ಲ. ಶಾಶ್ವತ
ವಾದ ಕಾರ್ಯವನ್ನು ನಡೆಸುವ ಸಾಮರ್ಥ್ಯವನ್ನು ಸಾಧಕರು ಪಡೆಯಬೇಕು.
ಸಂಸ್ಕೃತದಲ್ಲಿ ಅಮೂಲ್ಯವಾದ ವೈದ್ಯಶಾಸ್ತ್ರರಾಶಿ ಬೆಳೆದಿದೆ. ಆದರೆ ಅದು ಕನ್ನಡದಲ್ಲಿ
ಪರಿವರ್ತನೆಯಾಗಿಲ್ಲ. ಕಾಲಕ್ರಮೇಣ ಈ ಶಾಸ್ತ್ರವೇ ನಶಿಸಿಹೋಗಬಹುದು. ಆದುದ
ರಿಂದ ಶ್ರೀಗಳವರ ಸಹಾಯ ಆಶೀರ್ವಾದವನ್ನು ಪಡೆದು ವಿದ್ಯಾರ್ಜನೆ ಮಾಡಿದವರು
ಆ ಸಂಸ್ಕೃತದ ಮಹಾಕೃತಿಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿದರೆ ಮಹತ್ಕಾರ್ಯ
ನಡೆಸಿದಂತಾಗುತ್ತದೆ. ಈ ಪ್ರಕಟಣಾ ಕಾರ್ಯವೂ ಇಲ್ಲಿ ನಡೆಯುವಂತಾಗಲೆಂದು
ನನ್ನ ಆಶೆ ಎಂದು ತಿಳಿಸಿದರು.

ಸಾಂಸ್ಕೃತಿಕವಾಗಿ ನಾಟಕಾದಿ ಕಾರ್ಯಕ್ರಮಗಳೊಡನೆ ಅಂದಿನ ಸಮಾರಂಭ
ಮುಗಿಯಿತು.

## ಸಮಾರಂಭದ ಐದನೇ ದಿನ

ತಾ॥ 11-1-62 ಜಯಂತಿ ಮಹೋತ್ಸವದ ಐದನೇ ದಿನದ ಸಮಾರಂಭವು
ಸಂಸ್ಥಾನದ ಸಹಕಾರ ಶಾಖಾ ಸಚಿವರಾದ ಶ್ರೀ ಮಾಲಿ ಮರಿಯಪ್ಪನವರ ಅಧ್ಯಕ್ಷತೆ
ಯಲ್ಲಿ ನೆರವೇರಿದುವು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪಂಡಿತರತ್ನಂ
ಬಿ. ಶಿವಮೂರ್ತಿಶಾಸ್ತ್ರಿಗಳವರು "ಶಿವಗೀತೆ" ವಿಷಯದ ಮೇಲೆ ಭಾಷಣ ಮಾಡಿದರು.

## ನಿರಾಶಾಮಯ ಜೀವನಕ್ಕೆ ಆಶಾಜ್ಯೋತಿ

ಜಗತ್ತಿನಲ್ಲಿ ಮಹಾಭಾರತದಲ್ಲಿರುವ ಭಗವದ್ಗೀತೆಯು ಅತ್ಯಂತ ಪ್ರಸಿದ್ಧವಾಗಿದೆ. ಈ ಗೀತಾಭ್ಯಾಸವು ಮಾನವರನ್ನು ಮಹರ್ಷಿಗಳನ್ನಾಗಿ ಮಾಡಿದೆ. ಅಂತೆಯೇ ಬಾಲ ಗಂಗಾಧರ್ ತಿಲಕ್, ಮಹರ್ಷಿ ಅರವಿಂದಘೋಷ್, ಮಹಾತ್ಮಾ ಗಾಂಧಿ ಇಂತಹ ಮಹಾಪುರುಷರಿಗೆ ಜೀವನದ ಉಸಿರಾಗಿತ್ತು. ಹಿಂದೂ ದರ್ಶನದ ವೇದಾಂತ ಶಾಸ್ತ್ರ ನಿರೂಪಣೆಗೆ ಪ್ರಸ್ಥಾನತ್ರಯಗಳಲ್ಲಿ ಒಂದೆನಿಸಿಕೊಂಡು ಶ್ರೀ ಶಂಕರಾಚಾರ್ಯರು, ರಾಮಾನುಜಾಚಾರ್ಯರು ಮುಂತಾದ ಆಚಾರ್ಯರಿಂದ ವ್ಯಾಖ್ಯಾನಗಳನ್ನು ರಚಿಸಿ ಕೊಂಡು ಪ್ರಸಿದ್ಧವಾಗಿದೆ. ಇದರಂತೆಯೇ ಮಹತ್ವಪೂರ್ಣವಾದ ಗೀತೆ 'ಶಿವಗೀತೆ'.

"ಶಿವಗೀತೆ"ಯು ಪದ್ಮಪುರಾಣದಲ್ಲಿರುವ ಹದಿನಾರು ಅಧ್ಯಾಯಗಳ ಮಹಾ ಕೃತಿ. ಭಗವದ್ಗೀತೆಯಲ್ಲಿ ಕೃಷ್ಣನು ಯುದ್ಧ ನಿರಾಶಕ್ತನಾದ ಅರ್ಜುನನಿಗೆ ಕರ್ತವ್ಯ ಪ್ರಚೋದನೆ ಮಾಡಿ ಮಾನವ ಧರ್ಮದ ಸಂದೇಶವನ್ನು ಬಿತ್ತರಿಸಿರುವುದು ಕಂಡು ಬರುತ್ತದೆ. ಶಿವಗೀತೆಯಲ್ಲಿ ಅರಣ್ಯವಾಸದಲ್ಲಿರುವ ಶ್ರೀ ರಾಮಚಂದ್ರನು ಪತ್ನಿಯನ್ನು ಕಳೆದುಕೊಂಡು ಜೀವನದಲ್ಲಿ ನಿರಾಶೆಯನ್ನು ಹೊಂದಿ ಲಕ್ಷ್ಮಣನೊಡಗೂಡಿ ಆತ್ಮ ಹತ್ಯಮಾಡಿಕೊಳ್ಳಲು ನಿಶ್ಚಯಿಸಿದಾಗ ಅಗಸ್ತ್ಯಮಹರ್ಷಿಗಳು ಶ್ರೀ ರಾಮಚಂದ್ರನಿಗೆ ಉಪದೇಶವಿತ್ತು ಪಾಶುಪತವ್ರತ ಆಚರಣೆ ಶಿವಮಹಿಮಾಧ್ಯಾನ ಇವುಗಳನ್ನು ಬೋಧಿಸಿ ಇಷ್ಟಸಿದ್ಧಿಯನ್ನು ಪಡೆಯುವ ಮಾರ್ಗಗಳನ್ನು ಬೋಧಿಸಿದ ಕಥಾವಸ್ತುವೇ ಶಿವಗೀತೆ. ಶಿವಗೀತೆಯಲ್ಲಿ ವೇದೋಪನಿಷತ್ ವಾಕ್ಯಗಳು ಮತ್ತು ಭಗವದ್ಗೀತೆಯಲ್ಲಿ ಕಂಡು ಬರುವ ವಾಕ್ಯಗಳು ಬಳಸಿರುವುದನ್ನು ನಾವು ಇಲ್ಲಿ ಕಾಣುತ್ತೇವೆ. ಇಲ್ಲಿ ಶಿವಪಾರ ಮ್ಯತೆಯನ್ನು ಶಿವಸಾಕ್ಷಾತ್ಕಾರಮಾಡಿಕೊಳ್ಳಲು ಜ್ಞಾನಯೋಗ, ಭಕ್ತಿಯೋಗ ಮತ್ತು ಈಶ್ವರಾರ್ಪಿತ ಕರ್ಮಯೋಗಗಳನ್ನು ಪ್ರತಿಪಾದಿಸಲಾಗಿದೆ. ಶಿವಗೀತೆಯಲ್ಲಿ ಭಕ್ತಿ ಜ್ಞಾನಮಾರ್ಗಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟು ಇವು ಸರ್ವಜನರಿಂದ ಅನು ಕರಣೀಯವೆಂದು ಸುಲಭಮಾರ್ಗವನ್ನು ಇಲ್ಲಿ ವಿವರಿಸಿದೆ.

ಶಿವಗೀತೆಯಂತೆ ಸೂರ್ಯಗೀತೆ, ರಾಮಗೀತೆ, ಗಣೇಶಗೀತೆ, ದೇವೀಗೀತೆ, ಬ್ರಹ್ಮಗೀತೆ, ಹಂಸಗೀತೆ, ಅವಧೂತಗೀತೆ ಮುಂತಾದ ಹಲವಾರು ಗೀತೆಗಳು ಪುರಾಣ ಗಳಲ್ಲಿ ಕಂಡುಬರುತ್ತವೆ. ಆದರೆ ಶಿವಗೀತೆಯು ಎಲ್ಲ ಗೀತೆಗಳಿಗೂ ಮೂಲವೆಂದು ಹೇಳಬಹುದಾಗಿದೆ. ಇಲ್ಲಿಯೂ ಶಿವನ ವಿಶ್ವರೂಪದರ್ಶನವನ್ನು ಕಾಣಬಹುದು. ಶಿವಗೀತೆಯು ಜೀವನದ ಉತ್ಪತ್ತಿಯಿಂದ ಹಿಡಿದು ಶಿವಸಾಕ್ಷಾತ್ಕಾರದವರೆಗೆ ಬೇಕಾ ಗುವ ಸಾಧನಮಾರ್ಗಗಳನ್ನು ಹೃದಯಂಗಮವಾಗಿ ಚಿತ್ರಿಸಿದೆ. ಈ ಮಹಾಕೃತಿಯು ಮುಮುಕ್ಷುಗಳ ಮೋಕ್ಷ ಚಿಂತಾಮಣಿ ಎನಿಸಿದೆ. ಈ ಕೃತಿಯನ್ನು ಅಭ್ಯಾಸಮಾಡು

ವುದರಿಂದ ಮಾನವ ಜೀವನದಲ್ಲಿ ನವಚೈತನ್ಯವೇ ಉಂಟಾಗುತ್ತದೆ ಎಂದು ಶ್ರೀ ಶಾ
ಗಳವರು ವಿಚಾರಭರಿತವಾದ ಭಾಷಣಮಾಡಿದರು.

ಶ್ರೀಯುತರು ಮುಂದುವರೆದು ಸುತ್ತೂರು ವೀರಸಿಂಹಾಸನದ ಗುರುಪರಂಪ
ಯನ್ನು ಶ್ರೀಮಠದ ಆಚಾರ್ಯಪುರುಷರು ಸಾಧಿಸಿದ ಮಹತ್ಕಾರ್ಯಗಳನ್ನು ಐತಿಹಾಸಿ
ವಾಗಿ ವಿವರಿಸಿದರು. ಹಿರಿಯ ಜಗದ್ಗುರುಗಳವರ ಮಂತ್ರಲೇಖನ ತಪಸ್ಸು ಮತ್ತು
ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಗಳವರ ವಿದ್ಯಾಸೇವೆ ಇವುಗಳನ್ನು
ಕುರಿತು ಪ್ರಶಂಸೆಮಾಡಿದರು.

## ಸರ್ವರ ಕ್ಷೇಮವೇ ಎಲ್ಲ ದರ್ಶನಗಳ ಗುರಿ

ಅಧ್ಯಕ್ಷತೆ ವಹಿಸಿದ್ದ ಶ್ರೀ ಮಾಲಿ ಮರಿಯಪ್ಪನವರು ಭಾಷಣ ಮಾಡಿ ಭಾರತ
ದಲ್ಲಿ ಬುದ್ಧ, ಬಸವಣ್ಣ ಮಹಾತ್ಮ ಗಾಂಧೀಜಿಯವರಂತಹ ಮಹಾಪುರುಷರು ಶ್ರೀ
ಶಂಕರರು ರಾಮಾನುಜರಂತಹ ಆಚಾರ್ಯ ಪುರುಷರು ಸಂಜನಿಸಿ ಧರ್ಮದ ಉದ್ಧಾರ
ಮಾಡಿದ್ದಾರೆ. ಮಹಾಪುರುಷರುಗಳು ಬೋಧಿಸಿದ ಧರ್ಮ ಸರ್ವೋದ್ಧಾರ ಧರ್ಮ
ನಮ್ಮ ಸ್ವಾರ್ಥದಿಂದ ಧರ್ಮವನ್ನು ಅಪಾರ್ಥಮಾಡಿಕೊಂಡು ಧಾರ್ಮಿಕ ಕಲಹಕ್ಕೆ
ಕಾರಣವಾಗಿರುವುದು ಚರಿತ್ರೆಯಲ್ಲಿ ಕಂಡುಬರುತ್ತಿದೆ. ಎಲ್ಲಾ ಧರ್ಮಗಳೂ ಮಾನ
ವತೆಯು ಒಂದು ಸರ್ವರ ಸಹಕಾರದಿಂದ ಐಹಿಕ ಜೀವನ ಸುಖಮಯವಾಗಬೇಕು-
ಎಂದು ಸಾರಿವೆ.

ಸರ್ವಧರ್ಮಗಳ ಸಾರವನ್ನು ಜನತೆಗೆ ನೀಡಿ ರಾಷ್ಟ್ರ ಕಲ್ಯಾಣಕ್ಕೆ ಅಮೂಲ್ಯ
ವಾದ ಸೇವೆ ಸಲ್ಲಿಸುತ್ತಿರುವ ಶ್ರೀ ಸುತ್ತೂರು ವೀರಸಿಂಹಾಸನ ಮಠದ ಆಶ್ರಯದಲ್ಲಿ
ನಡೆಯುತ್ತಿರುವ ವಿದ್ಯಾಸಂಸ್ಥೆಗಳು ಸಹಕಾರ ಜೀವನದ ತತ್ವಪ್ರತಿಪಾದನೆಗೆ
ಅಮೂಲ್ಯ ನಿದರ್ಶನಗಳಾಗಿವೆ. ಶ್ರೀಗಳವರ ಸೇವೆ ಆದರ್ಶಪ್ರಾಯವಾಗಿದೆ. ಇದಕ್ಕಾಗಿ
ಸರ್ಕಾರದ ಪರವಾಗಿ ಕೃತಜ್ಞತೆಯನ್ನು ಸಮರ್ಪಿಸಬಯಸುತ್ತೇನೆ. ಈ ಸಮಾ
ರಂಭದಲ್ಲಿ ಭಾಗವಹಿಸುವ ಪುಣ್ಯ ನನಗೆ ದೊರಕಿದುದಕ್ಕಾಗಿ ಮತ್ತು ಶ್ರೀ ಶಿವಮೂರ್ತಿ
ಶಾಸ್ತ್ರಿಗಳವರ ಅಮೂಲ್ಯ ಭಾಷಣ ಕೇಳುವ ಅವಕಾಶವನ್ನು ಒದಗಿಸಿದುದಕ್ಕಾಗಿ
ಉತ್ಸವ ಸಮಿತಿಯ ಕಾರ್ಯಕರ್ತರಿಗೆ ನಾನು ಚಿರಋಣಿಯಾಗಿದ್ದೇನೆಂದು ಸಚಿವರು
ತಿಳಿಸಿದರು.

ಯಥಾವತ್ತಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳೊಡನೆ ಇಂದಿನ ಸಮಾರಂಭವು
ಮುಕ್ತಾಯಗೊಂಡಿತು.

## ಆರನೆಯ ದಿನದಲ್ಲಿ (12-1-62)

—§—

ಆರನೆಯ ದಿನದ ಜಯಂತೀ ಮಹೋತ್ಸವ ಸಪ್ತಾಹಸಮಾರಂಭವು ಸಂಸ್ಥಾನದ ದ್ಯಾಪಚಿವರಾದ ಶ್ರೀಮಾನ್ ಆಣ್ಣಾರಾವ್ ಗಣಮುಖಿಯವರ ಅಧ್ಯಕ್ಷತೆಯಲ್ಲಿ ನೆರ ೇರಿತು. ಶ್ರೀಮಾನ್ ಹೆಚ್. ಗಂಗಾಧರರವರು 'ಘನಲಿಂಗಿ' ಎಂಬ ವಿಷಯದಲ್ಲಿ ಾಷಣಮಾಡಿದರು.

## ಮರ್ತ್ಯದ ಹಂಬಲು ಹರಿದಿರಬೇಕು

ಶ್ರೀ ಸುತ್ತೂರು ವೀರಸಿಂಹಾಸನ ಮಠದ ಧರ್ಮಸೂತ್ರವನ್ನು ಹಿಡಿದ ಮಹಾ ುಭಾವರಲ್ಲಿ ಕೆಲವರು ಧರ್ಮ ಜಿಜ್ಞಾಸುಗಳೂ, ಶಾಸ್ತ್ರಕಾರರೂ ಸಾಹಿತಿಗಳೂ ಆಗಿದ್ದ ೆಂಬುದು ಇತಿಹಾಸದಿಂದ ತಿಳಿದುಬರುತ್ತದೆ. ಭಕ್ತಮಂಡಲಿಯ ಆಚಾರ ವಿಚಾರ ೆಯೇ ಮಠಾಧೀಶರ ಕರ್ತವ್ಯವಲ್ಲ. ಅದರೊಡನೆ ಶಾಶ್ವತವಾದ ಜ್ಞಾನದಾಸೋಹ ವನ್ನು ಮಠಾಧಿಪತಿಗಳು ನಡೆಸಿಕೊಂಡು ಬಂದಿರುತ್ತಾರೆ. ಅಂತೆಯೇ ಈ ಮಠದ ೀಠಾಧಿಪತಿಗಳಾದ ಶ್ರೀ ಸಿದ್ಧನಂಜದೇಶಿಕೇಂದ್ರರು ಪರಮ ಶಿವಾಧಿಕ್ಯ ಶಿಖಾಮಣಿ ಎಂಬ ಗ್ರಂಥವನ್ನು, ಇಮ್ಮಡಿಯ ಶಿವರಾತ್ರೀಶ್ವರರು ಶ್ರೀ ವೃಷಭೇಂದ್ರ ವಿಜಯ ಎಂಬ ಪುರಾಣವನ್ನು ಚನ್ನಬಸವದೇವರು ಜೋಳ ರೇಣುಕ ಸಂವಾದಕ್ಕೆ ಕನ್ನಡ ಟೀಕೆಯನ್ನೂ ಇಂದಿನ ಹಿರಿಯ ಜಗದ್ಗುರು ಶ್ರೀ ಶಿವರಾತ್ರಿಮಹಾಸ್ವಾಮಿಗಳವರು ಶಿವಮಂತ್ರ ಮಹಿಮೆ ಎಂಬ ಕೃತಿಯನ್ನು ರಚಿಸಿ ಕನ್ನಡ ಸಾಹಿತ್ಯ ಭಂಡಾರಕ್ಕೆ ಅಮೂಲ್ಯ ರತ್ನಗಳನ್ನು ಅರ್ಪಿಸಿದ್ದಾರೆ. ಅದರಂತೆ ಶ್ರೀ ಮಠದ ಹನ್ನೊಂದನೆಯ ಅಧಿಪತಿಗಳಾದ ಶ್ರೀ ಘನಲಿಂಗ ಚಕ್ರವರ್ತಿಗಳು ವಚನಸಾಹಿತ್ಯವನ್ನು ರಚಿಸಿದ ಮಹಾ ಶಿವಯೋಗಿಗಳು.

ಶಿವಯೋಗಿಗಳು ತಮ್ಮ ಪೂರ್ವೇತಿಹಾಸವನ್ನು ತಿಳಿಸುತ್ತಾ ಒಂದು ವಚನದಲ್ಲಿ ಸುತ್ತೂರು ಸಿಂಹಾಸನದ ಪರ್ವತದೇವರ ಶಿಷ್ಯರು ಭಂಡಾರಿ ಬಸವಪ್ಪೊಡೆಯರು, ಆ ಭಂಡಾರಿ ಬಸವಪ್ಪೊಡೆಯ ದೇವರ ಶಿಷ್ಯರು ಕೂಗಲೂರು ನಂಜಯ್ಯದೇವರು, ಆ ನಂಜಯ್ಯದೇವರ ಕರಕಮಲದಲ್ಲಿ ಉದಯವಾದ ಶರಣಪೆಣ್ಣಯ್ಯನಾನು. ಎನ್ನ ಗುರುವಿನ ಗುರು ಪರಮಗುರು ಪರಮಾರಾಧ್ಯತೋಂಟದಾರ್ಯನಿಗೆ ಗುರುಭಕ್ತಿ ಯಿಂದ ಎನ್ನ ಶರಣು ಮಾಡಿದರು. ಆ ತೋಂಟದಾರ್ಯರು ತನ್ನ ಕೃಪೆಯೆಂಬ ತೊಟ್ಟಿಲೊಳಗೆ ಮಲಗಿಸಿ ಪ್ರಮಥಗಣಂಗಳ ವಚನಸ್ವರೂಪಾರ್ಥವೆಂಬ ಹಾಲು ತುಪ್ಪವಂ ಸದಾ ದಣಿಯಲೆರೆದು ಅಕ್ಕರಿಂದ ರಕ್ಷಣೆಯಂ ಮಾಡಿ ಘನಲಿಂಗಿ ಎಂಬ ನಾಮಕರಣಮಂ ಕೊಟ್ಟು, ಇತ್ಯಾದಿಯಾಗಿ ಹೇಳಿದ್ದಾರೆ. ಶಿವಯೋಗನಿಷ್ಠರೂ

ಮಹಾಮಹಿಮರೂ ಆದ ಶ್ರೀ ಸಿದ್ದಲಿಂಗ ಶಿವಯೋಗಿಗಳ ಶಿಷ್ಯರಾಗಿ ಜ್ಞಾನಾರ್ಜ
ಪಡೆದವರೆಂದು ಇದರಿಂದ ಅರ್ಥವಾಗುತ್ತದೆ.

ಘನಲಿಂಗಿಗಳ ವಚನಗಳು ಅತಿದೊಡ್ಡನಾಗಿದ್ದರೂ ಕಾವ್ಯಮಯವಾಗಿ ತ
ಭರಿತವಾಗಿ ಉಚ್ಚತರದ ಭಾಷೆಯಿಂದ ಕೂಡಿ ಪ್ರೌಢರೀತಿಯಲ್ಲಿ ರಚಿತವಾಗಿವೆ. ಷ
ಸ್ಥಲಶಾಸ್ತ್ರವನ್ನು ಮಾರ್ಮಿಕವಾಗಿ ಜೀವಂತ ಉದಾಹರಣೆಗಳೊಡನೆ ಕವಿಚಕ್ರವ
ರಚಿಸಿದ್ದಾರೆ. ಶರಣಸತಿ ಲಿಂಗಪತಿ ಮನೋಭಾವನೆಯಿಂದ ಲಿಂಗಾಂಗ ಸಾಮರ
ವನ್ನು ಪಡೆಯುವ ಸಾಧನಮಾರ್ಗದ ಬೋಧಕವಾಗಿವೆ. ವಚನಸಾಹಿತ್ಯದಲ್ಲಿ ಶ್ರೇ
ಸ್ಥಾನಗಳನ್ನೂ ಪಡೆಯುವಂತಹ ವಚನಗಳನ್ನು ರಚಿಸಿದ್ದಾರೆ.

"ಅರ್ಥದ ಮೇಲಣ ಆಶೆಯುಳ್ಳವಕ್ಕರ ಮರ್ತ್ಯಲೋಕದ ಮಹಾಜಂ
ಬಿಡದಯ್ಯ, ನಾನು ಮರ್ತ್ಯಲೋಕದ ಹಂಬಲ ಹರಿದು ನಿನ್ನ ನಂಬಿ ನೆಚ್ಚಿದೆನೆಂ
ದಕ್ಕೆ ಪ್ರತ್ಯಕ್ಷ ಮಂತೋರುತಿರ್ಪೆ ನೋಡಯ್ಯ ಲಿಂಗವೆ, ಅನರ್ಘ್ಯವಾದ ಮು
ರತ್ನಂಗಳು ಹೊಂಗಡದಲ್ಲಿ ತುಂಬಿ ನಾನಿರ್ಪ ಏಕಾಂತವಾಸಕ್ಕೆ ಉರುಳಿಬರಲು ಹ
ಕಂಡ ಮರ್ಕಟನಂತೆ ನಾನು ಅಡ್ಡಮೊಗವನಿಕ್ಕಿದೆನೆನೆ ನಿನಗೊಲಿದ ಶರಣನೆಂ
ಭಾವಿಸಿ, ಎನ್ನು ಮರ್ತ್ಯಲೋಕದ ಸಂಕಲೆಯಂ ತರಿದು, ನಿನ್ನಗಣಂಗಳ ಒಳ
ಮಾಡು. ಅದಲ್ಲದೆ ಅದರ ಮೇಲೆ ಕಿಂಚಿತು ಆಶೆಮಾಡಲೊಡನೆ ಚಂದ್ರಸೂರ್ಯ
ಗಳುಳ್ಳನಕ ಎನ್ನ ಹಂದಿ ನಾಯಿ ಬಸುರಲ್ಲಿ ಹಾಕದಿದ್ದೆಯಾದರೆ ನಿನಗೆ ಅಲ್ಲಮ
ಪ್ರಭುವಿನಾಣೆ. ಅಳಿನಸಮಾನ ಆಳ್ದಂಗೆ ತಪ್ಪದಯ್ಯ ಘನಲಿಂಗಿಯ ಮೋಹ
ಚನ್ನಮಲ್ಲಿಕಾರ್ಜುನಾ" ಈ ವಚನದಲ್ಲಿ ಘನಲಿಂಗಚಕ್ರವರ್ತಿಗಳ ಶಿವಯೋಗನಿ
ತ್ಯಾಗಶೀಲತೆಗಳು ವ್ಯಕ್ತವಾಗುತ್ತವೆ. ಇಂತಹ ತ್ಯಾಗಶೀಲರೂ ತಪೋನಿರತರೂ ವಚ
ಸಾಹಿತ್ಯ ಸಾಮ್ರಾಟರೂ ಆದ ಘನಲಿಂಗಿ ಚಕ್ರವರ್ತಿಗಳಂತಹ ಮಹಾಮಹಿಮರಿಂ
ಅಲಂಕೃತವಾದ ಶ್ರೀ ವೀರಸಿಂಹಾಸನಮಠವನ್ನು ಸಂಸ್ಥಾಪಿಸಿದ ಜಗದ್ಗುರು ಶ್ರೀ
ಶಿವರಾತ್ರೀಶ್ವರರ ಜಯಂತಿ ಮಹೋತ್ಸವವು ಮಾನವತೆಗೆ ಅಭ್ಯುದಯದ ಮಾಗ
ದರ್ಶಕವಾಗಿದೆ. ಮಾನವರು ಮರ್ತ್ಯದ ಹಂಗು ತೊರೆದು ಆತ್ಮದ ಹಂಬಲು ಬೆಳೆ
ಜೀವನದ ಗುರಿಯನ್ನು ಸಾಧಿಸಬೇಕೆಂದು ಬೋಧಿಸಿದ ತಪಸ್ವಿಗಳು ಘನಲಿಂಗಿ ಚ
ವರ್ತಿಗಳು ಎಂದು ಶ್ರೀಮಾನ್ ಹೆಚ್. ಗಂಗಾಧರನರವರು ಘನಲಿಂಗಿಗಳ ಸೂಕ್ಷ್ಮ
ಪರಿಚಯ ಮಾಡಿದರು.

## ಮಠಗಳು ಆತ್ಮ ವಿದ್ಯಾ ಕೇಂದ್ರಗಳು

ಅಧ್ಯಕ್ಷತೆ ವಹಿಸಿದ್ದ ಶ್ರೀಮಾನ್ ಅಣ್ಣಾರಾವ್ ಗಣಮುಖಿಯವರು ಭಾಷ
ಮಾಡುತ್ತಾ, ಶ್ರೀ ಸುತ್ತೂರು ವೀರಸಿಂಹಾಸನ ಮಠದ ಪ್ರಾಚೀನತೆ ಮತ್ತು ಶ್ರೀಮ

ದ ನೆರವೇರುತ್ತಿರುವ ವಿದ್ಯಾಸೇವೆ ಪ್ರಸಿದ್ಧವಾಗಿದೆಯೆಂದರು. ಇಂದಿನ ಪ್ರಜಾ ಭುತ್ವದ ಯಶಸ್ಸು ವಿದ್ಯಾವಂತರಾದ ಯುವಜನ ಸಮುದಾಯವನ್ನೇ ಅವಲಂಬಿ ದೆ. ವಿದ್ಯೆ ಎಂದರೆ ನೌಕರಿ ಗಳಿಸಿ ಜೀವನ ಸಾಗಿಸುವ ವಿದ್ಯೆ ಎಂದೇ ಅರ್ಥಮಾಡಿ ಕೊಳ್ಳಬಾರದು. ದಾಸ್ಯದಲ್ಲಿದ್ದು ದಾರಿದ್ರ್ಯ ಅಜ್ಞಾನಗಳಲ್ಲಿ ಬಳಲುತ್ತಿರುವ ದೇಶಕ್ಕೆ ರ್ಥಿಕ ಪೂರ್ಣತೆಯನ್ನು ಪ್ರಗತಿಪರ ಸಾಮಾಜಿಕ ಜೀವನವನ್ನು ಸಾಧಿಸಬಲ್ಲ ವಿದ್ಯೆ ವಶ್ಯಕ. ಆದರೆ ಎಲ್ಲ ವಿದ್ಯೆಗೂ ನೀತಿಯುತ ಜೀವನ ಆಧಾರವಾಗಿರಬೇಕು. ನಮ್ಮ ೀಶದ ವಿದ್ಯೆ ಬುದ್ಧಿಯನ್ನು ಗಳಿಸಲು ಸಹಾಯಕವಾಗಿದೆ. ಇದರಿಂದಲೇ ನಾವು ಪ್ತರಾಗುವಂತಿಲ್ಲ. ಬುದ್ಧಿ ಜೀವಣಿಗೆಯ ಜೊತೆಗೆ ಆತ್ಮೋನ್ನತಿಯನ್ನು ಸಾಧಿಸ ಲ್ಲ ವಿದ್ಯೆ ಇಂದು ಅವಶ್ಯಕ. ಸರ್ಕಾರ ಮಾನವನ ಆರ್ಥಿಕ ಮತ್ತು ಸಾಮಾಜಿಕ ನ್ನತಿಯನ್ನು ಗುರಿಯಾಗಿಟ್ಟುಕೊಂಡು ವಿದ್ಯಾಭ್ಯಾಸದಲ್ಲಿ ಪ್ರಗತಿಪರ ಸುಧಾರಣೆ ಳನ್ನು ತರಲು ಯತ್ನಿಸುತ್ತಿದೆ. ಆದರೆ ಆತ್ಮಶಕ್ತಿಯನ್ನು ಬೆಳೆಸಿಕೊಳ್ಳಬಹುದಾದ ದ್ಯೆಯನ್ನು ದೊರಕಿಸಿಕೊಡಲು ನಮ್ಮ ದೇಶದ ಮಠಗಳು ಸತತವೂ ಪ್ರಯತ್ನ ಾಡುತ್ತಲಿವೆ. ಮಠಗಳು ರಾಷ್ಟ್ರಾಭ್ಯುದಯದ ಅಭಿಮಾನದಿಂದ ಶ್ರಮಿಸದಿದ್ದರೆ ಾವು ಎಷ್ಟೋ ಯೋಜನೆಗಳನ್ನು ರೂಪಿಸಿದರೂ ಯೋಜನೆಗಳೂ ಸಹ ಯಶಸ್ವಿ ಯಾಗುವುದು ಕಠಿಣವಾಗುತ್ತದೆ. ರಾಷ್ಟ್ರಹಿತದೃಷ್ಟಿಯಿಂದ ಯುಕ್ತವಾದ ವಿದ್ಯಾ ಸುಧಾರಣೆಯನ್ನು ರೂಪುಗೊಳಿಸಲು ಜನತೆ ಸರ್ಕಾರ ಮತ್ತು ಮಠಗಳು ಏಕೀಭವಿಸಿ ್ರಮಿಸುವುದು ಅಗತ್ಯ.

ಸುತ್ತೂರು ವೀರಸಿಂಹಾಸನಮಠವು ವಿಶಾಲದೃಷ್ಟಿಯನ್ನಿಟ್ಟುಕೊಂಡು ಉದಾತ್ತ ತತ್ವದ ತಳಹದಿಯ ಮೇಲೆ ವಿದ್ಯಾಸಂಸ್ಥೆಗಳನ್ನು ನಡೆಸುತ್ತಿದೆ. ಇಲ್ಲಿ ನಡೆಸುತ್ತಿರುವ ಕಾರ್ಯಕ್ರಮಗಳು ಆದರ್ಶಪ್ರಾಯವಾಗಿವೆ. ಇಂತಹ ಪವಿತ್ರ ಸಂಸ್ಥೆಯ ಸಂಸ್ಥಾಪ ಕರಾದ ಜಗದ್ಗುರು ಶ್ರೀ ಶಿವರಾತ್ರೀಶ್ವರರ ಜಯಂತಿಮಹೋತ್ಸವವು ನಡೆಯುತ್ತಿರುವ ಈ ಸಮಾರಂಭದಲ್ಲಿ ಭಾಗವಹಿಸಲು ನನಗೆ ಆತ್ಯಾನಂದವಾಗಿದೆ. ಈ ಸಂಸ್ಥೆಯಲ್ಲಿ ಅಭ್ಯಾಸಮಾಡಿದ ಯುವಕರು ನಾಡಿನ ಪ್ರಮುಖ ನಾಯಕರಾಗುವ ಶಕ್ತಿಯನ್ನು ಪಡೆ ಯಲೆಂದು ಹಾರೈಸುತ್ತ ತಮ್ಮ ಭಾಷಣವನ್ನು ಮುಗಿಸಿದರು.

ಎಂದಿನಂತೆ ಸಾಂಸ್ಕೃತಿಕ ಕಾರ್ಯಕ್ರಮಗಳು ಅತ್ಯಂತ ವೈಭವದಿಂದ ಜರುಗಿ ದುವು.

## ಸಪ್ತಾಹದ ಮುಕ್ತಾಯ ಸಮಾರಂಭ (13-1-62)

ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸವ ಸಪ್ತಾಹ ಸಮಾ ರಂಭದ ಮುಕ್ತಾಯ ದಿನದಂದು ನಡೆದ ಕಾರ್ಯಕ್ರಮಗಳು ಸಂಸ್ಥೆಯ ಇತಿಹಾಸದಲ್ಲಿ

ಸ್ವರ್ಣಖಚಿತ ಘಟಕಗಳಾಗಿವೆ. ಜಗದ್ಗುರು ಶ್ರೀ ಶಿವರಾತ್ರಿ ಸ್ವಾಮಿಗಳವರ ದಿವ್ಯ ಸನ್ಮುಖದಲ್ಲಿ ಮೈಸೂರಿನ ರಾಜ್ಯಪಾಲರಾದ ಶ್ರೀಮನ್ಮಹಾರಾಜ ಜಯಚಾಮರಾಜ ಒಡೆಯರ್ ಅವರು ಮುಕ್ತಾಯ ಸಮಾರಂಭದ ಸಂದೇಶವನ್ನು ದಯಪಾಲಿಸಿದರು.

ಸಮಾರಂಭದ ಮುಕ್ತಾಯ ಸಂದೇಶವನ್ನು ನೀಡಲು ಆಗಮಿಸಿದ ಶ್ರೀಮನ್ಮಹಾರಾಜರವರಿಗೆ ಶ್ರೀಮಠದ ಆಗಮಿಕರು ಭಕ್ತಮಂಡಲಿಯ ಪರವಾಗಿ ಪೂರ್ಣಕುಂಭಾದಿ ರಾಜಗೌರವಗಳೊಡನೆ ಸ್ವಾಗತಿಸಿದರು. ರಾಜ್ಯಪಾಲರು ಜಗದ್ಗುರುಗಳವರೊಡನೆ ಅನುಭವ ಮಂಟಪದ ವೇದಿಕೆ ಮೇಲೆ ಮಂಡಿಸಿದ ನಂತರ ಕಾರ್ಯಕ್ರಮಗಳು ಪ್ರಾರಂಭವಾದುವು. ಕುಮಾರಿ ಸಾವಿತ್ರಿದೇವಿಯವರ ಪ್ರಾರ್ಥನಾ ನೃತ್ಯದ ನಂತರ ಶ್ರೀಮತಿ ಇಂದಿರಾದೇವಿಯವರು ಅಮರವಾಣಿಯವರಿಂದ ರಚಿತವಾದ ಸ್ವಾಗತ ಗೀತೆಯನ್ನು ಓದಿದರು.

## ಸ್ವಾಗತಗೀತೆ

ಅಮೃತಕಿರಣ ಶಿರೋಗ್ರಭೂಷಣ
ನಮೃತ ಕರಜಾಮಾತ ಮದಹರ
ನಮೃತ ಪದವಿಯನೀವ ದೇವರದೇವ ಮಹದೇವ ।
ಅಮೃತವಾರಿಧಿ ಶಯನ ಸಲಸ
ದ ಮೃತ ಪೂರಾವಾಂಗ ಶೋಭಿತ
ನ ಮೃತವಾಣಿ ಮನಿತ್ತು ನಿರುತಂ ಸಲಹು ಮೂಜಗವ ॥೧॥

ಕ್ರೂರದಾನವ ಗರ್ವಹತಿ ವಿ
ಸ್ತಾರ ಮೈಮಾಸ್ವಿತೆ ಕೈವಾಕರೆ
ನಾರತರ ಸುಖವಿತ್ತು ರಕ್ಷಿಸು ಮಾತೆ ನಗ ಜಾತೆ ।
ನಾರದಾದಿ ಮುನೀಂದ್ರ ಪೂಜಿತ
ಚಾರು ಚರಣಾಂ ಭೋಜೆ ಶಂಕರಿ
ಮಾರಹರ ವಾಮಾಂತ ವಾಸಿನಿ ದೇವಿಕಲ್ಯಾಣ ॥೨॥

ಕೊಲ್ಲಿಪಾಕಿಪುರ ವಿರಾಜಿತ
ಸಲ್ಲಲಿತದಂ ಸೋಮನಾಥನ
ಪುಲ್ಲರವ ನಾಂಭೋಜ ಸಂಭೂರಾರ್ಯರೇಣುಕನ ।
ಮಲ್ಲಿಕಾ ಮಲಮಹಿತ ರೀತಿಮ
ರಲ್ಲಿ ಕಾಂತಿನ ಚರಣದೀಭಿತಿ
ಚಲ್ಲಿ ಬೆಳಗಲಿ ಭಕ್ತಸಂತತಿ ಹೃದಯಮಾಳವಲಿ ॥೩॥



ಜಯಂತೀಸಮಾರಂಭದಲ್ಲ ಸಹಕಾರ ಸಚಿವ ಶ್ರೀ ಮಾಲೀಮರಿಯಪ್ಪನವರ ಅಧ್ಯಕ್ಷತೆಯಲ್ಲಿ ಶ್ರೀ ಬಿ.ಶಿವಮೂರ್ತಿಶಾಸ್ತ್ರಿಗಳು ಭಾಷಣಮಾಡುತ್ತಿರುವುದು

ಜಯಂತೀಮಹೋತ್ಸವದಲ್ಲಿ ನಗರ ನ್ಯಾಯಾಧೀಶರಾದ ಶ್ರೀ ಆರ್. ಬಿ. ನಾಯಕ್ ಮತ್ತು ಮೈಸೂರು ಇನಾಂ ರದ್ದಿಯಾತಿ ಡೆಪ್ಯುಟಿ ಕಮೀಷನರ್ ಶ್ರೀ ಕೆ.ಜಿ. ಪುಟ್ಟಣ್ಣಯ್ಯನವರು



ಸುಮನಸಾರ್ಜಿತ ಪಾದ ಪಂಕಜ
ಸುಮಶರಾಂತಕ ದೇವಭಕ್ತಿ ಕು
ಸುಮಗಳಿಂದರ್ಚಿಸುವ ಭಕುತರ ಪ್ರೇರೆಯೊ ಭೂತಲದೊಳ್ ।
ಸುಮನದಿಂ ಸುತ್ತೂರು ಮಠಕಾಗಮಿಸಿ
ಶಿವಯೋಗದೊಳು ನೆಲಸಿರು
ವ ಮಿತಯಶ ಶಿವರಾತ್ರಿ ಚಂದ್ರಮುನೀಗೆ ಮಂಗಲವ ॥ ॥೪॥

ಪರಮ ಗುರುವೆಂದರಿತು ವಿದ್ಯೆಯ
ನಿರುತ ಶಿವಯೋಗದೊಳು ರಮಿಸುತ
ಲರಿವೆ ಮಂತ್ರವ ಲಿಖಿಸುತಲೋಕ ಹಿತಬಯಸಿ ।
ವರಷಡಾಕ್ಷರವೆರಡು ಕೋಟಿಯಂ
ಬರೆದು ಮಂತ್ರವ ಜಪಿಸಿ ರಾಜಿಸುತಿರುವ
ಶಿವರಾತ್ರೀಂದ್ರ ಚಂದ್ರಗೆ ಶರಣುಶರಣಾರ್ಥಿ ॥೫॥

ವಿದ್ಯೆಯನು ದೇಶದೊಳು ವರ್ಧಿಸಿ
ವಿದ್ಯೆಗಲಿವರ್ಗನ್ನ ವಸತಿಯ
ನುದ್ಯಮಿಸುತಲೆಲ್ಲಿಯೂ ಜನಹಿತವ ಮನದಂದು ।
ಸದ್ಯಶವನಾರ್ಜಿಸುತೆಸೀನನ
ವದ್ಯಚರಿತ ಯತೀಂದ್ರ
ಹೃದ್ಯಗುಣ ಶಿವರಾತ್ರಿ ರಾಜೇಂದ್ರಾಖ್ಯ ಶರಣಾರ್ತಿ ॥೬॥

ನರಶಿರೋಮಣಿ ಶಾಂತಿ ಖನಿಭವ
ದುರಿತಹರ ಹರಚರಣ ಸರಸಿಜ
ಪರಮಪೂಜಾಸಕ್ತ ಶಿವಮನುಜ ಪಿತರಾಜರ್ಷಿ ।
ನಿರುತ ಹರಗುರು ಧ್ಯಾನಯೋಗದ
ನಿರುತ ಪರಿಗುರು ಸಂಸ್ಕೃತಪಾನಯೋಗದ
ಚರಿತ ಜಯಚಾಮೇಂದ್ರ ಭೂಮಿಪ ನಿನಗೆ ಸ್ವಾಗತವು ॥೭॥

ರಾಜಕುಲಮಣಿ ದೀಪನೆನಿಸಿ ವಿ
ರಾಜಿಸುವ ಶಿವಭಕ್ತಿಯುತ ಸುರ
ಭೂಜ ಶ್ರೀ ಜಯಚಾಮ ಭೂಮಿಪಾಲ ಗನವರತ ।
ರಾಜಪೂಜಿತ ಚರಣ ಸರಸಿಜ
ರಾಜಗುರು ಶಿವರಾತ್ರಿ ಚಂದ್ರಮು
ಪೋಜೆಯಿಂದರದೀಗೆ ಸಕಲೈಶ್ವರ್ಯ ಸಿದ್ಧಿಗಳ ॥೮॥

ಮಂಗಲಂ ಶ್ರೀ ಭಾರತಾಂಬೆಗೆ
ಮಂಗಲಂ ಕರ್ಣಾಟ ಮಾತೆಗೆ
ಮಂಗಲಂ ಮೈಸೂರು ಸಕಲ ಜನತತಿಗೆ |
ಮಂಗಲಂ ಜಯಚಾಮ ಭೂಪಗೆ
ಮಂಗಲಂ ಶಿವರಾತ್ರಿ ಗುರುವರ
ತುಂಗ ಕರುಣಾಪಾಂಗ ಚುಂಬಿತ ಭಕ್ತಸಂತತಿಗೆ ||೯||
ಭದ್ರಂ ಶುಭಂ ಮಂಗಳಂ

ನಂತರ ಸಮಾರಂಭದಲ್ಲಿ ಭಾಗವಹಿಸಬೇಕಾಗಿದ್ದ ಸಂಸ್ಥಾನದ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀಮಾನ್ ಬಿ. ಡಿ. ಜತ್ತಿಯವರು ಕಳುಹಿಸಿದ್ದ ಸಂದೇಶವನ್ನು ಶ್ರೀಮಾನ್ ಆರ್. ವಿ. ಸ್ವಾಮಿಯವರು ಸಭೆಯ ಮುಂದಿಟ್ಟರು.

## ವೀರಶೈವವೆಂಬುದು ವಿಶ್ವಕ್ಷೇಮದ ಸಂಕೇತ

ಸುತ್ತೂರು ಜಗದ್ಗುರುಗಳವರ ಚರಣಸನ್ನಿಧಿಯಲ್ಲಿ ಸಾಷ್ಟಾಂಗ ಪ್ರಣಾಮಗಳು.

ಮೈಸೂರಿನಲ್ಲಿ ನಡೆಯುತ್ತಿರುವ ಜಗದ್ಗುರು ಶ್ರೀ ಶಿವರಾತ್ರೀಶ್ವರರ ಜಯಂತಿ ಮಹೋತ್ಸವದಲ್ಲಿ ಭಾಗವಹಿಸಲು ನನಗೆ ಅನುಗ್ರಹವಿತ್ತಿದ್ದಕ್ಕಾಗಿ ನಾನು ಅತ್ಯಂತ ಕೃತಜ್ಞನಾಗಿರುತ್ತೇನೆ. ಸುತ್ತೂರು ವೀರಸಿಂಹಾಸನ ಮಠದ ಆಶ್ರಯದಲ್ಲಿ ಮಹಾ ಮಂತ್ರ ತಪೋನಿರತರಾದ ಹಿರಿಯ ಜಗದ್ಗುರುಗಳ ಕೃಪಾದೃಷ್ಟಿಯಿಂದಲು ಪರಿವ್ರಾಜಕಾಚಾರ್ಯರೆನಿಸಿದ ಜಗದ್ಗುರು ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರ ಕರ್ತವ್ಯನಿಷ್ಠೆಯಿಂದಲು ಹಲವಾರು ವಿದ್ಯಾಸಂಸ್ಥೆಗಳು ಸಂಸ್ಥಾಪಿಸಲ್ಪಟ್ಟು ನಮ್ಮ ರಾಷ್ಟ್ರಕ್ಕೆ ಮಹದುಪಕಾರವಾಗುತ್ತಿದೆ. ವೀರಶೈವವೆಂಬುದು ಒಂದು ಜಾತಿಯ ಕುರುಹಲ್ಲ. ಅದು ವಿಶ್ವಕ್ಷೇಮದ ಸಂಕೇತ. ಅದನ್ನರಿತು ಸುತ್ತೂರು ಶ್ರೀಮಠವು ಯಾವ ಜಾತಿ ಮತ ಭೇದವಿಡದೆ ಎರಡು ಸಹಸ್ರ ಮಂದಿ ವಿದ್ಯಾರ್ಥಿಗಳಿಗೆ ಅನ್ನದಾನ ಜ್ಞಾನದಾನವನ್ನು ನೀಡುತ್ತಿರುವುದು ಸ್ತುತ್ಯಾರ್ಹವಾದ ಕಾರ್ಯ. ಇಂತಹ ಮಹಾ ಕಾರ್ಯಗಳು ಆತ್ಮಶಕ್ತಿ ಸಿದ್ಧರಿಂದಲ್ಲದೆ ಅನ್ಯರಿಂದ ಸಾಧ್ಯವಿಲ್ಲ. ಆತ್ಮಸಾಕ್ಷಾತ್ಕಾರ ಮಾಡಿಕೊಂಡ ಮಹಾನುಭಾವರಾದ ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳಿಂದ ಸಾವಿರ ವರ್ಷಗಳ ಹಿಂದೆ ಸಂಸ್ಥಾಪಿತವಾದ ಸುತ್ತೂರು ಶ್ರೀಮಠವು ಮತ್ತು ಅದರ ಕಾರ್ಯಕ್ಷೇತ್ರಗಳು ನಮ್ಮ ನಾಡಿನ ಎಲ್ಲ ಮಠಗಳಿಗೂ ಆದರ್ಶಪ್ರಾಯವಾಗಿವೆ. ಪ್ರಜಾಪ್ರಭುತ್ವಯುಗದಲ್ಲಿ ಪ್ರಜೆಗಳ ಸರ್ವಕ್ಷೇಮವು ಸರ್ಕಾರವನ್ನೇ ಅವಲಂಬಿಸಿದೆಯೆಂದು ಜನರ ಮನೋಭಾವನೆ ಬೆಳೆದಿದೆ. ಆದರೆ ಪ್ರಜಾಪ್ರಭುತ್ವದ ಯಶಸ್ಸಿಗೆ ಮಠಗಳು, ಮಠಾಧೀಶ್ವರರು ಬಹುಮಟ್ಟಿಗೆ ಕಾರಣರಾಗಿರುತ್ತಾರೆಂದು ನಂಬಿದ್ದೇನೆ

ಮಠಗಳು ಹಿರಿತನ ಸಿರಿತನಕ್ಕೆ ಮಾರುಹೋಗದೆ ಶಿಷ್ಯಕೋಟಿಯ ಉದ್ಧಾರವೆ ತನ್ನ ಸಿರಿಯೊಂದು ಲೋಕಕಲ್ಯಾಣದ ಕಾರ್ಯಗಳನ್ನು ನಡೆಸಿದರೆ ಅಂತಹ ಮಠಗಳಿಗೆ ಮಾನವತೆಯೇ ಚಿರಋಣಿಯಾಗಿರುತ್ತದೆ. ಸುತ್ತೂರು ಶ್ರೀಮಠವು ಆದಿಯಿಂದಲು ಮಾನವತೆಯ ಅಭ್ಯುದಯಕ್ಕೆ ಶ್ರಮಿಸುತ್ತಿರುವುದನ್ನು ನಾನು ಸಂಪೂರ್ಣವಾಗಿ ಮನ ಗಂಡಿದ್ದೇನೆ. ಆದಕ್ಕಾಗಿ ಸರ್ಕಾರ ಹಾಗೂ ಪ್ರಜಾವರ್ಗದ ಪರವಾಗಿ ಕೃತಜ್ಞತೆ ಯನ್ನು ಸೂಚಿಸಲು ಬಯಸುತ್ತೇನೆ. ಅತ್ಯಂತ ವಿಜೃಂಭಣೆಯಿಂದ ನೆರವೇರುತ್ತಿರುವ ಜಯಂತಿ ಮಹೋತ್ಸವದಲ್ಲಿ ಭಾಗವಹಿಸಲು ಅನಿವಾರ್ಯವಾಗಿ ಅವಕಾಶವಾಗದೆ ಇರು ವುದಕ್ಕಾಗಿ ಮಹಾಸ್ವಾಮಿಗಳಲ್ಲಿ ಕ್ಷಮೆ ಬೇಡುತ್ತೇನೆ. ನಮ್ಮ ರಾಜ್ಯಪಾಲರಾದ ಶ್ರೀಮನ್ಮಹಾರಾಜರವರ ನೇತೃತ್ವದಲ್ಲಿ ಸಮಾರಂಭವು ಯಶಸ್ವಿಯಾಗಿ ನಡೆಯಲೆಂದು ಆಶಿಸುತ್ತೇನೆ. ಜಯಂತಿ ಮಹೋತ್ಸವದ ಮುಕ್ತಾಯ ಸಮಾರಂಭಕ್ಕೂ ಮತ್ತು ಈ ಸಮಾರಂಭವನ್ನು ನೆರವೇರಿಸುತ್ತಿರುವ ವಿದ್ಯಾರ್ಥಿವೃಂದಕ್ಕೂ ಪೂರ್ಣ ಯಶಸ್ಸನ್ನು ಹಾರೈಸುತ್ತೇನೆ.

ಇತಿ ತಮ್ಮವ

*(sd)* B. D. JATTI

ನಂತರ ಉತ್ಸವ ಸಮಿತಿಯ ಪರವಾಗಿ ಶ್ರೀ ಹೆಚ್. ಗಂಗಾಧರಣ್‌ರವರು ಅತಿಥಿ ಗಳನ್ನು ಸ್ವಾಗತಿಸಿದರು.

## ದರ್ಶನತ್ರಯದ ಸಮನ್ವಯ

ದತ್ತಾತ್ರೇಯಂ ಗುರುಂ ದೇವಂ
ಧ್ಯಾಯನ್ನಿಶಂ ಸದಾಶಿವಂ |
ತನ್ಮಂತ್ರಂ ತಸ್ಯ ಗೀತಂಚ
ವ್ಯಾಕುರ್ವೇತತ್ ಪ್ರಸಾದತಃ ||
ಓಂ ಶಾಂತಿಃ ಶಾತಿಃ ಶಾಂತಿಃ

ಜಗದ್ಗುರು ಪೂಜ್ಯಪಾದರೇ, ಆದರ್ಶಪ್ರಭುಗಳೇ, ಮಾನ್ಯ ಅತಿಥಿಗಳೇ ಹಾಗೂ ಮಹಾಶಯರೇ,

ಸಾವಿರ ಸಂವತ್ಸರಗಳ ಹಿಂದೆ ಸಂಮ್ಯಜ್ಞಾನದ ಸುಕ್ಷೇತ್ರವೆನಿಸಿದ ಸಿದ್ಧಗಿರಿ ಯಿಂದ ಇತಂದು ಪವಿತ್ರ ಕಪಿಲಾ ತೀರದಲ್ಲಿ ತಪಗೈದು ತಪ್ತಜೀವಿಗಳಿಗೆ ತೃಪ್ತಿಯನ್ನಿ ನೀಡಿದ ಸಿದ್ಧ ಶಿವಯೋಗೀಂದ್ರರು ಜೆಂದಮನಕ್ಕೆ "ಸತ್ಯಂ ಶಿವಂ ಸುಂದರಂ" ಎಂದು ಸತ್ಯದರ್ಶನದ ದಾರಿ ತೋರಿದ ಸದ್ಯೋಜಾತ ಮೂರ್ತಿಯೂ ಆದ ಶ್ರೀಗುರು ಶಿವ ರಾತ್ರೀಶ್ವರ ಯೋಗೀಂದ್ರರ ಪುಣ್ಯ ಜಯಂತಿಯ ಭವ್ಯ ಸಮಾರಂಭದಲ್ಲಿ ನಾವಿಂದು

ಸಮಾವೇಶಗೊಂಡಿದ್ದೇವೆ. ಆ ಮಹಾ ಜಗದ್ಗುರುವಿನ ಅನುಗ್ರಹದಿಂದ ಬೆಳೆಗಿದ ಸುತ್ತೂರು ವೀರಸಿಂಹಾಸನಮಠದ ಕರುಣಾಮೃತ ಧಾರೆಯಿಂದ ದಶದಿಕ್ಕುಗಳಲ್ಲಿ ತನ್ನ ಕೀರ್ತಿಯನ್ನು ಪಸರಿಸಿಕೊಂಡು ಬೆಳಗುತ್ತಿರುವ ಹತ್ತು ಸಹಸ್ರ ವಿದ್ಯಾರ್ಥಿಗಳ ಭಕ್ತಿ ಕಾಣಿಕೆಯಾಗಿ ಈ ಸಮಾರಂಭವು ವಿಜೃಂಭಣೆಯಿಂದ ನಡೆಯುತ್ತಿದೆ. ಚೋಳ ಚಕ್ರವರ್ತಿಗಳ ಕುಲಗುರುಗಳೆನಿಸಿದ ಮಹಿಮಾನ್ವಿತ ಮಠಾಧೀಶ್ವರರ ಮಹಿಮಾ ಪ್ರಭಾವದಿಂದ ಶ್ರೀ ಸುತ್ತೂರು ಮಠವು ಲೋಕಕಲ್ಯಾಣದ ಸಾಧನಾ ಕೇಂದ್ರವಾಗಿ ಗಂಗರು, ವಿಜಯನಗರದ ಅರಸರುಗಳಿಂದ ರಾಜಪೂಜ್ಯತೆಯನ್ನು ಪಡೆದು ಅಪಾರ ಮನ್ನಣೆಯನ್ನು ಪಡೆದಿರುವುದು ಐತಿಹಾಸಕವಾದ ಶಿಲಾಶಾಸನಗಳಿಂದಲೂ ಇತಿಹಾಸ ಸಂಶೋಧನೆಗಳಿಂದಲೂ ಅಭಿವ್ಯಕ್ತವಾಗುತ್ತಿದೆ. ಚೋಳರು ಮತ್ತು ಗಂಗರಲ್ಲಿದ್ದ ವಿದ್ವೇಷದ ಮತ್ಸರವನ್ನು ಅಳಿಸಿ ವಾತ್ಸಲ್ಯದ ಸಮರಸವನ್ನು ಸಾಧಿಸಿದ ಕೀರ್ತಿ ಸುತ್ತೂರು ಮಠದ ಅಧಿಪತಿಗಳಿಗೆ ಸೇರಿದ್ದಾಗಿದೆ. ಧರ್ಮದರ್ಶನಗಳ ಸಮರಾಂಗಣವು ದಕ್ಷಿಣ ದೇಶದಲ್ಲಿ ದುರ್ಘಟಣೆಗಳಿಗೆ ಅನುವುಮಾಡದಂತೆ ಸನ್ಮತಿಯ ಸಂದೇಶವಿತ್ತ ಸಿದ್ಧ ನಂಜದೇಶಿಕೇಂದ್ರರು ಶ್ರೀಮಠದ ನಾಲ್ಕನೆಯ ಪೀಠಾಚಾರ್ಯರಾಗಿದ್ದಾರೆ. ಸುತ್ತೂರು ಗ್ರಾಮದಲ್ಲಿ ಸಂಸ್ಥಾಪಿತವಾದ ಹಿರಿಯ ಮಠದ ಶಾಖಾಮಠವನ್ನು ನಂಜನಗೂಡಿನಲ್ಲಿ ಶ್ರೀ ನಂಜುಂಡೇಶ್ವರರ ಮಂದಿರದೆದುರಿನಲ್ಲಿ ಸ್ಥಾಪಿಸಿ ಧರ್ಮಜಿಜ್ಞಾಸುಗಳಿಗೆ, ಯೋಗಾನುಸಂಧಾನಸಾಧಕರಿಗೆ ಸಿದ್ಧಿಕೇಂದ್ರವಾಗಿ ಮಾಡಿದ ಕೀರ್ತಿ ಶ್ರೀಮಠದ ಪಂಚಮ ಪೀಠಾಚಾರ್ಯರಾದ ಕಪಿನೀ ನಂಜುಂಡದೇಶಿಕೇಂದ್ರರಿಗೆ ಸಲ್ಲತಕ್ಕದ್ದಾಗಿದೆ. ಅನಂತರ ಬಂದ ಪೀಠಾಚಾರ್ಯರು ಕನ್ನಡ, ಆಂಧ್ರ, ತಮಿಳು ಮತ್ತು ಮಲಯಾಳ ದೇಶಗಳಿಂದ ಲಕ್ಷೋಪಲಕ್ಷ ಭಕ್ತವೃಂದವನ್ನು ಆಕರ್ಶಿಸಿ ತಮ್ಮ ಪ್ರಭಾವವನ್ನು ಬೀರಿದ ಮಹಾಮಹಿಮರು ಶ್ರೀ ಸುತ್ತೂರು ಪೀಠವನ್ನು ಅಲಂಕರಿಸಿದ್ದಾರೆ. ಮೈಸೂರು ಯದುಕುಲವು ಸಂಕಟದಲ್ಲಿ ಸಿಕ್ಕಿದಾಗ ಸಂರಕ್ಷಣೆಯ ಸತ್ಯ ಧ್ವಜವೆತ್ತಿ ಯದುವಂಶದ ಕೀರ್ತಿಯನ್ನು ಬೆಳಗಿಸಿದ ಸಾಹಸವು ಶ್ರೀ ಸುತ್ತೂರುಮಠದ ನವಮ ಪೀಠಾಚಾರ್ಯರಾದ ಭಂಡಾರಿ ಬಸಪ್ಪ ವಡೆಯರ ಪರಂಪರೆಗೆ ಸೇರಿದುದೆಂದು ಈ ಸಮಯದಲ್ಲಿ ಅತ್ಯಂತ ಸಂತೋಷದಿಂದ ಸ್ಮರಿಸುತ್ತೇವೆ. ಅಂದಿನಿಂದ ಮೈಸೂರು ಯದುಕುಲ ಶ್ರೇಷ್ಠರಾದ ರಾಜರ್ಷಿಗಳು ತಮ್ಮ ಸಂರಕ್ಷಣೆಯ ಸಂಕೇತವಾಗಿ ಒಡೆಯರೆಂಬ ಅಭಿದಾನವನ್ನು ತಮ್ಮ ನಾಮಾಂಕಿತದಲ್ಲಿ ಅಲಂಕರಿಸಿಕೊಂಡು ಗುರುಭಕ್ತಿಯ ಕೃತಜ್ಞತೆಯನ್ನು ವ್ಯಕ್ತಪಡಿಸಿರುವುದು ಇಂದು ಸಂಸ್ಮರಣೀಯವಾಗಿದೆ.

ಇಂತಹ ಭವ್ಯ ಇತಿಹಾಸದ ಹಿನ್ನಲೆಯನ್ನುಳ್ಳ ಶ್ರೀ ಸುತ್ತೂರು ವೀರಸಿಂಹಾಸನದ ಕೀರ್ತಿಯ ಪೂರ್ಣಕಲಶ ಸ್ಥಾಪನೆಮಾಡಿದ ಆದಿಗುರು ಶ್ರೀ ಶಿವರಾತ್ರೀಶ್ವರರ ಜಯಂತಿ ಮಹೋತ್ಸವವು ಒಂದು ವಾರದಿಂದ ಭಕ್ತರಮನಣೆಸಂತೆ ವಿಜೃಂಭಣೆಯಿಂದ ನೆರವೇರಿದೆ. ಆ ಸಂಸ್ಥೆಯ ಕರುಣಾಮೃತಧಾರೆಯಿಂದ 14 ವಿದ್ಯಾರ್ಥಿ

ಯಗಳು, 3 ಕಾಲೇಜುಗಳು, 3 ಹೈಸ್ಕೂಲುಗಳು, ಸಂಸ್ಕೃತ, ವೇದಜ್ಯೋತಿಷ್ಯ ಠಶಾಲೆಯೂ, ಯಶಸ್ವಿಯಾಗಿ ರಾಷ್ಟ್ರಸೇವೆಯನ್ನೆಸಗುತ್ತಿವೆ. ಈ ಸಂಸ್ಥೆಗಳ ಶಸ್ಸಿಗೆ ಆದಿಗುರುಗಳ ಅನುಗ್ರಹದೊಡನೆ ಇಂದು ಇಲ್ಲಿನ ಪೀಠವನ್ನಲಂಕರಿಸಿರುವ ದ್ಗುರುಗಳೀರ್ವರ ಕೃಪಾಬಲವು ತಪೋಬಲವು ಕಾರಣವಾಗಿದೆಯೆಂದು ಹೇಳಿದರೆ ತಿಶಯೋಕ್ತಿಯಲ್ಲ. ಹತ್ತು ವರ್ಷಗಳಿಂದ ಸಹಸ್ರಾರು ಜನ ಶಿಷ್ಯವೃಂದದ ಶುಭೋ ಯವನ್ನರಸಿ ಸತತವು ಸರ್ವೇಶ್ವರನ ಷಡಾಕ್ಷರೀ ಮಹಾಮಂತ್ರ ಲೇಖನ ತಪಸ್ಸನ್ನಾ ರಿಸುತ್ತಾ ಎರಡುಕೋಟಿ ಮಹಾಮಂತ್ರಯೋಗ ಅನುಸಂಧಾನವನ್ನು ನಡೆಸಿ ಮಂತ್ರ ದ್ಧರಾದ ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು ಈ ಸಭೆಗೆ ಬಿಜಯಂ ದು ಸಮಾರಂಭವನ್ನು ಭವ್ಯಗೊಳಿಸಿದ್ದಾರೆ. ಭಕ್ತರನ್ನು ಧನ್ಯರಾಗಿಸಿದ್ದಾರೆ. 80 ಂವತ್ಸರಗಳ ಸಮೀಪಿಸುತ್ತಿರುವ ಈ ವೃದ್ಧಾಪ್ಯದಲ್ಲಿಯೂ ದೇಹದ ಮೋಹವನ್ನು ರಿತು ವ್ಯವಹಾರ ಚಾಪಲ್ಯದ ಚಿತ್ತವಳಿದು ಮಂತ್ರಾನುಸಂಧಾನ ನಿರತರಾದ ಜ್ಯಪಾದರು ಭಕ್ತವೃಂದದ ಆನಂದಕ್ಕೆ ಅಮರಜ್ಯೋತಿಯನ್ನು ಒದಗಿಸಲು ಅನು ಹಿಸಿ ಐತಂದುದು ನಮ್ಮ ಸಮಾರಂಭದ ಐಸಿರಿಯ ಕುರುಹಾಗಿದೆ. ಶ್ರೀ ಗುರುವಿನ ರಕಮಲ ಸಂಜಾತ ಪರಮಹಂಸ ಪರಿವ್ರಾಜಕಾಚಾರ್ಯರೂ ಆದ ಜಗದ್ಗುರು ಶ್ರೀ ವರಾತ್ರೀರಾಜೇಂದ್ರಮಹಾಸ್ವಾಮಿಗಳವರು ಈ ಸಮಾರಂಭಕ್ಕೆ ಪೂರ್ಣಾಶೀರ್ವಾದದ ಮೃತಧಾರೆಯರೆಯಲ್ಕೈತಂದಿದ್ದಾರೆ. ಜಗದ್ಗುರುಗಳೀರ್ವರಿಗೆ ಸಾಷ್ಟಾಂಗ ಪ್ರಣಾಮ ರ್ವಕವಾದ ಸುಸ್ವಾಗತವನ್ನು ಬಯಸುತ್ತೇನೆ.

ಭಾರತವು ಧರ್ಮದ ತೌರೂರು. ಸಾಧಕರಾದ ಸಿದ್ಧಯೋಗಿಗಳಿಗೆ ಲವಾರು ಮಾರ್ಗಗಳಲ್ಲಿ ಸತ್ಯ ಸಾಕ್ಷಾತ್ಕಾರವಾಗಿ ಆಶಿಸಿದವರ ಸಾಕ್ಷಾತ್ಕಾರದ ಾರ್ಗಕ್ಕೆ ಅನುಗುಣವಾದ ಸಿದ್ಧಾಂತಗಳು ಭಾರತದಲ್ಲಿ ಉಗಮವಾಗಿವೆ. ದ್ವೈತ, ದ್ವೈತಗಳ ಭಿನ್ನತೆಯು ಅದ್ವೈತದ ಅಂತಃಶಿಖರಿಯನ್ನು ಮುಟ್ಟುವವರೆಗೆ ಲವಾರು ದರ್ಶನಗಳು ಉದಿಸಿ ಧರ್ಮ ಸಂಗ್ರಾಮವನ್ನೆಸಗಿದ ಭೂಮಿ ನಮ್ಮ ನಾಡು. ದರೆ ದ್ವೈತದ ದರ್ಶನವಿತ್ತ ಧರ್ಮಾಚಾರ್ಯರು ವಿಶಿಷ್ಟಾದ್ವೈತದರ್ಶನ ಸಂಸ್ಥಾಪನಾ ಚಾರ್ಯರು, ಕೇವಲಾದ್ವೈತದ ಪ್ರತಿಷ್ಠಾಪನಾಚಾರ್ಯರು ಶಕ್ತಿ ವಿಶಿಷ್ಟಾದ್ವೈತದ ಗ್ದರ್ಶಕರಾದ ಆಚಾರ್ಯರು, ಶರಣರು ಸಮಾನ ಅವಕಾಶದಿಂದ ಬೆಳಗಿದ ಪುಣ್ಯ ಭೂಮಿ ಕನ್ನಡನಾಡು. ಇಂತಹ ಸರ್ವಧರ್ಮಗಳ ಸಮನ್ವಯದ ಸತ್ಯಭೂಮಿ ಎನಿಸಿದ ಕರ್ನಾಟಕದ ರತ್ನಸಿಂಹಾಸನಾಧೀಶ್ವರರಾದ ಶ್ರೀಮನ್ಮಹಾರಾಜರವರಾದ ಶ್ರೀ ಜಯಚಾಮರಾಜೇಂದ್ರ ವಡೆಯರ್ ಬಹದ್ದೂರ್‌ರವರು ಈ ಸಮಾರಂಭಕ್ಕೆ ಜಯಮಾಡಿಸಿ ಧರ್ಮಜಿಜ್ಞಾಸುಗಳಿಗೆ ದಿವ್ಯ ಚೇತನವನ್ನೊದಗಿಸಿರುವುದು ನಮ್ಮ ನ್ನೆಲ್ಲರ ಆತ್ಮಾನಂದದ ಸಂಗತಿಯಾಗಿದೆ. ಮೈಸೂರಿನ ಆದರ್ಶ ಪ್ರಭುಗಳು ವಯಂ ತತ್ತ್ವ ಸಾಧಕರಾಗಿ ಸಿದ್ಧಿ ಪಡೆದ ಶುದ್ಧಾತ್ಮರಾಗಿದ್ದಾರೆ. ಶ್ರುತಿ, ಸ್ಮೃತಿ

ಗಳಿಂದ ಅರಿತ ಅರಿವನ್ನು ತನ್ಮ ಜೀವನದಲ್ಲಿ ಅಳವಡಿಸಿಕೊಂಡು ರಾಜಯೋಗಿಗ ಸಿದ್ದಾರೆ. ಪಾಶ್ಚಾತ್ಯದರ್ಶನದ ಸಂಸ್ಥಾಪಕರಾದ ಸಾಕ್ರಟೀಸ್ ಮಹಾಪುರುಷ ಪರಮಶಿಷ್ಯರಾದ ಪ್ಲೇಟೋ ಮಹಾಶಯನು ಆಶಿಸಿದ ಆಕಾಂಕ್ಷೆ ಮೂರ್ತಿವೆತ್ತ ನಮ್ಮ ಕರ್ನಾಟಕಾಧೀಶ್ವರರು ತತ್ವ ಜ್ಞಾನಿಗಳಾಗಿ ರಾಜಯೋಗಿಗಳಾಗಿ ಕನ್ನ ಕೀರ್ತಿಕಲಶವಾಗಿದ್ದಾರೆ. ಅವರು ಅರಿತು ಅನುಭವಿಸಿದ ಸಿದ್ಧಿ ಸಂದೇಶವನ್ನು ವಿ ನಾನಾ ರಾಷ್ಟ್ರಗಳಲ್ಲಿ ಬೆಳಗಿ ಭಾರತದ ಸಂಸ್ಕೃತಿಯ ಹಿರಿಮೆಯನ್ನು ವರ್ಧಿಸಿದ್ದಾ ತಮ್ಮ ಜ್ಞಾನಸಿದ್ಧಿಯ ಅರ್ಥಾತ್ ದಿವ್ಯತೆಯ ಸಂದರ್ಶನದ ಸಂದೇಶಗಳನ್ನು ಕ ರೂಪಕ್ಕಿಳಿಸಿ ಮಾನವತೆಗೆ ಮಹದುಪಕಾರ ಮಾಡಿದ್ದಾರೆ. ಸಂಸ್ಕೃತದ ಸಂ ಗಳಲ್ಲಿದ್ದ ಭಾರತೀಯ ದರ್ಶನದ ದಿವ್ಯಕೃತಿಗಳನ್ನು ಕನ್ನಡಕ್ಕೆ ಪರಿವರ್ತಿಸಲು ನೆ ನೀಡಿ, ಕನ್ನಡಿಗರ ಆತ್ಮೋದ್ಧಾರಮಾಡಿದ್ದಾರೆ. ಇಂತಹ ಮಹಾನುಭಾವರನ್ನು ಸಮಾರಂಭಕ್ಕೆ ಅತ್ಯಾನಂದದಿಂದ ಸ್ವಾಗತಿಸುತ್ತೇನೆ.

ಶಿವಜೀವರಲ್ಲಿ ಸಾಮರಸ್ಯವಿದ್ದರೂ ಭಿನ್ನತೆಯನ್ನು ಕಾಣುವುದೇ ದ್ವೈತ, ಜೀವರಲ್ಲಿ ಭಿನ್ನತೆ ಇಲ್ಲದಿದ್ದರೂ ಶಿವನೊಳಗೆ ಜೀವನ ಪ್ರತ್ಯೇಕತೆಯನ್ನು ಕಾಣುವು ಶಕ್ತಿವಿಶಿಷ್ಟಾದ್ವೈತ, ಶಿವಜೀವರಲ್ಲಿ ಜೀವವನ್ನು ಪೂರ್ಣವಾಗಿ ಮರೆತು ಶಿವನ ಅನುಭವಿಸುವುದೇ ಕೇವಲಾದ್ವೈತ. ಈ ಮೂರು ದರ್ಶನದ ಸಾಮರಸ್ಯವೇ ಪರಮ ದ್ವೈತ, ಅರ್ಥಾತ್ ಶಕ್ತಿವಿಶಿಷ್ಟಾದ್ವೈತ, ಇಂದಿನ ಸಭೆ, ಪರಮಾದ್ವೈತದ ಪ್ರತಿಧ್ವ ಯಾಗಿದೆ. ಅಂದರೆ ಇಂದಿನ ಸಮಾರಂಭಕ್ಕೆ ಐತಂದ ಶ್ರೀಮನ್ಮಹಾರಾಜರವರು ರಾ ಪಾಲರಾಗಿ ರಾಜನೀತಿ ಅರ್ಥಶಾಸ್ತ್ರಗಳಲ್ಲಿ ಪರಿಣತರಾಗಿ ಜೀವನದ ಏಳಿಗೆಗಾ ಜಾಣ್ಮೆಯಿಂದ ಲೌಕಿಕವನ್ನು ನಡೆಸುತ್ತಿದ್ದರೂ ಶಿವತತ್ವವನ್ನು ಸಮವಾಗಿ ಕಾಣು ರುವ ದ್ವೈತದರ್ಶನದ ಸಂಕೇತವಾಗಿದ್ದಾರೆ. ಜಗದ್ಗುರು ಶ್ರೀ ಶಿವರಾತ್ರಿ ರಾಜೇಂ ಮಹಾಸ್ವಾಮಿಗಳು ಶಿವಸಾಕ್ಷಾತ್ಕಾರದ ಸಂಸ್ಕಾರದ ಸೂತ್ರವನ್ನು ಹಿಡಿದು ಜೀ ರಾಶಿಗಳ ಅಭ್ಯುದಯಕ್ಕೆ ಶಿವನೊಲುಮೆಯೊಳಗೆ ಲೌಕಿಕವನ್ನೆಸಗುತ್ತಾ ವಿಶಿ ದ್ವೈತದ ಪ್ರತಿಬಿಂಬವಾಗಿದ್ದಾರೆ. ಜಗದ್ಗುರು ಶ್ರೀ ಶಿವರಾತ್ರಿಮಹಾಸ್ವಾಮಿಗಳ ದೇಹ ಗೇಹದ ಹಂಗು ದೊರೆದು ಜೀವಜಾಲದ ಮೋಹವ ಮರೆತು ಮಂತ್ರನಿಷ್ಠೆಯಿ ಶಿವಭಾವಕರಾಗಿ ಕೇವಲಾದ್ವೈತದ ದರ್ಶನವಾಗಿದ್ದಾರೆ. ಧರ್ಮದರ್ಶನದ ಭೇ ಜಾತಿ ಮತದ ಅಂತರ್ಯ, ಪ್ರಾಂತ್ಯಭಿನ್ನತೆಯ ಗೊಂದಲಕ್ಕೆ ಸಿಲುಕದ ಈ ಜಯ ಮಹೋತ್ಸವಸಮಾರಂಭವು ಈದರ್ಶನತ್ರಯದ ಸಮನ್ವಯಗೊಳಿಸಿ ಪರಮಾದ್ವೈತ ಪರಮದರ್ಶನಮಾಡಿಸಿದೆ. ಇಂತಹ ಸಮನ್ವಯ ದರ್ಶನವೇ ಮಾನವತೆಗೆ ಇ ಮಹಾಗುರು ದತ್ತಾತ್ರೇಯ ದರ್ಶನ. ಅದೇ ದತ್ತಾತ್ರೇಯ ಗುರುವಿನಿಂದ ಅನುಗ್ರ ತವಾದ ಪರಮಾದ್ವೈತ. ಈ ಪರಮಾದ್ವೈತ ಸಂದರ್ಶನಕ್ಕಾಗಿ ತಮ್ಮೆಲ್ಲರ ಸ್ವಾಗತಿಸುವ ಪುಣ್ಯ ನನಗೆ ಲಭಿಸಿದೆ. ಎಂದು ಸ್ವಾಗತಿಸಿದರು.

## ಈಶ್ವರಾನುಗ್ರಹದ ಬಯಕೆ ಹೆಚ್ಚಿದಷ್ಟು ಮಾನವನ ಶ್ರೇಯಸ್ಸು

—§—

ಮೈಸೂರು ನಗರದ ಜಗದ್ಗುರು ಶ್ರೀ ಶಿವರಾತ್ರೀಶ್ವರ ವಿದ್ಯಾಪೀಠದಲ್ಲಿ ನೆರ ರಿದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸವದ ಮುಕ್ತಾಯ ಸಾರಂಭದಲ್ಲಿ ಮೈಸೂರು ಸಂಸ್ಥಾನದ ರಾಜ್ಯಪಾಲರಾದ ಶ್ರೀಮನ್ಮಹಾರಾಜ ಶ್ರೀ ಯಚಾಮರಾಜ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ., ಲ್. ಎಲ್. ಡಿ., ಇವರು ದಯಪಾಲಿಸಿದ ಸಂದೇಶ.

**ಗದ್ಗುರು ಶ್ರೀ ಶಿವರಾತ್ರಿಮಹಾಸ್ವಾಮಿಗಳವರೇ, ಜಗದ್ಗುರು ಶ್ರೀ ಶಿವರಾತ್ರಿ ಜೇಂದ್ರ ಮಹಾಸ್ವಾಮಿಗಳವರೇ, ಮಹಿಳೆಯರೆ ಮತ್ತು ಮಹನೀಯರೆ,**

ಸುತ್ತೂರು ವೀರಸಿಂಹಾಸನದ ಸಂಸ್ಥಾಪಕರಾದ ಜಗದ್ಗುರು ಶ್ರೀ ಶಿವರಾತ್ರೀ ರರ ಜಯಂತಿ ಮಹೋತ್ಸವದ ಸಮಾರಂಭದಲ್ಲಿ ಭಾಗವಹಿಸಲು ನಮಗೆ ಅತ್ಯಂತ ಂತೋಷವೆನಿಸಿದೆ. ಈ ಸಮಯದಲ್ಲಿ ನಮ್ಮ ಪೂಜ್ಯ ಹಿರಿಯರು ಅರಮನೆ ಮತ್ತು ುರುಮನೆಗಳ ಸಂಬಂಧವನ್ನು ಹೇಗೆ ಬೆಳೆಸಿಕೊಂಡು ಬಂದರೆಂಬುದನ್ನು ಸ್ವಾಗತದಲ್ಲಿ ಳಿಸಲಾಗಿದೆ. ಅಲ್ಲದೆ ನಮ್ಮ ವಿಷಯದಲ್ಲಿ ಅಭಿಮಾನಪೂರ್ವಕವಾಗಿ ಪ್ರಶಂಸನೀ ುವಾದ ಕೆಲವು ವಿಷಯಗಳನ್ನು ತಿಳಿಸಿರುವಿರಿ. ಅದಕ್ಕಾಗಿ ಕೃತಜ್ಞತೆಯನ್ನು ೂಚಿಸಬಯಸುತ್ತೇವೆ.

ಸಾವಿರ ವರ್ಷಗಳ ಹಿಂದೆ ಶಿವಯೋಗಿಗಳಾದ ಜಗದ್ಗುರು ಶ್ರೀ ಶಿವರಾತ್ರಿ ುಹಾಗುರುಗಳವರು ಸುತ್ತೂರು ವೀರಸಿಂಹಾಸನ ಮಠವನ್ನು ಸಂಸ್ಥಾಪಿಸಿ ಜನತೆಗೆ ತ್ಮೋದ್ಧಾರದ ಹಾದಿ ತೋರಿಸಿರುವ ವಿಷಯಗಳನ್ನು ಕೇಳಿ ಸಂತೋಷವಾಗಿದೆ. ರಮನೆಯು ಪ್ರಜಾವರ್ಗದ ಲೌಕಿಕ ಜೀವನದ ಅಭ್ಯುದಯಕ್ಕೆ ಶ್ರಮಿಸಿದಂತೆ ಗುರು ಠಗಳು ಭಕ್ತವರ್ಗದ ಪಾರಮಾರ್ಥಿಕ ಉನ್ನತಿಗೆ ಶ್ರಮಿಸಿರುವುದು ಭಾರತೀಯ ತಿಹಾಸದ ವೈಶಿಷ್ಟ್ಯವಾಗಿದೆ. ಅಂತೆಯೇ ಸುತ್ತೂರು ವೀರಸಿಂಹಾಸನ ಮಠವು ಕ್ತವೃಂದದ ಉದ್ಧಾರಕ್ಕೆ ಸರ್ವತೋಮುಖವಾಗಿ ಶ್ರಮಿಸುತ್ತಾ ಎರಡು ಸಹಸ್ರ ದ್ಯಾರ್ಥಿಗಳಿಗೆ ಉಚಿತ ಅಶನ ವಸತಿ ಮತ್ತು ವಿದ್ಯಾದಾನ ಮಾಡುತ್ತಿರುವುದೂ ಮೂರು ಪ್ರೌಢಶಾಲೆಗಳು, ಮೂರು ಕಾಲೇಜುಗಳು, ಸಂಸ್ಕೃತಪಾಠಶಾಲೆ, ಗುರುಕುಲ ಮುಂತಾದ ಹಲವು ಸಂಸ್ಥೆಗಳನ್ನು ನಡೆಸುತ್ತಿರುವುದೂ ತುಂಬಾ ಶ್ಲಾಘನೀಯ ವಿಷ ಯವಾಗಿದೆ. ಇಷ್ಟು ವಿಶಾಲ ಕ್ಷೇತ್ರದಲ್ಲಿ ಈ ಸಂಸ್ಥೆಯು ಗಳಿಸಿರುವ ಯಶಸ್ಸಿಗೆ ಸಂಸ್ಥಾಪಕರಾದ ಜಗದ್ಗುರುಗಳ ಮಹಿಮಾ ಪ್ರಭಾವವೂ ಮತ್ತು ಕೋಟ್ಯಾನು

ಕೋಟಿ ಮಹಾ ಮಂತ್ರಗಳ ಲೇಖನ ಯಜ್ಞವನ್ನು ಕೈಗೊಂಡು ಹತ್ತು ವರ್ಷಗಳಿ ಅವ್ಯಾಹತವಾಗಿ ನಡೆಸುತ್ತಿರುವ ಹಿರಿಯ ಜಗದ್ಗುರುಗಳಾದ ಶ್ರೀ ಶಿವರಾತ್ರಿ ಮಹಾ ಸ್ವಾಮಿಗಳವರ ತಪಃಪ್ರಭಾವವೂ ಮೂಲ ಕಾರಣಗಳಾಗಿವೆ ಎಂಬುದು ನಿತ್ಯ ಸ ವಾದುದು. ಏಕೆಂದರೆ 'ತೃಣಮಪಿ ನ ಚಲತಿ, ತೇನ ವಿನಾ' ಎಂಬಂತೆ ಪರಮಾತ್ ಅನುಗ್ರಹವಿಲ್ಲದೆ ಜಗತ್ತಿನ ಯಾವ ವ್ಯಾಪಾರವೂ ನಡೆಯಲಾರದು. ಅಗ್ನಿಗೆ ಯುವ ಶಕ್ತಿ, ವಾಯುವಿಗೆ ಚಲಿಸುವ ಶಕ್ತಿ, ಜಲಕ್ಕೆ ಶೀತಶಕ್ತಿ ಎಲ್ಲವೂ ಪರಮಾತ ಅನುಗ್ರಹದಿಂದ ಬರುತ್ತವೆಯೇ ಹೊರತು ಅವಕ್ಕೆ ಸ್ವಯಂಶಕ್ತಿ ಇಲ್ಲವೆಂಬುದ ನಮ್ಮ ಉಪನಿಷತ್ತುಗಳಲ್ಲಿ ಕಥೆಯ ರೂಪದಲ್ಲಿ ಚಿತ್ರಿಸಿದ್ದಾರೆ. ಗೀತೆಯಲ್ಲಿ—

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿಮತ್ವಾಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥** ಎಂದಿದೆ.

ಅಂದರೆ ಜಗತ್ತಿನ ಎಲ್ಲ ವಸ್ತು ವ್ಯಾಪಾರದಲ್ಲಿಯೂ ಪರಮಾತ್ಮನ ಪ್ರಭಾವವೇ ಇರು ದೆಂದು ಅರಿತು ಅನುಭವಿಗಳು ಭಕ್ತಿಯಿಂದ ಪರಮಾತ್ಮನನ್ನು ಭಜಿಸುತ್ತಾರೆ. ಅಂತ ಭಾವನೆಯ ಪರಿಣಾಮವೇ ಈ ಸಂಸ್ಥೆ ಎಂದು ನಮಗೆಲ್ಲಾ ಅನ್ನಿಸದೆ ಇರದು. ಮಾ ವನು ತನ್ನ ಕರ್ತವ್ಯದಲ್ಲಿ ಈ ಭಾವನೆಯನ್ನು ಬೆಳೆಸಿಕೊಂಡು ನಡೆದರೆ ಮಾತ್ರ ಶ್ರೇಯಸ್ಸನ್ನು ಪಡೆಯಲು ಸಾಧ್ಯ.

ಮಾನವರು ಪ್ರಭುಶಕ್ತಿಯನ್ನು ಮರೆತು ಸ್ವಶಕ್ತಿಯನ್ನೇ ಪೂರ್ಣವಾಗಿ ಅ ಲಂಬಿಸಿದಾಗ ಜಗತ್ತಿನಲ್ಲಿ ಅನೇಕ ವಿಪ್ಲವಗಳಾಗಿರುವುದನ್ನು ಇತಿಹಾಸದಲ್ಲಿ ಕಾ ತ್ತೇವೆ. ಆಧುನಿಕ ಜಗತ್ತಿನಲ್ಲಿ ಮಾನವತೆಯು ಸ್ವಶಕ್ತಿ ಪ್ರಭಾವಕ್ಕೆ ಮಾರುಹೋ ತ್ತಿರುವುದರಿಂದ ಎಲ್ಲೆಲ್ಲಿಯೂ ಅಶಾಂತಿಯ ಕೋಲಾಹಲವಾಗುತ್ತಿದೆ. ಇದು ಲೌಕಿ ದಲ್ಲಿ ಮಾತ್ರವಲ್ಲ. ಪಾರಮಾರ್ಥಿಕದಲ್ಲೂ ಸ್ವಶಕ್ತಿಯಿಂದಲೇ ಪೂರ್ಣತೆಯನ್ನು ಪ ಯುತ್ತೇವೆಂದು ಕೆಲವು ಮಾರ್ಗಗಳನ್ನು ಅವಲಂಬಿಸಿದಾಗ ಮಾನವತೆಯು ಅಶಾಂ ಕೋಲಾಹಲದಲ್ಲಿ ಸಿಕ್ಕಿರುವುದನ್ನು ನಾವು ಸ್ಮೃತಿಗಳಲ್ಲಿ ಕಾಣುತ್ತೇವೆ. ಆದುದರಿಂ ಪ್ರಭುಶಕ್ತಿಯನ್ನು ಹೆಚ್ಚು ಅವಲಂಬಿಸಿದರೆ ಮಾತ್ರವೇ ನಾವು ಪೂರ್ಣತೆಯನ ಪಡೆಯಲು ಸಾಧ್ಯವೆಂದು ಅರಿವಾಗುತ್ತದೆ. ಅವಧೂತಗೀತೆಯಲ್ಲಿ—

**ಈಶ್ವರಾನುಗ್ರಹಾದೇವ ಪುಂಸಾಮದ್ವೈತವಾಸನಾ ।**
**ಮಹದ್‌ಭಯಪರಿತ್ರಾಣಾದ್ ವಿಪ್ರಾಣಾಂ ಉಪಜಾಯತೇ॥** ಎಂದಿದೆ

ಅಂದರೆ ಪರಾತ್ಪರ ವಸ್ತುವಿನ ಅಭಿನ್ನತೆಯ ಅರಿವೂ ಘೋರ ಭಯದಿಂ ಸಂರಕ್ಷಣೆಯೂ ನಮಗೆ ಈಶ್ವರಾನುಗ್ರಹದಿಂದಲೇ ಪ್ರಾಪ್ತವಾಗಬೇಕೆಂದು ಹೇಳಿದೆ ಈಶ್ವರಾನುಗ್ರಹದ ಬಯಕೆ ಹೆಚ್ಚಿದಂತೆಲ್ಲಾ ಮಾನವನ ಶ್ರೇಯಸ್ಸು ವರ್ಧಿಸುತ್ತದೆ



ಸಿಂಹಾಸನಾಲಂಕೃತವಾದ ಆದಿಗುರು ಶ್ರೀ ಶಿವರಾತ್ರೀಶ್ವರರ ಭಾವಚಿತ್ರದ ಬಳಿಯಲ್ಲಿ ಜಗದ್ಗುರುಗಳೊಡನೆ ಶ್ರೀ ಕೆ. ಜಿ. ಪುಟ್ಟಣ್ಣಯ್ಯನವರು ಮತ್ತು ಗುರುಸೇವಾ ಧುರೀಣ ಬೆಂಗಳೂರಿನ ಶ್ರೀ ಶಂಕರಪ್ಪಶೆಟ್ಟರವರು



ಜಯಂತೀ ಸಮಾರಂಭದಲ್ಲಿ ಅರಣ್ಯಶಾಖಾ ಸಚಿವ ಶ್ರೀ ಕೆ.ಎಫ್. ಪಾಟೀಲರು ಭಾಷಣಮಾಡುತ್ತಿರುವುದು.

ಆ ಬಯಕೆಯು ಬೆಳವಣಿಗೆಯಾಗಬೇಕಾದರೆ ನಾವು ಪರಮಾತ್ಮನ ಅಥವಾ ಪರಮಾತ್ಮನ ಅಂಶ ಸಂಭವರಾದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿವಯೋಗೀಂದ್ರರಂತಹ ಮಹಾನುಭಾವರ ಸ್ಮರಣೆ ಮಾಡುವುದೂ ಮತ್ತು ಅವರು ತೋರಿದ ಮಾರ್ಗದಲ್ಲಿ ನಡೆಯಬೆತ್ನಿಸುವುದೂ ಅವಶ್ಯಕ. ಈ ಮಹತ್ತರ ಉದ್ದಿಶ್ಯದಿಂದಲೇ ಇಲ್ಲಿನ ಭಕ್ತವೃಂದದವರು ಈ ಮಹೋತ್ಸವವನ್ನು ನಡೆಸುತ್ತಿದ್ದಾರೆಂದು ನಮ್ಮ ನಂಬಿಗೆ.

ಶ್ರೇಯಸ್ಸಿನ ಆಕಾಂಕ್ಷೆ ಎಲ್ಲರಲ್ಲಿಯೂ ಇದ್ದೇ ಇರುತ್ತದೆ, ಆದರೆ ಅದನ್ನು ಹೇಗೆ ಸಾಧಿಸಬೇಕೆಂದು ವಿಚಾರಿಸುವವರು ವಿರಳ. ಸಾಧಿಸುವ ಮಾರ್ಗವರಿತರೂ ಸಹ ಅದರಂತೆ ಆಚರಿಸುವವರು ಅತಿವಿರಳ. ಅದೇ ಲೋಕದ ಇಂದಿನ ಎಲ್ಲ ಮಾರಕಗಳಿಗೆ ಕಾರಣವಾಗಿದೆ. ಆದುದರಿಂದ ಮಾನವನಲ್ಲಿ ಬೀಜರೂಪವಾಗಿರುವ ಶ್ರೇಯೋಭಿಲಾಷೆಯನ್ನು ಬೆಳೆಸುವುದಕ್ಕಾಗಿಯೇ ಮಹಾಮಹಿಮರು ಅವತರಿಸಿ ನಮಗೆ ದಾರಿ ತೋರಿಸುತ್ತಾರೆ. ಕೈಹಿಡಿದು ನಡೆಸುತ್ತಾರೆ. ಅಂತೆಯೇ ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿವಯೋಗಿಗಳಂತಹ ಅವತಾರ ಪುರುಷರು ಮಾನವನ ಪಾರಮಾರ್ಥಿಕ ಉನ್ನತಿಗೆ ಕಾರಣರಾಗುತ್ತಾರೆ. ಆದುದರಿಂದ ಪುಣ್ಯ ಪುರುಷರಾದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿವಯೋಗಿಗಳ ಈ ಪುಣ್ಯಸ್ಮರಣೀಯ ಸಮಾರಂಭದ ಜಯಂತಿ ಮಹೋತ್ಸವದಲ್ಲಿ ಅನೇಕ ಜನ ಅನುಭವಿಗಳು ಭಾಗಿಗಳಾಗಿ ಶ್ರೇಯಃಪ್ರಾಪ್ತಿಯ ಸಂದೇಶವನ್ನಿತ್ತಿದ್ದಾರೆಂದು ತಿಳಿದು ಸಂತೋಷವಾಗಿದೆ. ಅಖಂಡ ಮಾನವತೆಯ ಶ್ರೇಯಃಪ್ರಾರ್ಥನೆಗೆ ಇದೊಂದು ಸದವಕಾಶವೆಂದು ಭಾವಿಸಿ ಈ ಮಹೋತ್ಸವದಲ್ಲಿ ಸಂತೋಷದಿಂದ ಭಾಗಿಗಳಾಗಿದ್ದೇವೆ. ಪರಮಾತ್ಮನ ಅನುಗ್ರಹದಿಂದ ಈ ಸಂಸ್ಥೆ ಅತಿಶಯವಾಗಿ ಬೆಳೆದು, ಲೋಕಕಲ್ಯಾಣದ ಸಾಧನಾ ಕೇಂದ್ರವಾಗಲೆಂದೂ ವಿದ್ಯೆಯನ್ನು ಹರಡುವ ಮಹಾ ಸಂಸ್ಥೆಯೂ ಆಗಲೆಂದು ನಾವು ಹಾರೈಸುತ್ತೇವೆ.

## ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಶ್ರೀಮರ್ಾ ಎನ್. ಎ. ನಿಕ್ಕಂರವರು ಇಂಗ್ಲೀಷಿನಲ್ಲಿ ಭಾಷಣಮಾಡುತ್ತಾ ಸಂಸ್ಥೆಯ ಸೇವೆಯನ್ನು ಪ್ರಶಂಸಿಸಿದರು

—§—

ನಾವು ಈ ಸಮಾರಂಭದಲ್ಲಿ ಜಗದ್ಗುರುಗಳವರ ಆಶೀರ್ವಾದ ಪಡೆಯಲು ಸಮಾವೇಶಗೊಂಡಿದ್ದೇವೆ. ಸುತ್ತೂರು ವೀರಸಿಂಹಾಸನಮಠವು ವಿದ್ಯಾಕ್ಷೇತ್ರದಲ್ಲಿ ಮಾಡುತ್ತಿರುವ ಸೇವೆಯನ್ನು ಪ್ರಶಂಸೆ ಮಾಡಿದರು. ಶ್ರೀಯುತರು ವೇದಾಂತದ ಬಗ್ಗೆ ಹೇಳುತ್ತಾ ಧರ್ಮ ಮಾನವನಲ್ಲಿ ಭೇದಭಾವನೆಗೆ ಎಡೆಗೊಡುವುದಿಲ್ಲ. ವೇದಾಂತವು

ಅತಿಪ್ರಾಚೀನವೂ ಪ್ರಸಿದ್ಧವೂ ಆಗಿದೆ. ಇದು ಬ್ರಹ್ಮವಿದ್ಯೆ ಇದಕ್ಕೆ ಪರಾವಿದ್ಯೆ ಎಂದು ಹೆಸರು. ಮಾನವತೆಯು ಸಹಜವಾಗಿ ಸಾಧಿಸಬೇಕಾದ ಗುರಿ ಎಂದರೆ ಜೀವಾತ್ಮ ಪರಮಾತ್ಮರ ಸಾಮರಸ್ಯ. ಎಲ್ಲಾ ಸಿದ್ಧಾಂತವೂ ಜೀವಾತ್ಮ ಮತ್ತು ಪರಮಾತ್ಮನ ಐಕ್ಯತೆಗೆ ಮಾನವನು ಶ್ರಮಿಸಬೇಕೆಂದು ಬೋಧಿಸುತ್ತಾ ನಡೆದಿವೆ. ಆದರೆ ಧರ್ಮವನ್ನು ಅರ್ಥ ಮಾಡಿಕೊಳ್ಳದೆ ಅನರ್ಥಗಳಾಗುತ್ತವೆ. ಆದುದರಿಂದ ಧರ್ಮದ ನಿಜರೂಪವನ್ನು ತಿಳಿಸಲು ಆಗಾಗ ಮಹಾನುಭಾವರು ಅವತರಿಸುತ್ತಾರೆ. ಹಾಗೆಯೇ ಧರ್ಮದ ಪುನರುಜ್ಜೀವನಗೊಳಿಸಲು ಅವತರಿಸಿದ ಮಹಾಮಹಿಮರ ಜಯಂತಿಯನ್ನು ನಾವು ನೆರವೇರಿಸುವುದು ಸಹಜವಾಗಿದೆ. ಈ ಸಂಸ್ಥೆಯಾದರೋ ಪುಣ್ಯ ಪುರುಷರ ಜಯಂತಿಯನ್ನಾಚರಿಸುತ್ತಾ ಧರ್ಮೋದ್ಧಾರ ಮಾಡುತ್ತಿದೆ.

ಸುತ್ತೂರು ಸಿಂಹಾಸನಮಠವು ನನಗೆ ಬಹುದಿನದಿಂದ ಪರಿಚಯವಿದೆ. ಶ್ರೀ ಮಠವು ಅತ್ಯಂತ ಪ್ರಾಚೀನವಾದುದೆಂದು ಅಲ್ಲಿರುವ ಶಾಸನಗಳು ಇತಿಹಾಸಗಳು ಇತ್ಯಾದಿ ವಿಷಯಗಳಿಂದ ತಿಳಿದುಬರುತ್ತದೆ. ಇಲ್ಲಿ ಮಂಡಿಸಿರುವ ಹಿರಿಯ ಜಗದ್ಗುರುಗಳವರ ನಿಷ್ಠೆ ತಪಸ್ಸುಗಳನ್ನು ನಾನು ನೋಡಿ ಆನಂದಪಟ್ಟಿದ್ದೇನೆ.

ಪೂಜ್ಯ ಸ್ವಾಮಿಗಳವರು ಬಹುದಿನಗಳಿಂದಲೂ ಮಂತ್ರಲೇಖನ ತಪಸ್ಸನ್ನು ನಿಷ್ಠೆಯಿಂದ ನೆರವೇರಿಸುತ್ತಾ ಬಂದು ಮಹಿಮರಾಗಿದ್ದಾರೆ. ಮನಸ್ಸನ್ನು ಪರಮಾತ್ಮನಲ್ಲಿ ಲೀನವಾಗುವಂತೆ ಮಾಡಲು ಮಂತ್ರವು ಒಂದು ಮಹತ್ತರ ಸಾಧನವಾಗಿದೆ. ಮಂತ್ರಶಕ್ತಿ ಮಾನವನ ಮೋಕ್ಷ ಸಾಧಕವೆಂದು ಉಪನಿಷತ್ತುಗಳೂ ಸಹ ತಿಳಿಸುತ್ತಿವೆ. ಪೂಜ್ಯ ಸ್ವಾಮಿಗಳವರು ಆತ್ಮಸಾಕ್ಷಾತ್ಕಾರದ ಸಲುವಾಗಿ ಮಂತ್ರ ಲೇಖನ ತಪಸ್ಸನ್ನು ನಡೆಸುವುದಲ್ಲದೆ ಹಲವಾರು ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ದೇಶಕ್ಕೆ ಮಹದುಪಕಾರಮಾಡಿದ್ದಾರೆ.

ಸುತ್ತೂರುಮಠದಿಂದ ಕನ್ನಡ ನಾಡಿನ ಸಾಹಿತ್ಯಕ್ಕೆ ಸಂಸ್ಕೃತಿಗೆ ಮಹದುಪಕಾರವಾಗಿದೆ. ರಾಮಾಯಣದ ರಾಮಚಂದ್ರನು ಹೇಗೆ ಕುಲಶ್ರೇಷ್ಠನೂ ಧರ್ಮಶ್ರೇಷ್ಠನೂ ಆಗಿದ್ದನೋ ಹಾಗೆಯೇ ನಮ್ಮ ಶ್ರೀಮನ್ಮಹಾರಾಜರವರು ಧರ್ಮಜ್ಞರಾಗಿದ್ದಾರೆ ಎಂದು ತಿಳಿಸಿದರು.

ಮೈಸೂರು ನಗರದಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವವರಲ್ಲಿ ಬಹುಮಂದಿ ವಿದ್ಯಾರ್ಥಿಗಳು ಸುತ್ತೂರುಮಠದ ಆಶ್ರಯದಲ್ಲಿ ಬೆಳೆಯುತ್ತಿರುವವರು. ಅವರಲ್ಲಿ ಬಹುಜನ ವಿದ್ಯಾರ್ಥಿಗಳು ಮೇಧಾವಿಗಳೂ ಪ್ರತಿಭಾವಂತರೂ ಎಂದು ಹೆಸರು ಪಡೆದಿರುವ ವಿಷಯ ನಿಮ್ಮೆಲ್ಲರಿಗೂ ತಿಳಿದೇ ಇದೆ. ಅಲ್ಲದೆ ಈ ಸಂಸ್ಥೆ ವಿದ್ಯಾರ್ಥಿಗಳು ಶೀಲ ಸದಾಚಾರಗಳಿಂದ ಕೂಡಿದವರೆಂದು ಅಭಿಮಾನದಿಂದ ಹೇಳಬಯಸುತ್ತೇನೆ. ವಿದ್ಯಾರ್ಥಿ

ಗಳು ಸುತ್ತೂರು ಮಠದ ಪೂಜ್ಯ ಗುರುಗಳಲ್ಲಿ ಶ್ರದ್ಧೆ ಮತ್ತು ಭಕ್ತಿಯಿಂದ ತುಂಬಿದವ ರಾಗಿದ್ದಾರೆ. ಈ ಸಂಸ್ಥೆಯು ವಿದ್ಯಾಕ್ಷೇತ್ರದಲ್ಲಿ ಇತೋಪ್ಯತಿಶಯವಾಗಿ ಬೆಳೆಯಲಿ ಎಂದು ಗುರುಗಳವರಿಗೆ ಅಭಿನಂದಿಸಿ ತಮ್ಮ ಭಾಷಣವನ್ನು ಮುಕ್ತಾಯಗೊಳಿಸಿದರು.

ಸಮಾರಂಭದಲ್ಲಿ ಸಮಾವೇಶಗೊಂಡಿದ್ದ ಮಂತ್ರ ತಪೋನಿಷ್ಠರಾದ ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು ಆಶೀರ್ವಾದ ರೂಪಸಂದೇಶವನ್ನು ದಯ ಪಾಲಿಸಿದರು.

### ಸುತ್ತೂರು ಶ್ರೀ ಜಗದ್ಗುರುಗಳವರ ಭಾಷಣ

ಕರ್ನಾಟಕ ರತ್ನ ಸಿಂಹಾಸನಾಧೀಶ್ವರರೇ, ಶ್ರೀ ನಿಕ್ಕಂರವರೆ, ಮಹಾಶಯರೆ, ಮಹಾನುಭಾವರಾದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿವಯೋಗೀಂದ್ರರ ಪುಣ್ಯ ಜಯಂತಿ ಸಪ್ತಾಹವನ್ನು ವಿಜೃಂಭಣೆಯಿಂದ ನೆರವೇರಿಸಿ ನಮ್ಮ ಸಂಸ್ಥೆಯ ಅಭಿಮಾನಿ ಗಳು ಜನತೆಗೆ ಸಂತೋಷವನ್ನುಂಟುಮಾಡಿದ್ದಾರೆ. ಈ ಕಾರ್ಯಕ್ರಮದಲ್ಲಿ ಅನೇಕ ವಿದ್ವಾಂಸರೂ, ತತ್ವಜ್ಞಾನಿಗಳೂ, ಕಲಾವಿದರೂ ಭಾಗವಹಿಸಿ ಸಮಾರಂಭವನ್ನು ಯಶಸ್ವಿಗೊಳಿಸಿದ್ದಾರೆ. ಸಪ್ತಾಹದ ಮುಕ್ತಾಯ ಸಮಾರಂಭಕ್ಕೆ ಧರ್ಮಜ್ಞಾನಿಗಳೂ ತತ್ವನಿಷ್ಠರೂ ಆದ ಶ್ರೀಮನ್ಮಹಾರಾಜರವರು ಆಗಮಿಸಿರುವುದು ನಮಗೆ ಅಪಾರ ಆನಂದವನ್ನುಂಟುಮಾಡಿದೆ.

ಅನ್ನ ವಸತಿಗಾಗಿ ಮಾನವ ಹಗಲಿರುಳು ದುಡಿಯುತ್ತಾನೆ. ಬಳಲುತ್ತಾನೆ. ಐಹಿಕವಾದ ವಸ್ತುಗಳು ಎಷ್ಟು ದೊರೆತರೂ ತೃಪ್ತಿಯಾಗದೆ ಕಳವಳ ಪಡುತ್ತಾನೆ. ಜಗತ್ತಿನಲ್ಲಿ ಸಂಪತ್ತಿನ ತೌರೂರಾದ ರಾಷ್ಟ್ರಗಳೂ ಇವೆ. ಆದರೆ ಅಲ್ಲಿ ಎಲ್ಲವೂ ತೃಪ್ತಿ ಯಾಗಿದೆ ಎನ್ನುವಂತಿಲ್ಲ. ಪ್ರಾಪಂಚಿಕವಾಗಿ ಬೇಕಾಗುವ ಎಲ್ಲಾ ಸುಖವೂ ದೊರೆತರೂ ಯಾವುದೋ ಒಂದು ಕೊರತೆ ಮಾನವರಲ್ಲಿ ಕಂಡುಬರುತ್ತದೆ. ಆ ಕೊರತೆ ಅಂತ ರಂಗದ ಅರಿವಿನಿಂದ ಮಾತ್ರ ಪೂರ್ಣಗೊಳ್ಳಲು ಸಾಧ್ಯ. ಇಂದಿನ ಮಾನವನ ಪರಿಸ್ಥಿತಿ ಚಿಂತಾಜನಕವಾಗಿದೆ. ಬಾಹ್ಯ ವಸ್ತುಗಳ ಬಯಕೆ ದಿನದಿನಕ್ಕೆ ಹೆಚ್ಚುತ್ತಿದೆ. ಅದರ ಪರಿಣಾಮವಾಗಿಯೇ ಎಲ್ಲಾ ಕಡೆಯೂ ಅಶಾಂತಿಯು ಕೋಲಾಹಲವೇ ನಡೆಯುತ್ತಿದೆ. ಈ ಸಮಯದಲ್ಲಿ ಶಾಂತಿಯನ್ನು ನೀಡುವ ಕರುಣಾಳುವಿನ ಕಡೆಗೆ ಜಗತ್ತು ಕೈನೀಡಿ ಬೇಡುತ್ತಿದೆ. ಸೃಷ್ಟಿಕರ್ತ ತನ್ನ ಸೃಷ್ಟಿಯಲ್ಲಿ ಯಾವುದಕ್ಕೂ ಅಭಾವವನ್ನುಂಟು ಮಾಡಲಿಲ್ಲ. ಆದರೂ ಮಾನವ ಹಲವು ವಿಧದ ಕಷ್ಟಪರಂಪರೆಗೆ ತುತ್ತಾಗಿದ್ದಾನೆ. ಆದರೆ ಮಾನವನಿಗೆ ಬರುವ ಕಷ್ಟಗಳು ಮಾನವನಿಂದ ಬಂದವುಗಳೇ ಹೊರತು ಮತ್ತೊಬ್ಬರಿಂದ ಬಂದವುವಲ್ಲವೆಂಬುದನ್ನು ಮಹಾನುಭಾವರು ಅವತರಿಸಿ ತಮಗೆ ತೋರಿಸಿದ್ದಾರೆ. ಜಗತ್ತು ಮಾಯೆಯೆಂದು ಹೇಳಿದಾಗ ಜಗತ್ತಿನಲ್ಲಿರುವ "ಹೆಣ್ಣು

ಹೊನ್ನು, ಮಣ್ಣು ಮಾಯೆಯಲ್ಲ ಮನದಮುಂದಣ ಆಶೆಯೇ ಮಾಯೆ ಎಂದು ಮನಸ್ಸಿನ ಶುದ್ಧಿಗೆ ಮಹಾನುಭಾವರು ಶ್ರಮಿಸಿದ್ದಾರೆ". "ಮನಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ" ಎಂದು ಉಪನಿಷತ್ಕಾರರು ಹೇಳುತ್ತಾರೆ. "ಬೇದ ಮನವೆನ್ನಗತಿಕೆಡಿಸಿ ಕಾಡಿತ್ತು, ಬೆಂದಮನವೆನ್ನಮತಿಗೆಡಿಸಿ ಕಾಡಿತ್ತು ಎನ್ನ ತಂದೆ ಕೂಡಲ ಸಂಗಮದೇವ ಇವನಾಣೆಸು ನಿಮ್ಮ ಧರ್ಮ" ಎಂದು ಶರಣರು ಮನಸ್ಸಿನ ಶುದ್ಧಿಗಾಗಿ ಹವಣಿಸಿದ್ದಾರೆ. ಉದಾತ್ತವಾದ ಮನೋಭಾವನೆಯಿಂದ ಮಾನವರು ನಡೆದರೆ, ಲೋಕದಲ್ಲಿ ಯಾವ ದುರ್ಘಟನೆಯೂ ನಡೆಯುವುದಿಲ್ಲ. ಇಂದಿನ ಲೋಕಕ್ಕೆ ಬೇಕಾಗಿರುವುದು ವಿಜ್ಞಾನದ ಮಾರಕ ಅಸ್ತ್ರಗಳಲ್ಲ. ಅನ್ನ ಬಟ್ಟೆ ಬೇಕು ನಿಜ. ಆದರೆ ಅದಕ್ಕಿಂತಲೂ ಹೆಚ್ಚಾಗಿ ಉದಾತ್ತವಾದ ಮನಸ್ಸು ಬೇಕು. "ಲೋಕಾಸ್ಸಮಸ್ತಾ ಸ್ಸುಖಿನೋಭವಂತು" ಎಂಬ ವಿಶಾಲಭಾವನೆಬೇಕು. ಧರ್ಮದಲ್ಲಿ ವ್ಯವಹಾರದಲ್ಲಿ ಬಾಳಿನಲ್ಲಿ ಸಂಕುಚಿತಭಾವನೆಯನ್ನು ಮಾನವ ಬೆಳೆಸಿಕೊಂಡು ಲೋಕದ ವಿನಾಶಕ್ಕೆ ಕಾರಣನಾಗಿದ್ದಾನೆ. ಆದುದರಿಂದ ಮಾನವನ ಮನಸ್ಸು ಶುದ್ಧವಾದ ಹೊರತು ಲೋಕದಲ್ಲಿ ಶಾಂತಿ ಸುಖಗಳು ಲಭಿಸುವುದಿಲ್ಲ.

ಮಾನವನ ಮನಸ್ಸನ್ನು ಯಾವ ವಿಜ್ಞಾನದ ಪ್ರಯೋಗ ಶಾಲೆಯಲ್ಲೂ ಶುದ್ಧಿ ಪಡಿಸಲು ಸಾಧ್ಯವಿಲ್ಲ. ಅದಕ್ಕಾಗಿಯೇ ಪುರುಷೋತ್ತಮರಾದ ಮಹಾನುಭಾವರ ಸ್ಮರಣೆಮಾಡುವುದು. ಅವರು ನಡೆದು ತೋರಿಸಿದಂತೆ ನಡೆಯುವುದು. ಅವರ ಅಮೃತ ವಾಣಿಯನ್ನು ಕುರಿತು ಚಿಂತನೆಮಾಡುವುದು. ಇದೇ ಜಯಂತಿ ಮಹೋತ್ಸವದ ಉದ್ದಿಶ್ಯ. ಕನ್ನಡದ ಪುಣ್ಯಭೂಮಿಯಲ್ಲಿ ಅವತರಿಸಿದ ಮಹಾನುಭಾವರನ್ನು ಸ್ಮರಿಸಿ ನಮ್ಮ ಜೀವನವನ್ನು ಪಾವನಗೊಳಿಸಿಕೊಳ್ಳಬೇಕು. ನಮ್ಮ ಈ ಜಯಂತಿ ಮಹೋತ್ಸವದ ಕಾರ್ಯಕ್ರಮಗಳು ಮಾನವತೆಯ ಮಾನಸಿಕ ಪರಿಶುದ್ಧತೆಗೆ ಬಹುಮಟ್ಟಿಗೆ ನೆರವಾಗಿವೆ ಎಂಬ ನಂಬಿಗೆ ನಮಗಿದೆ. ಕಲೆಯ ಯುಗಾಂತರ ಅನುಭವಿಗಳ ಸಂದೇಶ ರೂಪದಿಂದ ಎಲ್ಲರ ಮನಸ್ಸನ್ನೂ ವಿಕಾಸಗೊಳಿಸಲು ಈ ಸಮಾರಂಭ ನೆರವಾಗಿದೆ. ಮಾನವನ ಮನಸ್ಸು ವಿಶಾಲವಾಗದಿದ್ದರೆ ಯಾವ ಶಕ್ತಿಯೂ ಈ ಲೋಕವನ್ನು ಉದ್ಧರಿಸಲಾರದು. ಅದನ್ನು ಅರಿತ ನಾವು ಅನಾದಿಕಾಲದಿಂದಲೂ ದಿವ್ಯಾತ್ಮರ ಪುಣ್ಯ ದಿನಾಚರಣೆಯನ್ನು ಹಬ್ಬಹರಿದಿನಗಳಾಗಿ ಆಚರಿಸುತ್ತಾ ಬಂದಿದ್ದೇವೆ. ಅದರಂತೆ ಈ ಸಮಾರಂಭ ನಡೆದಿದೆ.

ಈ ಸಮಾರಂಭ ಅತ್ಯಂತ ವೈಶಿಷ್ಟ್ಯಪೂರ್ಣವಾಗಿರುವಂತೆ ಕಾರ್ಯಕ್ರಮಗಳು ನಡೆದು ನಮಗೆ ಅಪಾರ ಆನಂದ ಉಂಟಾಗಿದೆ. ದೇಶದ ಪ್ರಮುಖ ವ್ಯಕ್ತಿಗಳು ಆಗಮಿಸಿ ಲೋಕಕಲ್ಯಾಣಕ್ಕೆ ಅಗತ್ಯವಾದ ಅಮರ ಸಂದೇಶಗಳನ್ನು ಇತ್ತಿದ್ದಾರೆ. ಅಂತೆಯೇ ಈ ದಿನದ ಸಮಾರಂಭದಲ್ಲಿ ತತ್ವಜ್ಞಾನಿಗಳಾದ ಶ್ರೀಮನ್ಮಹಾರಾಜರವರಾದ

ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್‌ರವರು ಆಗಮಿಸಿದ್ದಾರೆ.
ೂರು ರಾಜಮನೆತನವು ರಾಜ್ಯಾಡಳಿತದಲ್ಲಿ ಕೀರ್ತಿಗಳಿಸಿದಂತೆ ಧರ್ಮೋದ್ಧಾರ
ರ್ಯದಲ್ಲಿಯೂ ಅಪಾರವಾದ ಸೇವೆಯಸಗಿರುವುದು ಸರ್ವವಿಧಿತವಾಗಿದೆ.

ಭಾರತದ ಸಂಸ್ಕೃತಿಯನ್ನು ದೇಶವಿದೇಶಗಳಲ್ಲಿ ಪ್ರಚಲಿತವಾಗುವಂತೆ ಮಾಡಿದ
ಾಕೀರ್ತಿ ಮೈಸೂರು ರಾಜಮನೆತನಕ್ಕೆ ಸೇರಿದ್ದಾಗಿದೆ. ಸಂಪತ್ತಿನ ಆಗರದಲ್ಲಿ,
ರ್ಯದ ಕ್ಷೇತ್ರದಲ್ಲಿ, ಕಲಿಯು ತಾಂಡೂರಿನಲ್ಲಿ ಬೆಳೆದ ನಮ್ಮ ಶ್ರೀಮನ್ಮಹಾರಾಜ
ು ಅಧಿಕಾರ ಐಶ್ವರ್ಯಗಳೇ ಜೀವನದ ಸಾರಸರ್ವಸ್ವವೆಂದು ಭಾವಿಸದೆ ಸ್ವಯಂ
ಜ್ಞಾನಿಗಳಾಗಿ ವಿಶ್ವದ ನಾನಾ ಕಡೆಗಳಲ್ಲಿ ಧರ್ಮಪ್ರಚಾರ ಮಾಡಿ ಭಾರತದ
ರ್ಯನ್ನು ಹೆಚ್ಚಿಸಿ ಧನ್ಯರಾಗಿದ್ದಾರೆ. ಕೇವಲ ತತ್ವದ ವಿಚಾರವಾದಿಗಳು
ತ್ರವೇ ಅಲ್ಲ, ಪರಾತ್ಪರ ವಸ್ತುವಿನ ಸಾಕ್ಷಾತ್ಕಾರಕ್ಕಾಗಿ ನಿಷ್ಠೆಯಿಂದ ತತ್ವಾನು
ಾನಮಾಡುತ್ತಿರುವ ಶ್ರೇಷ್ಠ ಸಾಧಕರಾಗಿದ್ದಾರೆ. ರಾಜಶ್ರೇಷ್ಠರೂ, ತತ್ವನಿಷ್ಠರೂ
ಶ್ರೀಮನ್ಮಹಾರಾಜರವರು ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋ
ದಲ್ಲಿ ಅಭಿಮಾನದಿಂದ ಭಾಗವಹಿಸಿ ಈ ಸಮಾರಂಭವನ್ನು ಯಶಸ್ವಿಗೊಳಿಸಿ
ರೆ. ಶ್ರೀ ಗುರುವು ಅವರಿಗೆ ಸರ್ವಸನ್ಮಂಗಳಗಳನ್ನು ಉಂಟುಮಾಡಲೆಂದು
ರ್ಥಿಸುತ್ತೇವೆ.

ಶ್ರೀ ಗುರುವಿನ ಜಯಂತಿ ಮಹೋತ್ಸವವನ್ನು ನಮ್ಮ ವಿದ್ಯಾಸಂಸ್ಥೆಯ ವಿದ್ಯಾ
ಗಳು, ಅಭಿಮಾನಿಗಳು, ಭಕ್ತರು ಅತ್ಯಂತ ಭಕ್ತಿಯಿಂದಲೂ, ಶ್ರದ್ಧೆಯಿಂದಲೂ,
ಸಂಭ್ರಮಣೆಯಿಂದಲೂ ನೆರವೇರಿಸಿ ಧನ್ಯರಾಗಿದ್ದಾರೆ. ನಮ್ಮ ಯುವಕರ ಮನಸ್ಸಿನಲ್ಲಿ
ರುಭಕ್ತಿ ದೈವಭಕ್ತಿಗಳು ಬೆಳೆಯುತ್ತಿರುವುದು ಲೋಕ ಕಲ್ಯಾಣದ ಶುಭ ಚಿಹ್ನೆ
ಾಗಿವೆ. ಭಕ್ತಿಯೊಂದೇ ನಮಗೆ ನಿತ್ಯ ಸುಖವನ್ನು ಕೊಡುವ ಸಾಧನ. ನಮ್ಮ
ದ್ಯಾರ್ಥಿಗಳು ಇದನ್ನು ಅರಿತು ಭಕ್ತಿ ಜೀವನವನ್ನು ನಡೆಸಿ ಕೀರ್ತಿಶಾಲಿಗಳಾಗಲೆಂದು
ಾರ್ಥಿಸುತ್ತೇವೆ. ನಿಮ್ಮೆಲ್ಲರಿಗೂ ಸರ್ವಶ್ರೇಯಸ್ಸನ್ನು ಶ್ರೀ ಗುರುವು ಕರುಣಿಸಲೆಂದು
ರಸಿ ವಿರಮಿಸುತ್ತೇನೆ.

"ಸರ್ವೇಜನಾ ಸ್ಸುಖಿನೋಭವಂತು"

ನಂತರ ಸಾಂಸ್ಕೃತಿಕ ಕಾರ್ಯಕ್ರಮದ ಅಂಗವಾಗಿ ಇಲ್ಲಿನ ಹಿರಿಯ ವಿದ್ಯಾರ್ಥಿ
ಳಲ್ಲೊಬ್ಬರಾದ ಶ್ರೀಮಾನ್ ಸಿ. ಅಂಕಪ್ಪನವರಿಂದ ರಚಿತವಾದ ಜಗದ್ಗುರು ಶ್ರೀ
ವರಾತ್ರೀಶ್ವರರ ಮಹಿಮೆಯನ್ನು ವ್ಯಕ್ತಪಡಿಸುವ "ಆಶೀರ್ವಾದ" ಎಂಬ ನಾಟಕ
ನ್ನು ಜಗದ್ಗುರು ಶ್ರೀ ಶಿವರಾತ್ರೀಶ್ವರ ಕಲಾಮಂಟಪದವರು ರಾಜ್ಯಪಾಲರ ಸಮ್ಮುಖ
ಲ್ಲಿ ಅಭಿನಯಿಸಿದರು. ನಂತರ ಸಹಸ್ರಾರು ಮಂದಿಗೆ ಜಯಂತಿ ಸಮಾರಂಭದ
ಂಗವಾಗಿ ಜಗದ್ಗುರುಗಳವರು ಪ್ರಸಾದ ದಾಸೋಹವನ್ನು ಆಶೀರ್ವದಿಸಿದರು.

# ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸ
## ಕಲಾವಿಭಾಗ

ಜಯಂತೀ ಮಹೋತ್ಸವವು ವಿದ್ವನ್ಮಣಿಗಳ ದಿವ್ಯಜ್ಞಾನ ಸಂದೇಶದ ವಾಗಿದ್ದಂತೆ ಕಲೋಪಾಸಕರ ಹಬ್ಬವಾಗಿದೆ. ಪ್ರತಿನಿತ್ಯವೂ ಸಂಗೀತದ ಅದ್ವಿತ ವಿದ್ವನ್ಮಣಿಗಳು ಸಮಾರಂಭದಲ್ಲಿ ಭಾಗವಹಿಸಿ ತಮ್ಮ ಕಲಾಪ್ರತಿಭೆಯನ್ನು ಪ್ರದ ಜನತೆಯಲ್ಲಿ ಸಂತೋಷವನ್ನುಂಟುಮಾಡಿದ್ದಾರೆ. ವಿವಿಧ ಬಾಲ ನಾಟಕ ಕಲಾ ಸಾಮಾಜಿಕ ಪೌರಾಣಿಕ ನಾಟಕಗಳನ್ನು ಪ್ರದರ್ಶಿಸಿ ತಮ್ಮ ಕಲಾಶಕ್ತಿಯನ್ನು ಪಡಿಸಿದ್ದಾರೆ. ಮಾನವನ ಸರ್ವತೋಮುಖ ಪ್ರಗತಿಯನ್ನು ಸಾಧಿಸುವುದೇ ನುಭಾವರ ಅವತಾರದ ಉದ್ದಿಶ್ಯ. ಅಂತೆಯೇ ಜಗದ್ಗುರು ಶ್ರೀ ಶಿವರಾತ್ರೀ ಜಯಂತೀ ಮಹೋತ್ಸವ ಸಮಾರಂಭದಲ್ಲಿ ಜ್ಞಾನಪ್ರಸಾರಕ್ಕೆ ಕಲಾಶಕ್ತಿಯ ವಿಕ ಉತ್ಸವ ಸಮಿತಿಯು ಸೂಕ್ತ ಅವಕಾಶಗಳನ್ನು ಕಲ್ಪಿಸಿದೆ. ವಿದ್ಯಾಪೀ ಜಗದ್ಗುರು ಶ್ರೀ ಶಿವರಾತ್ರೀಶ್ವರ ಕಲಾಮಂಟಪವೆಂಬ ಕಲಾಪೋಷಕ ಸಂಸ್ಥೆ ಇಲ್ಲಿದೆ. ಈ ಸಂಸ್ಥೆಯ ಮೂಲಕ ವಿದ್ಯಾರ್ಥಿಗಳಿಗೆ ನಾಟಕಕಲೆ ಸಾಹಿತ್ಯ ಸಂಗೀತ ಇತ್ಯಾದಿ ವಿಷಯಗಳಲ್ಲಿ ಶಿಕ್ಷಣ ಕೊಡಿಸುವುದು ಮತ್ತು ಕಲಾಪೋ ಗ್ರಂಥಗಳ ಸಂಶೋಧನೆ ಪ್ರಕಟಣೆ ಇತ್ಯಾದಿ ಕಾರ್ಯಕ್ರಮಗಳೆಲ್ಲಾ ಇಟ್ಟುಕೊಂ ಅದರ ಮೊದಲ ಕಾಣಿಕೆಯಾಗಿ ನಿಲಯದ ಹಿರಿಯ ವಿದ್ಯಾರ್ಥಿಗಳಲ್ಲೊಬ್ಬ ಶ್ರೀಮಾನ್ ಸಿ. ಅಂಕಪ್ಪನವರಿಂದ ವಿರಚಿತವಾದ ಆದರ್ಶ ವಿವಾಹ ಎಂಬ ಕೃತಿಯ ಈಗಾಗಲೇ ಪ್ರಕಟಿಸಲಾಗಿದೆ. ಈ ಸಂಸ್ಥೆಯ ಕಲಾವಿದರು ಅನೇಕ ನಾಟಕ ಪ್ರಯೋಗವನ್ನು ಈ ಜಯಂತೀ ಮಹೋತ್ಸವ ಸಮಾರಂಭದಲ್ಲಿ ನೆರವೇರಿಸಿದ ನಗರದ ಪ್ರಸಿದ್ಧ ಕಲಾವಿದರೂ ಕಲಾಭಿಮಾನಿಗಳೂ ಕಲೆಯ ರಸದೌತಣಕ್ಕೆ ಗಳಾಗಿದ್ದಾರೆ. ಕಲಾಕ್ಷೇತ್ರದಲ್ಲಿ ಇನ್ನುಮುಂದೆ ಇನ್ನೂ ಹೆಚ್ಚಿನ ವ್ಯವಸ್ಥೆಮಾ ಯೋಚನೆಯು ಸಮಿತಿಯ ಮುಂದಿದೆ. ಕಲಾವಿದರ ಸಹಕಾರ ಸಹಾಯ ಅವಲಂಬಿಸಿ ಯೋಜನೆಗಳನ್ನು ನಿರೂಪಿಸಲಾಗುವುದು.

### ಕಲೆಯಲ್ಲಿ ಭಾಗವಹಿಸಿದವರು

ಮೊದಲನೇ ವರ್ಷದಲ್ಲಿ ನೆರವೇರಿಸಿದ ಜಯಂತ್ಯುತ್ಸವದಲ್ಲಿ ಸೇವೆ ಸಲ್ಲಿಸಿದವರು

ತಾ|| 30-11-59 ರಂದು ಸಂಗೀತರತ್ನ ಟಿ. ಚೌಡಯ್ಯನವರ ಪಿಟೀ ವಾದನ.

ತಾ॥ 1-12-59 ರಂದು ಆಸ್ಥಾನ ವಿದುಷಿ ಕೆ. ವೆಂಕಟಲಕ್ಷ್ಮಮ್ಮನವರ ಶಿಷ್ಯಂ
ರ ಭಾರತಿ ಕಲಾನಿಕೇತನದ ವಿದ್ಯಾರ್ಥಿನಿಯರಿಂದ ನೃತ್ಯಪ್ರದರ್ಶನ.

ತಾ॥ 2-12-59 ರಂದು ಗಾನವಿಶಾರದ ಆಸ್ಥಾನ ವಿದ್ವಾನ್ ಶ್ರೀ ಬಿ.
ಂದ್ರಪ್ಪನವರಿಂದ ಸಂಗೀತ.

ತಾ॥ 3-12-59 ರಂದು ಕೀರ್ತನಕಲಾವಿಚಕ್ಷಣ ಶ್ರೀ ಹೆಚ್. ಎನ್. ಶಿವ
ಸ್ವಾಮಿಯವರಿಂದ ಶಿವಕೀರ್ತನೆ.

**ದ್ದುರು ಶ್ರೀ ಶಿವರಾತ್ರೀಶ್ವರ ಕಲಾಮಂಟಪದ ಕಲಾವಿದರಿಂದ ನಾಟಕ**

ತಾ॥ 6-12-59 ರಂದು ಕುಮಾರಿ ವಿಮಲಾರವರಿಂದ ಸಂಗೀತವೂ ನಿಲಯದ
ವಿದರಿಂದ ಬಸವೇಶ್ವರ, ಕಂಬಳಿನಾಗಿದೇವ ಮತ್ತು ಪ್ರೇಮಪಕ್ಷಿ ಎಂಬ ನಾಟಕ
ನಡೆದವು.

**ರಡನೇ ವರ್ಷದ ಜಯಂತಿ ಉತ್ಸವದಲ್ಲಿ ಭಾಗವಹಿಸಿದ ಕಲಾವಿದರು**

ತಾ॥ 18-12-60 ರಂದು ಸಂಗೀತ ವಿದುಷಿ ಶ್ರೀಮತಿ ಚೊಕ್ಕಮ್ಮ ಮತ್ತು
ರ್ಯವರಿಂದ ಸಂಗೀತ, ಶ್ರೀ ಶಿವರಾತ್ರೀಶ್ವರ ಕಲಾಮಂಟಪದವರಿಂದ 'ಆದರ್ಶ
ಹ' ನಾಟಕಾಭಿನಯ.

ತಾ॥ 19-12-60ರಂದು ಭಾರತ ಕಲಾನಿಕೇತನದ ಆಸ್ಥಾನ ವಿದುಷಿ ಶ್ರೀಮತಿ
ಟಲಕ್ಷ್ಮಮ್ಮನವರ ಶಿಷ್ಯೆಯರಿಂದ ನೃತ್ಯ ಪ್ರದರ್ಶನ, 'ಸಕ್ಕರೆ ಗೊಂಬೆ' ಎಂಬ
ಕ ಹೈಸ್ಕೂಲ್ ವಿದ್ಯಾರ್ಥಿಗಳಿಂದ.

ತಾ॥ 21-12-60 ರಂದು ಆರ್ಕೆಸ್ಟ್ರಾ—ಚಾಮುಂಡಿಪುರಂ ಯುನೈಟೆಡ್
ಸ್ಟ್ರಾರವರಿಂದ, ಕರ್ನಾಟಕ ಸಂಘದವರಿಂದ 'ಕೊಟ್ರಲ್ಲ ಕೈ' ಎಂಬ ನಾಟಕವೂ,
ತ್ರೀಶ್ವರ ದಲಿತ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಿಂದ ಕಂಬಳಿನಾಗಿದೇವ
ನಾಟಕವೂ ಅಭಿನಯಿಸಲ್ಪಟ್ಟವು.

ತಾ॥ 22-12-60 ರಂದು ಮಾತಾ ಆರ್ಟಿಸ್ಟ್ ಸಂಘದವರಿಂದ ಸಂಗೀತ.
ತ್ರೀಶ್ವರ ಕಲಾಮಂಟಪದ ಕಲಾವಿದರಿಂದ ನಾಟಕ 'ಹೆಣ್ಣು ಹೊನ್ನು ಮಣ್ಣು'

ತಾ॥ 23-12-60 ಆರ್ಕೆಸ್ಟ್ರಾ-ಯುನೈಟೆಡ್ ಆರ್ಕೆಸ್ಟ್ರಾರವರಿಂದ, ಮೈಸೂರು
ಕಲಾ ಸಂಘದವರಿಂದ 'ಅಮರ ಸಂದೇಶ', 'ಬುದ್ಧ ಸಂದೇಶ' ಮತ್ತು ಚಾಮ
ನಗರದ ಹೈಸ್ಕೂಲ್ ವಿದ್ಯಾರ್ಥಿಗಳಿಂದ 'ರೋಮಿಯೊ ರಾದ್ಧಾಂತ' ಎಂಬ
ಕಗಳು ಅಭಿನಯಿಸಲ್ಪಟ್ಟವು.

ತಾ॥ 24-12-60 ಶ್ರೀ ಶಿವರಾತ್ರೀಶ್ವರ ಗುರುಕುಲದ ವಿದ್ಯಾರ್ಥಿಗಳಿಂದ
ಸ್ಯನು ನ್ಯಾಯೋಗ' ಎಂಬ ನಾಟಕವು ನಡೆಯಿತು. ಮತ್ತು ಟಿ. ನರಸೀಪುರ,

ನಂಜನಗೂಡು ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಿಂದ ನಾಟಕಗಳು ಅಭಿನ ಲ್ಪಟ್ಟವು.

ತಾ|| 25-12-60 ಚಲನಚಿತ್ರ ಸಂಗೀತ ನಿರ್ದೇಶಕರಾದ ವಿ|| ಎಂ ದೇವದಾಸ್‌ರವರಿಂದ ಸಿತಾರ್ ವಾದನವಾಯಿತು. ಸರಗೂರು ಮತ್ತು ಕ್ಯಾತನ ಸಾಹುಕಾರ್ ಸಿದ್ದಲಿಂಗಯ್ಯನವರ ಸಂಸ್ಕೃತ ಪಾಠಶಾಲಾ ವಿದ್ಯಾರ್ಥಿಗಳಿಂದ ' ಗೊಂಬೆ' 'ಬಸವೇಶ್ವರ' ಎಂಬ ನಾಟಕಗಳು ಅಭಿನಯಿಸಲ್ಪಟ್ಟವು.

**ಮೂರನೇ ವರ್ಷದ ಜಯಂತಿ ಮಹೋತ್ಸವದಲ್ಲಿ ಭಾಗವಹಿಸಿದ ಕಲಾವಿ**

ತಾ| 7-1-62 ರೈಲ್ವೆ ಆರ್ಟಿಸ್ಟ್‌ರವರಿಂದ 'ಸ್ವರ್ಗದ ಕ್ಯಾನ್ವಾಸ್' ನಾಟಕವು ಅಭಿನಯಿಸಲ್ಪಟ್ಟಿತು. ಸಂಗೀತ ವಿದುಷಿ ಫಣೀಂದ್ರ ಕುಮಾರಿ ಕೆ ಬಿ.ಎ. ಇವರ ಹಾಡುಗಾರಿಕೆ.

ತಾ|| 8-1-62 ಬೆಂಗಳೂರು ಕೀರ್ತನ ಕಲಾಭೂಷಣ ವಿದ್ವಾನ್ ಕೆ. ತಮ್ಮ ಚಾರ್ಯರವರಿಂದ 'ಭೂಕೈಲಾಸ'. ಶ್ರೀ ಶಿವರಾತ್ರೀಶ್ವರ ಕಲಾಮಂಟಪದ ಕಲ ರಿಂದ 'ಕರುಳಿನ ಸೆಳತ' ವೆಂಬ ನಾಟಕವು ಅಭಿನಯಿಸಲ್ಪಟ್ಟಿತು.

ತಾ||9 -1-62 ಸಂಗೀತ ವಿದ್ವಾನ್ ವಚನ ಗಾಯನವಿಶಾರದ ನಾಗರಾಜುರವ ಹಾಡುಗಾರಿಕೆ, ಮೈಸೂರಿನ ಅನೂರಾಧ ಕಲಾವಿದರಿಂದ 'ಹೆಣ್ಣು ಹೊನ್ನು ಮ ಎಂಬ ನಾಟಕವು ಅಭಿನಯಿಸಲ್ಪಟ್ಟಿತು.

ತಾ|| 10-1-62 ಸಂಗೀತ ವಿದುಷಿ ಶ್ರೀಮತಿ ಜೊರ್ಕಮ್ಮನವರ ಹಾಡುಗ ಮೈಸೂರಿನ ಪ್ರತಿಭಾ ಕಲಾವಿದರಿಂದ 'ಗಂಡಸ್ಕತ್ರಿ' ಎಂಬ ನಾಟಕವು ಅಭಿನ ಲ್ಪಟ್ಟಿತು,

ತಾ|| 11-1-62 ಸಂಗೀತ ವಿದುಷಿ ಶ್ರೀಮತಿ ರತ್ನಾಬಾಯಿ ಕೃಷ್ಣಮ ಯವರ ಹಾಡುಗಾರಿಕೆ, ಮಧುವಿನಹಳ್ಳಿ ಗುರುಸಿದ್ದೇಶ್ವರ ಕೃಪಾಪೋಷಿತ ನಾ ಮಂಡಲಿಯವರಿಂದ 'ಕೆಚ್ಚೆದೆಯ ಕನ್ನಡ ವೀರ ಎಚ್ಚಮನಾಯ್ಕ' ಎಂಬ ನಾಟ ಅಭಿನಯಿಸಲ್ಪಟ್ಟಿತು.

ತಾ|| 12-1-62 ಬೆಂಗಳೂರು ಸಂಗೀತ ವಿದುಷಿ ಶ್ರೀಮತಿ ಚಂದ್ರಕಲಾ ಹಾಡುಗಾರಿಕೆ, ನಂಜನಗೂಡು, ಟಿ. ನರಸೀಪುರ, ಸರಗೂರು, ಚಾಮರಾಜನ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಿಂದ ನಾಟಕಗಳು ಅಭಿನಯಿಸಲ್ಪಟ್ಟವು.

ತಾ|| 13-1-62 ವಚನಗಾಯನ—ಸಂಗೀತ ವಿದುಷಿ ಜಲಜಾಕ್ಷಮ್ಮನ ಮತ್ತು ಪಾರ್ಟಿಯವರಿಂದ. ಜಗದ್ಗುರು ಶ್ರೀ ಶಿವರಾತ್ರೀಶ್ವರ ಕಲಾಮಂಟಪದ ವಿದರಿಂದ 'ಆಶೀರ್ವಾದ' ಎಂಬ ನಾಟಕವು ಶ್ರೀಮನ್ಮಹಾರಾಜರವರ ದಿವ್ಯ ಸವ ದಲ್ಲಿ ಅಭಿನಯಿಸಲ್ಪಟ್ಟಿತು.



ಹೈಕೋರ್ಟಿನ ಶ್ರೇಷ್ಠನ್ಯಾಯಾಧೀಶರಾದ ಶ್ರೀ ನಿಟ್ಟೂರು ಶ್ರೀನಿವಾಸರಾಯರು
ಮಂತ್ರಲೇಖನವನ್ನು ಆಸಕ್ತಿಯಿಂದ ವೀಕ್ಷಿಸುತ್ತಿರುವುದು

ಈ ವರ್ಷ ಜಯಂತಿ ಮಹೋತ್ಸವದ ಅಂಗವಾಗಿ ಅಖಿಲ ಕರ್ನಾಟಕ ನಾಟಕ
ರ್ಯಯನ್ನೇರ್ಪಡಿಸಲಾಗಿತ್ತು. ಇಪ್ಪತ್ತು ಕಲಾ ಸಂಸ್ಥೆಗಳವರು ಭಾಗವಹಿಸಿ ತಮ್ಮ
ತ್ತಮ ಅಭಿನಯದಿಂದ ಪ್ರೇಕ್ಷಕರ ಮನಸ್ಸನ್ನು ಸಂತೋಷಪಡಿಸಿದರು. ಪ್ರತಿ
ನೂ ಸಹಸ್ರಾರು ಮಂದಿ ಪ್ರೇಕ್ಷಕರು ಮಹೋತ್ಸವದಲ್ಲಿ ಭಾಗವಹಿಸುತ್ತಿದ್ದರು.
ಟಕ ಸ್ಪರ್ಧೆಯಲ್ಲಿ ಬಹುಮಾನ ಪಡೆದ ಕಲಾಸಂಸ್ಥೆಗಳು.

## ಬಹುಮಾನಗಳು

ಪ್ರಥಮ ಬಹುಮಾನ – ಭರಣಿ ಕಲಾವಿದರಿಂದ ಅಭಿನಯಿಸಲ್ಪಟ್ಟ "ಗದಾ
ುದ್ಧ". ದ್ವಿತೀಯ ಬಹುಮಾನ--ಅನುರಾಧ ಕಲಾವಿದರಿಂದ ಅಭಿನಯಿಸಲ್ಪಟ್ಟ
ಣ್ಣು ಹೊನ್ನು ಮಣ್ಣು". ತೃತೀಯ ಬಹುಮಾನ–ಸುರಭಿ ಕಲಾವಿದರಿಂದ ಅಭಿನ
ಸಲ್ಪಟ್ಟ "ವರದಕ್ಷಣೆ". ವಿಶೇಷ ಬಹುಮಾನ–ಮಧುವನಹಳ್ಳಿ ಗುರುಸಿದ್ದೇಶ್ವರ
ಾಪೋಷಿತ ನಾಟಕ ಮಂಡಳಿ "ಕೆಚ್ಚೆದೆಯ ಎಚ್ಚಮನಾಯಕ".

## ವೈಯಕ್ತಿ ಬಹುಮಾನಗಳು

ಪ್ರಥಮ–ಗದಾಯುದ್ಧದಲ್ಲಿ ದುರ್ಯೋಧನ ಶ್ರೀ ಟಿ. ಎ. ರಾಮನಾಥ್,
ತೀಯ–ಹೆಣ್ಣು ಹೊನ್ನು ಮಣ್ಣು ಮುರಳೀಧರನ ಪಾತ್ರ ಶ್ರೀ ರಾಮಸಂಜೀವಯ್ಯ
ತೀಯ–ವರದಕ್ಷಣೆಯಲ್ಲಿ ಪದ್ಮನಾಭರಾವ್. ವಿಶೇಷ ಬಹುಮಾನ–ಗಂಡಸ್ಥತ್ರಿ
ುಲ್ಲಿ 'ಅಕೆ' ಶ್ರೀ ಹೆಚ್. ಕೆ. ಸತ್ಯನಾರಾಯಣ.

## ಸರ್ಟಿಫಿಕೇಟ್ ಆಫ್ ಮೆರಿಟ್

ಗದಾಯುದ್ಧದಲ್ಲಿ ಭೀಮನ ಪಾತ್ರ ಶ್ರೀ ಎಂ. ಪಿ. ಶಂಕರ್, ಹೆಣ್ಣು ಹೊನ್ನು
ಣ್ಣು–ಮೂರ್ತಿ ಶ್ರೀ ಸುಬ್ಬರಾವ್, ಎಚ್ಚಮನಾಯಕ–ಚಾಂದ್ ಖಾನ್ ಶ್ರೀ ಎಸ್.
ಂ. ಮಾದೇಗೌಡ, ವರದಕ್ಷಣೆಯಲ್ಲಿ ಅತ್ತೆ ಪಾತ್ರವಹಿಸಿದ್ದವರಿಗೆ.

## ತೀರ್ಪುಗಾರರು

ಶ್ರೀಮಾನ್ ಎಸ್. ಜೋಗಿಸಿದ್ದಯ್ಯ, ಶ್ರೀಮಾನ್ ಎಂ. ಜಿ. ನಂಜುಂಡಾರಾಧ್ಯ,
ೀಮಾನ್ ಎಂ. ಬಿ. ಬಸವರಾಜು.

## ಅಭಿನಂದನೆಗಳು

ಜಗದ್ಗುರು ಶ್ರೀ ಶಿವರಾತ್ರೀಶ್ವರರ ಜಯಂತೀ ಮಹೋತ್ಸವ ಸಪ್ತಾಹವನ್ನು
ೈಸೂರು ನಗರದಲ್ಲಿ ವಿಜೃಂಭಣೆಯಿಂದ ನಡೆಯಬೇಕೆಂದೂ ಮತ್ತು ಈ ಸಮಾರಂಭ

ಈ ಸಂಸ್ಥೆಯ ಆಶ್ರಯದಲ್ಲಿ ಪ್ರಮುಖ ಹಬ್ಬವಾಗಿ ಶಾಶ್ವತವಾಗಿ ನಡೆಯಬೇಕೆಂ ಸಂಸ್ಥೆಯ ಅಭಿಮಾನಿಗಳು ಆಶಿಸಿದರು. ಪ್ರತಿವರ್ಷದ ಸಮಾರಂಭಕ್ಕೆ ಕೊನೆಯ ಮೂರು ನಾಲ್ಕು ಸಹಸ್ರ ರೂಪಾಯಿಗಳಿಗೆ ಕಡಿಮೆಯಿಲ್ಲದೆ ಖರ್ಚು ಮಾಡಿ ಮಹೋತ್ಸವವನ್ನು ನೆರವೇರಿಸುವುದು ಸಾಧಾರಣವಾದ ಕೆಲಸವಲ್ಲ. ಸುತ್ತೂರು ಶ ಸಿಂಹಾಸನಮಠದ ಆಶ್ರಯದಲ್ಲಿ ನಡೆಯುತ್ತಿರುವ ವಿದ್ಯಾಸಂಸ್ಥೆಗಳ ವೆಚ್ಚ ಸುಮ ಐದು ಲಕ್ಷಕ್ಕೆ ಮೀರುತ್ತಿದೆ. ನಿತ್ಯಕರ್ತವ್ಯದ ಹೊಣೆಯನ್ನು ಹೊತ್ತಿರುವ ಅದಕ ಶ್ರಮಿಸುತ್ತಿರುವ ಪೂಜ್ಯ ಜಗದ್ಗುರುಗಳವರಿಗೇ ಈ ಸಮಾರಂಭದ ಹೊಣೆಯ ಹೊರಿಸುವುದು ಯುಕ್ತವಲ್ಲ. ಆದರೆ ಸರ್ವರ ಕ್ಷೇಮಚಿಂತಕರಾದ ಪೂಜ್ಯರ ಯಿಲ್ಲದೆ ಯಾವುದು ತಾನೇ ನಡೆಯಲು ಸಾಧ್ಯ. ಉತ್ಸವ ಸಮಿತಿಯ ಮನೋ ವನ್ನು ಪರಿಪೋಷಿಸಿ ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರೂ ಜಗದ್ಗು ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರೂ ಉತ್ಸವ ಸಮಿತಿಯವರಿಗೆ ಪೂರ ಶೀರ್ವಾದವನ್ನು ದಯಪಾಲಿಸಿದರು. ಸಮಿತಿಯ ಕಾರ್ಯಕರ್ತರಲ್ಲಿ ಉತ್ಸಾಹವ ಹೆಚ್ಚಿಸಿದರು. ಈ ಅನುಗ್ರಹದ ಫಲವಾಗಿ ಈ ಮೂರು ವರ್ಷಗಳೂ ಸಪ್ತಾಹ ಅತ್ಯಂತ ವಿಜೃಂಭಣೆಯಿಂದ ನೆರವೇರಿತು. ಅದಕ್ಕಾಗಿ ಉತ್ಸವ ಸಮಿತಿಯು ಜಗದ್ಗು ದ್ವಯರಿಗೆ ಸಾಷ್ಟಾಂಗ ಪ್ರಣಾಮಪೂರ್ವಕವಾಗಿ ಕೃತಜ್ಞತೆಯನ್ನು ಸಮರ್ಪಿಸುತ್ತ

## ಗುರುಸೇವೆಗೆ ರಾಜಪೋಷಣೆ

ಈ ಜಯಂತೀ ಮಹೋತ್ಸವದ ವೈಭವಾತಿಶಯಗಳಿಗೆ ಮನವೊಲಿದು ಮೈಸ ರಿನ ರಾಜ್ಯಪಾಲರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಇವ ಭಕ್ತಿಪೂರ್ವಕವಾಗಿ ಈ ಸಮಾರಂಭವು ಶಾಶ್ವತವಾಗಿ ನೆರವೇರಲೆಂದು ಆಶಿಸಿ ಬೆಲವ ಗ್ರಾಮಕ್ಕೆ ಸೇರಿದ ಸರ್ವೆ ನಂ. 226–227 ರಲ್ಲಿ 2 ಎಕರೆ 34 ಗುಂಟೆ ಜಮೀನ ದಾನರೂಪವಾಗಿ ಸಮರ್ಪಿಸಿರುತ್ತಾರೆ. ಇದರ ಉತ್ಪನ್ನವೆಲ್ಲಾ ಪ್ರತಿವರ್ಷವೂ ನ ವೇರುವ ಜಯಂತೀಮಹೋತ್ಸವದ ವೆಚ್ಚಕ್ಕಾಗಿ ಉಪಯೋಗವಾಗತಕ್ಕದ್ದೆಂ ಜಗದ್ಗುರುಗಳವರು ಅನುಗ್ರಹಿಸಿದ್ದಾರೆ. ಉತ್ಸವ ಸಮಿತಿಯ ಆಶಯದಂತೆ ಆದ ಪ್ರಭುಗಳೂ ಕೊಡುಗೈಯ್ಯರೊಡೆಯರೂ ಆದ ಶ್ರೀಮನ್ಮಹಾರಾಜರವರು ಶಾಶ್ವತವ ಮೇಲಿನ ಸಂಪತ್ತನ್ನು ಒದಗಿಸಿರುತ್ತಾರೆ. ಅದಕ್ಕಾಗಿ ಉತ್ಸವ ಸಮಿತಿಯು ಶ್ರೀಮ ಹಾರಾಜರವರಿಗೂ ಅವರ ಕುಟುಂಬವರ್ಗಕ್ಕೂ ಜಗದ್ಗುರು ಶ್ರೀ ಶಿವರಾತ್ರೀಶ್ವರ ನಿತ್ಯ ಸನ್ಮಂಗಳವನ್ನುಂಟುಮಾಡುವಂತೆ ಪ್ರಾರ್ಥಿಸುತ್ತದೆ.

## ಯಂತ್ರೋಪಕರಣದ ಕಾಣಿಕೆ

ಈ ಸಮಾರಂಭದ ಕಾರ್ಯಕ್ರಮಗಳಿಗೆ ಆಧುನಿಕ ರೀತಿಯ ಯಂತ್ರ ಸೌಕ

ಅವಶ್ಯಕತೆ ಬಹಳವಾಗಿದೆ. ಉತ್ಸವ ಸಮಿತಿಯು ಎಲ್ಲ ದೃಷ್ಟಿಯಿಂದಲೂ ಸ್ವಯಂ
ರ್ಣವಾಗಬೇಕೆಂದು ಆಶಿಸುತ್ತಿದೆ. ಅದಕ್ಕಾಗಿ ಎಲ್ಲ ಉಪಕರಣಗಳನ್ನೂ ತನ್ನದೇ
ರುವಂತೆ ಮಾಡಿಕೊಳ್ಳುವ ಬಯಕೆ ಇದೆ. ಇದರ ಪ್ರಥಮ ಹೆಜ್ಜೆಯಾಗಿ ಸಮಿತಿಗೆ
ರ್ ರಿಕಾರ್ಡರು ಯಂತ್ರವು ದಾನವಾಗಿ ಬಂದಿದೆ. ಇದನ್ನು ದಾನಮಾಡಿದವರು
ತ್ತ ಸಂಸ್ಥೆಯ ಹಿರಿಯ ವಿದ್ಯಾರ್ಥಿಗಳಾಗಿ ವಿದೇಶದಲ್ಲಿ ಉಚ್ಚಶಿಕ್ಷಣವನ್ನು ಪಡೆದು
ಸ್ಥಾನದ ವೈದ್ಯ ಇಲಾಖೆಯಲ್ಲಿ ಸೇವೆಸಲ್ಲಿಸುತ್ತಿರುವ ಡಾ|| ಚಂದ್ರಶೇಖರ್ ಇವರು.
ಯುತರು ಬೆಂಗಳೂರಿನಲ್ಲಿ ಜನಿಸಿ ವೈದ್ಯಶಾಸ್ತ್ರದಲ್ಲಿ ಪದವೀಧರರಾಗಿ ಪಾಶ್ಚಾತ್ಯ
ಶದಲ್ಲಿ ಉಚ್ಚಶಿಕ್ಷಣ ಪಡೆದು ಸ್ವದೇಶಕ್ಕೆ ಹಿಂತಿರುಗಿದಾಗ ಸುಮಾರು ಎರಡೂವರೆ
ವಿರ ರೂಪಾಯಿ ಬೆಲೆಬಾಳುವ ಅತ್ಯುತ್ತಮ ಟೇಪ್‌ರಿಕಾರ್ಡರ್ ಯಂತ್ರವನ್ನು
ದು ಕಾಣಿಕೆಯಾಗಿ ಸಂಸ್ಥೆಗೆ ಒಪ್ಪಿಸಿದರು. ಶ್ರೀಯುತರ ಮಾತಾಪಿತೃಗಳೂ ಸಹ
ಯುತರ ಔದಾರ್ಯವನ್ನು ಪ್ರೋತ್ಸಾಹಿಸಿ ಸಂತೋಷಪೂರ್ವಕವಾಗಿ ಈ ಕಾಣಿಕೆಯನ್ನು
ರ್ಪಿಸಿದರು. ಡಾ|| ಚಂದ್ರಶೇಖರ್ ಇವರ ಮನೋಧರ್ಮ ಅನುಕರಣೀಯ.
ವಾರು ವರ್ಷಗಳ ಕಾಲ ಈ ಸಂಸ್ಥೆಯಲ್ಲಿ ಆಶ್ರಯಪಡೆದು ವಿದ್ಯಾಭ್ಯಾಸ ಮುಗಿಸಿ
ತ್ತಿಯನ್ನವಲಂಬಿಸಿದಾಗ ತಮ್ಮ ಮೊದಲನೇ ತಿಂಗಳ ಸಂಬಳವನ್ನೂ ಸಹ ಸಂಸ್ಥೆಗೆ
ಮ್ಮ ಕಾಣಿಕೆಯಾಗಿ ಅರ್ಪಿಸಿದ ಅಭಿಮಾನಿಗಳು. ಇವರಿಗೆ ಉತ್ಸವ ಸಮಿತಿಯು
ನ್ನ ಕೃತಜ್ಞತಾಪೂರ್ವಕ ಅಭಿನಂದನೆಯನ್ನರ್ಪಿಸಿ ಅವರಿಗೂ ಅವರ ಮನೆತನಕ್ಕೂ
ರ್ವಶ್ರೇಯಸ್ಸನ್ನು ಹಾರೈಸುತ್ತದೆ.

ಈ ಸಮಾರಂಭದಲ್ಲಿ ಅನೇಕ ರೀತಿಯಲ್ಲಿ ವಸ್ತು ಸಹಾಯವನ್ನು ನೀಡಿರುವ
ಹನೀಯರಿದ್ದಾರೆ. ಅವರೆಲ್ಲರನ್ನೂ ಇಲ್ಲಿ ಅತ್ಯಂತ ಕೃತಜ್ಞತೆಯಿಂದ ಸ್ಮರಿಸಲಾಗಿದೆ.

ಸಮಾರಂಭಕ್ಕೆ ಮಹನೀಯರಾದ ಹಿರಿಯರೂ ಸಾಹಿತಿಗಳೂ ಧರ್ಮಜ್ಞರೂ
ಾಗವಹಿಸಿದ್ದಾರೆ. ಅವರೆಲ್ಲರಿಗೂ ನಮ್ಮ ಧನ್ಯವಾದಗಳು. ನಗರದ ಪತ್ರಿಕೋದ್ಯಮಿ
ಳ ಸಹಕಾರ ಸಹಾಯಗಳು ಚಿರಸ್ಮರಣೀಯ.

ನಗರದ ಹಾಗೂ ಇತರ ಕಡೆಗಳಿಂದ ಅನೇಕ ಮಂದಿ ಕಲಾವಿದರು ಪ್ರೇಮ
ಂದ ಆಗಮಿಸಿ ಕಲಾಸೇವೆಸಲ್ಲಿಸಿಸಗಿರುವುದನ್ನು ಸ್ಮರಿಸಿ ಅಭಿನಂದಿಸಲಾಗಿದೆ.

ಮೈಸೂರು ಸರ್ಕಾರದ ನಾನಾ ಇಲಾಖೆಗಳ ಅಧಿಕಾರಿಗಳೂ, ಪೌರಸಭೆ
ುವರೂ ಸಮಾರಂಭಕ್ಕೆ ನಾನಾ ರೀತಿಯಲ್ಲಿ ನೆರವಾಗಿದ್ದಾರೆ. ಅವರೆಲ್ಲರಿಗೂ
ಉತ್ಸವ ಸಮಿತಿಯು ಚಿರಋಣಿಯಾಗಿದೆ.

ಸಮಾರಂಭದ ಯಶಸ್ಸಿಗೆ ಕಾರಣರಾದ ಅತಿಥಿಗಳು, ಆಗಂತುಕರು ಸೇ ಕರ್ತರು ಎಲ್ಲರಿಗೂ ಉತ್ಸವ ಸಮಿತಿಯು ತನ್ನ ಆಭಾರವನ್ನು ಮನ್ನಿಸುತ್ತಾ ಜಗದ್ಗು ಗಳು ಲೋಕ ಕ್ಷೇಮವನ್ನು ಅನುಗ್ರಹಿಸುವಂತೆ ಪ್ರಾರ್ಥಿಸುತ್ತದೆ.



# ಆಶೀರ್ವಾದ - ಅನುಭವಾಮೃತ

—§—

ಜಗದ್ಗುರು ಶ್ರೀ ಶಿವರಾತ್ರೀಶ್ವರರಿಂದ ಸಂಸ್ಥಾಪಿತವಾದ ಸುತ್ತೂರು ವೀರ ಂಹಾಸನ ಮಠವು ಸಂಸ್ಥಾಪಕರ ಆಶೀರ್ವಾದ ಆದೇಶದಂತೆ ಮಹತ್ವಪೂರ್ಣವಾದ ಾರ್ಯಗಳನ್ನು ನೆರವೇರಿಸುತ್ತಾ ಭಕ್ತೋದ್ಧಾರದ ಆಶೀರ್ವಾದವನ್ನು ನೀಡುತ್ತಾ ಂದಿವೆ. ಆಶೀರ್ವಾದಪೂರ್ವಕ ಘಟಕಗಳ ಸ್ಮರಣೆಗೆ ಅವಕಾಶ ಕಲ್ಪಿತವಾಗಿರಲಿಲ್ಲ. ಗದ್ಗುರು ಶ್ರೀ ಶಿವರಾತ್ರೀಶ್ವರರ ಜಯಂತೀ ಮಹೋತ್ಸವ ಸಮಾರಂಭ ವೈಭವವು ತ್ಯಮೂಲ್ಯ ಘಟನೆ. ಜಯಂತೀ ಮಹೋತ್ಸವವು ಹತ್ತಾರು ವರ್ಷಗಳಿಂದ ನೆರ ೀರುತ್ತಿದ್ದರೂ ಅದು ಒಂದು ನಿರ್ದಿಷ್ಟರೂಪವನ್ನು ತಳೆದದ್ದು 1959 ರಲ್ಲಿ. ಅಂದು ಂಸ್ಥೆಯ ಮೂಲಪುರುಷರ ಸಹಸ್ರ ವರ್ಷದ ಜಯಂತೀ ಸಮಾರಂಭವು ಸಪ್ತಾಹ ೂಪದಲ್ಲಿ ಏರ್ಪಟ್ಟು ಅಂತೆಯೇ ಪ್ರತಿವರ್ಷವೂ ನೆರವೇರುತ್ತಾ ಬಂದಿರುವುದನ್ನು ಈ ೃತಿಯ ಪ್ರಥಮ ಅಧ್ಯಾಯದಲ್ಲಿ ತಿಳಿಯಬಹುದಾಗಿದೆ. ಈ ಎರಡನೇ ಅಧ್ಯಾಯ ಲ್ಲಿ ಸಂಸ್ಥೆಯ ಘಟನೆಗಳನ್ನು ಸೂಕ್ಷ್ಮವಾಗಿ ಸ್ಮರಿಸುವುದು ಅಗತ್ಯ. ಆ ಸಂಸ್ಥೆಯ ಂಸ್ಕೃತಿಯ ಸೂತ್ರವನ್ನು ವಹಿಸಿದ ಎಲ್ಲ ಗುರುವರ್ಯರ ಅನುಗ್ರಹವನ್ನು ಸಂಗ್ರಹಿ ುವುದು ಅಸಾಧ್ಯವಾಗಿದೆ. ಆದರೆ ಇಂದಿನ ವೈಭವಕ್ಕೆ ಕಾರಣರೂ ಶಿವಮಂತ್ರ ಪೋನಿಷ್ಠರೂ ಆದ ಜಗದ್ಗುರು ಶ್ರೀ ಶಿವರಾತ್ರೀಮಹಾಸ್ವಾಮಿಗಳವರು ಅಲ್ಲಲ್ಲಿ ಕ್ತರಿಗೆ ನೀಡಿದ ಆಶೀರ್ವಾದ–ಅನುಭವಾಮೃತವನ್ನು ಈ ಅಧ್ಯಾಯದಲ್ಲಿ ಸಂಗ್ರಹಿಸ ಾಗಿದೆ. ಈ ಮಹತ್ಕಾರ್ಯಕ್ಕೆ ಜಗದ್ಗುರುಗಳವರು ಅನುಮತಿಯಿತ್ತು ಉತ್ಸವ ಮಿತಿಯನ್ನು ಆಶೀರ್ವದಿಸಿ ಸಾಹಿತ್ಯ ಸಾಮಗ್ರಿಗಳನ್ನು ಒದಗಿಸುವ ಕೃಪೆ ಮಾಡಿ ರು. ಆದಕ್ಕಾಗಿ ಉತ್ಸವ ಸಮಿತಿಯು ಪೂಜ್ಯಪಾದರಿಗೆ ಸಾಷ್ಟಾಂಗ ಪ್ರಣಾಮ ಳನ್ನು ಸಲ್ಲಿಸುತ್ತದೆ.

ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರ ಭಕ್ತೋದ್ಧಾರ ಕಾರ್ಯ ಳು ಮೇಧಾಶಕ್ತಿ ಕರ್ತವ್ಯನಿಷ್ಠೆ ಇವುಗಳು ಅವರ ಹರೆಯದಲ್ಲೇ ಸರ್ಕಾರ ಹಾಗೂ ಾರ್ವಜನಿಕರನ್ನು ಆಕರ್ಷಿಸಿದುವು. ಅಂತೆಯೇ ಹಲವಾರು ಮಹತ್ವದ ಸಮಾರಂಭ ಳಲ್ಲಿ ಭಾಗವಹಿಸಿ ಜಗದ್ಗುರುಗಳವರು ಭಕ್ತರನ್ನು ಆಶೀರ್ವಾದಿಸಿದ್ದಾರೆ. ಅವುಗಳನ್ನು ಂದೆಡೆ ಸೇರಿಸುವ ಭಾಗ್ಯ ಉತ್ಸವ ಸಮಿತಿಗೆ ದೊರೆತಿದೆ. ಅದರ ಫಲವೇ ಈ ಶೀರ್ವಾದ ಕೃತಿಯ ಎರಡನೇ ಅಧ್ಯಾಯ.

# ಸುತ್ತೂರು ಶ್ರೀ ವೀರಸಿಂಹಾಸನ ಮಠದ ಜಗದ್ಗುರು ಪಟ್ಟದ ಶ್ರೀ ಶಿವರಾತ್ರಿಸ್ವಾಮಿಗಳವರು

## ಮುಡುಕುತೊರೆಯಲ್ಲಿ 22-2-1940 ರಲ್ಲಿ ನಡೆದ ಶ್ರೀ ವೀರಶೈವ ಮಹಾಸಭೆಯ ಅಧ್ಯಕ್ಷಸ್ಥಾನದಿಂದ ಕೃತಪಡಿಸಿದ ಭಾಷಣ

---

ರಾಜಮಂತ್ರ ಪ್ರವೀಣ ಶ್ರೀಮಾನ್ ಕೆ. ವಿ. ಅನಂತರಾಮ್ ಸಾಹೇಬರವರೆ, ವೀರಶೈವ ಬಾಂಧವರೆ, ಮಹಾಶಯರೆ,

ಪವಿತ್ರ ಕ್ಷೇತ್ರವಾದ ಈ ಮುಡುಕುತೊರೆಯಲ್ಲಿ ನಡೆಯಲಿರುವ ಈ ಮಹೋತ್ಸ ವದಲ್ಲಿ ನಾವು ಅಧ್ಯಕ್ಷ ಸ್ಥಾನವನ್ನು ವಹಿಸಬೇಕೆಂದು ನೀವುಗಳು ಕೋರಿರುವುದು ನಮಗೆ ತುಂಬಾ ಗೌರವವನ್ನು ಕೊಟ್ಟಿರುವಂತೆ ಭಾವಿಸುವೆವು. ನಮಗೆ ಚಿರಪರಿಚಿ ರಾಗಿ ನಮ್ಮೆಲ್ಲರ ವಿಶ್ವಾಸಕ್ಕೂ ಮನ್ನಣೆಗೂ ಪಾತ್ರರಾಗಿರುವ ಶ್ರೀಮಾನ್ ಅನಂ ರಾಮ್‌ರವರು ತಮ್ಮ ಮಂಗಳ ಹಸ್ತದಿಂದ ಇಲ್ಲಿ ಶಿಥಿಲವಾಗಿ ಹೋಗಿದ್ದ ನಾಡು ಮಠದ ಕಟ್ಟಡದ ಜೀರ್ಣೋದ್ಧಾರದ ಪ್ರಯತ್ನಕ್ಕೆ ಶಂಕುಸ್ಥಾಪನೆಯನ್ನು ನೆರವೇ ಸುವುದಲ್ಲದೆ ವೀರಶೈವ ಸಭೆಯ ಪ್ರಾರಂಭೋತ್ಸವವನ್ನು ನೆರವೇರಿಸಿದುದಕ್ಕಾಗಿ ಶ್ರೀ ಮಠದ ಭಕ್ತವೃಂದವೇ ನಮ್ಮ ಮಿತ್ರರಾದ ರಾಜಮಂತ್ರ ಪ್ರವೀಣರಿಗೆ ಚಿರಋಣಿ ಗಳಾಗಿರುತ್ತಾರೆ. ಶ್ರೀಮಾನ್ ಅನಂತರಾಮ್‌ರವರು ನಮ್ಮ ವೀರಶೈವ ಸಮಾಜಕ್ಕೆ ನಾನಾ ಬಗೆಯಲ್ಲಿ ಮಹದುಪಕಾರಗಳನ್ನು ಮಾಡಿರುತ್ತಾರೆಂದು ಈ ಸಭೆಯಲ್ಲಿ ತಿ ಸಲು ನಮಗೆ ತುಂಬಾ ಸಂತೋಷ ಉಂಟಾಗುತ್ತದೆ. ಇಲ್ಲಿ ನಿರ್ಮಾಣವಾಗು ನಾಡುಮಠದ ನೂತನ ಕಟ್ಟಡವು ಆಚಂದ್ರಾರ್ಕವಾಗಿ ಈ ಪುಣ್ಯಕ್ಷೇತ್ರಕ್ಕೆ ಬರು ಭಕ್ತಾದಿಗಳಿಗೆ ಪ್ರಯೋಜನಕಾರಿಯಾಗಲೆಂದೂ ನಮ್ಮ ಪ್ರಾಂತದ ವೀರಶೈವ ಸಮಾಜ ದವರು ವರ್ಷೇ ವರ್ಷೇ ನಡೆಸಬೇಕೆಂದಿರುವ ವಾರ್ಷಿಕ ಸಭೆಗಳು ಇಲ್ಲಿ ಯಶಸ್ವಿಯಾ ನಡೆದು ಸಮಾಜೋದ್ಧಾರ ಕಾರ್ಯಗಳು ಮುಂದೆ ಮುಂದೆ ಸಾಗಲೆಂದೂ ಆಶಿಸು ತ್ತೇವೆ.

ಈ ಸಭೆಯ ಸ್ವಾಗತ ಸಂಘದ ಅಧ್ಯಕ್ಷರಾದ ಶ್ರೀಮಾನ್ ಬಿ. ಎಸ್. ಪುಟ್ಟ ಸ್ವಾಮಿಯವರು ನಮ್ಮ ವಿಷಯದಲ್ಲಿ ಅನೇಕ ಸವಿಮಾತುಗಳನ್ನು ನುಡದಿದ್ದಾರೆ ಅದಕ್ಕೆಲ್ಲಾ ಅವರಿಗೂ ಸ್ವಾಗತ ಸಂಘದವರಿಗೂ, ಶ್ರೀ ಪೀಠದಲ್ಲಿಯೂ ನಮ್ಮಲ್ಲಿಯೂ ಇರುವ ಭಕ್ತಿ ಪ್ರೇಮಗಳೇ ಮುಖ್ಯ ಕಾರಣಗಳೆಂದು ಹೇಳಬೇಕಾಗಿದೆ.



ಜಗದ್ಗುರುಗಳವರು ಮುಡುಕತೊರೆಯಲ್ಲಿ ಶ್ರೀ ಕೆ. ವಿ. ಅನಂತರಾಮ್ಗಳವರ ಸಮ್ಮುಖದಲ್ಲಿ ನಡೆದ ವೀರಶೈವ ಮಹಾಸಭೆಯ ಅಧ್ಯಕ್ಷ ಪೀಠದ ಭಾಷಣಮಾಡುತ್ತಿರುವುದು

ಮೈಸೂರಿನ ರಾಜಕೀಯದಲ್ಲಿ ಚೆನ್ನಾಗಿ ನುರಿತವರಾದ ಶ್ರೀಯುತ ಪುಟ್ಟಸ್ವಾಮಿ
ಯವರು ತಮ್ಮ ಭಾಷಣದಲ್ಲಿಯೇ ಸಾಮಾಜಿಕ, ನೈತಿಕ ಧಾರ್ಮಿಕ ಮತ್ತು ರಾಜ
ಯ ವಿಷಯಗಳನ್ನು ಕುರಿತು ದೂರದೃಷ್ಟಿಯಿಂದ ಕೂಲಂಕಷವಾಗಿ ಚರ್ಚಿಸಿ
ಸ್ತಾಪಿಸಿರುತ್ತಾರೆ. ಅವರ ಭಾಷಣದಲ್ಲಿ ಸೂಚಿತವಾದ ಎಲ್ಲಾ ವಿಷಯಗಳನ್ನೂ
ವೂ ಅನುಮೋದಿಸುತ್ತೇವೆ. ಅವರು ಹೇಳಿರುವಂತೆ ನಮ್ಮ ವೀರಶೈವ ಸಮಾಜವು
ರ್ಷಾಸೂಯೆ ಮತ್ತು ದುರಭಿಮಾನ ಇವುಗಳ ಫಲವಾಗಿ ಇಂದು ಛಿದ್ರ ಛಿದ್ರ
ಗಿದೆ.

ಪ್ರಪಂಚದ ಅಶಾಂತಿಗೆ ಮೂಲಕಾರಣವಾದ ಕೀಳುಮೇಲೆಂಬ ದುರ್ಭಾವನೆ
ನ್ನು ಮೂಲೋತ್ಪಾಟನ ಮಾಡಬೇಕೆಂಬ ವಿಶಾಲದೃಷ್ಟಿಯಿಂದ ಶ್ರೀ ಬಸವಾದಿ
ಮುಖರು ಈಗ್ಗೆ ಏಳು ಶತಮಾನಗಳ ಹಿಂದೆ ಒಂದು ಬಗೆಯ ನವೀನ ಸೌಹಾರ್ದ,
ಂದು ನವಚೈತನ್ಯ, ಮಾನವ ಸಹಾನುಭೂತಿಯನ್ನು ಹೆಚ್ಚು ಹೆಚ್ಚಾಗಿ ಪ್ರಕಟಿಸ
ೇಕೆಂಬ ನವೀನನಿಷ್ಠೆಗಳಿಂದ ಕೂಡಿದ ಒಂದು ನವಸಂಸ್ಕೃತಿಯನ್ನೇ ಭರತವರ್ಷಕ್ಕೆ
ಕೆ ಇಡೀ ಜಗತ್ತಿಗೆ ಸಾರಿರುತ್ತಾರೆ. ಆ ಸಂಸ್ಕೃತಿಯು ಜಗದೋದ್ಧಾರಕ ಸಂಸ್ಕೃ
ಯೇ ಆಗಿತ್ತು. ಆದರೆ ಇಂದು ನಮ್ಮ ಸಮಾಜದಲ್ಲಿ ಅಂತಃಕಲಹಗಳು ಆವಿರ್ಭವಿಸಿ
ನ್ಮ ಸಂಸ್ಕೃತಿಯು ನಶಿಸಿಹೋಗುತ್ತಾ ಬಂದಿರುವುದಲ್ಲದೆ ನಮ್ಮ ಸಮಾಜದ ಪ್ರಾಶ
ತ್ಯವು ಕಮ್ಮಿಯಾಗುತ್ತಾ ಬಂದಿರುತ್ತದೆ. ಆದುದರಿಂದ ನಮ್ಮ ನಮ್ಮಲ್ಲಿ ಬಂದಿರುವ
ೈಷಮ್ಯಗಳನ್ನು ಮರೆತು ಎಲ್ಲರೂ ಏಕೀಭವಿಸಿ ಸಮಾಜಸೇವೆಯನ್ನು ಮಾಡುವು
ಾದರೆ ವೀರಶೈವರ ಗತವೈಭವವು ಕ್ಷಿಪ್ರದಲ್ಲಿಯೇ ಲಭಿಸುವುದೆಂಬುವುದರಲ್ಲಿ ಸಂದೇಹ
ಲ್ಲ. ಇನ್ನು ರಾಜಕೀಯದಲ್ಲಿ ಒಂದೆರಡು ಮಾತು ಹೇಳಬಯಸುತ್ತೇವೆ.

ಜನಕಾದಿ ಪ್ರಸಿದ್ಧ ಮಹಾರಾಜರುಗಳು ಪುಣ್ಯಭೂಮಿಯಾದ ಈ ಭಾರತ
ರ್ಷವನ್ನು ಸತ್ಯ ಮತ್ತು ಧರ್ಮಗಳಿಂದ ಪರಿಪಾಲಿಸಿದಂತೆ ನಮ್ಮನ್ನಾಳುವ ಮಹಾ
ಸ್ವಾಮಿಯವರು "ಸತ್ಯಮೇವೋದ್ಧರಾಮ್ಯಹಂ" ಎಂಬ ಆದರ್ಶಕ್ಕೆ ಈಷದಪಿಲೋಪ
ಬಾರದಂತೆ ರಾಜ್ಯಪರಿಪಾಲನೆ ಮಾಡುತ್ತಿರುವುದು ಪ್ರಪಂಚಕ್ಕೇ ತಿಳಿದಂಶವಾಗಿರು
ತ್ತದೆ. ಮೈಸೂರಿನ ಇತಿಹಾಸ, ಸಾಂಪ್ರದಾಯ, ವೈಲಕ್ಷಣ್ಯ ಎಲ್ಲವನ್ನೂ ಪರಿಶೀಲಿಸಿ
ಕ್ರಮಬದ್ಧವಾದ ಮಾರ್ಗದಲ್ಲಿ ದೇಶದ ಪ್ರಗತಿಯು ಮುಂಬರಿಯಲು ಅನುಕೂಲಿಸು
ವಂತೆ ಆಳುವ ಮಹಾಸ್ವಾಮಿಯವರು ಪ್ರಕೃತದಲ್ಲಿ ರಾಜಕೀಯ ಸುಧಾರಣೆಗಳನ್ನು
ಪ್ರಜೆಗಳಿಗೆ ದಯಪಾಲಿಸಿರುತ್ತಾರೆ. ಪ್ರಜೆಗಳ ಹಿತವನ್ನೇ ಕೋರುವ ಆದರ್ಶಪ್ರಭು
ಗಳವರ ಆಕಾಂಕ್ಷೆಗಳು ನೆರವೇರಬೇಕಾದರೆ ಅವರ ಸತ್ಪ್ರಜೆಗಳು ಆ ಸುಧಾರಣೆ
ಗಳನ್ನು ಸ್ವಾಗತಿಸಿ ಅವುಗಳನ್ನು ದಕ್ಷತೆಯಿಂದ ಪರಿಪೋಷಿಸಿ ಆಳುವ ಮಹಾಸ್ವಾಮಿ
ಯವರ ಮೆಚ್ಚಿಗೆಯನ್ನು ಪಡೆದು ಇನ್ನೂ ಹೆಚ್ಚಿನ ಅಧಿಕಾರಗಳಿಗೆ ತಾವು ಅರ್ಹರೆಂದು

ತೋರ್ಪಡಿಸುವ ವರ್ತನೆಯೇ ಸರಿಯಾದ ಮಾರ್ಗವೆಂದು ನಮಗೆ ತೋರುತ್ತದೆ. ಈ ಮಾರ್ಗವನ್ನೇ ನಮ್ಮ ಶಿಷ್ಯಕೋಟಿಯಾದ ನಮ್ಮೀ ಪ್ರಾಂತ್ಯದ ವೀರಶೈವರು ಅನುಸರಿಸಿರುವುದಕ್ಕಾಗಿ ನಮಗೆ ತುಂಬಾ ಸಂತೋಷ. ರಾಜಕೀಯ ವಿಷಯದಲ್ಲೇ ಆಗಲಿ ಸಾಮಾಜಿಕ ವಿಷಯದಲ್ಲೇ ಆಗಲಿ ಕ್ರಮಬದ್ಧವಾದ ಸುಧಾರಣೆಗಳ ಮೂಲಕ ಸತ್ಫಲಗಳು ದೊರಕುವುವೇ ಹೊರತು ಕ್ರಾಂತಿಯಿಂದಲ್ಲ.

ಈ ಅಂಶವನ್ನು ಮೈಸೂರಿನ ಪ್ರತಿಯೊಬ್ಬ ಪ್ರಜೆಯೂ ಗಮನಿಸಿ ಕ್ರಮಬದ್ಧವಾದ ಮಾರ್ಗದಲ್ಲಿ ಶಾಂತಿ ಸಮಾಧಾನದಿಂದಲೂ ತಾಳ್ಮೆಯಿಂದಲೂ ವರ್ತಿಸುವಂತೆ ಆ ಪರಶಿವನು ಪ್ರತಿಯೊಬ್ಬ ಮೈಸೂರಿನ ಪ್ರಜೆಗೂ ಸುಬುದ್ಧಿಯನ್ನು ಕೊಡಲೆಂದು ಹಾರೈಸುವೆವು.

ವೀರಶೈವ ಮತಬಾಂಧವರೇ ಮೈಸೂರು ಸಂಸ್ಥಾನದಲ್ಲಿ ನಮ್ಮ ಜನಾಂಗವು ಸಂಸ್ಥಾನದ ಪ್ರಮುಖ ಜನಾಂಗಗಳಲ್ಲಿ ಒಂದಾಗಿದೆ. ವ್ಯಾಪಾರ, ವ್ಯವಸಾಯ ಮುಂತಾದ ಅನೇಕ ಕಸಬುಗಳಲ್ಲಿ ನಮ್ಮವರು ಮುಖ್ಯಪಾತ್ರವನ್ನು ವಹಿಸಿರುತ್ತಾರೆ. ಇಂಥ ಜನಾಂಗವು ರಾಜಕೀಯದಲ್ಲಿ ಮುಖ್ಯಪಾತ್ರವನ್ನು ವಹಿಸಬೇಕಾದುದು ನ್ಯಾಯವೂ ಧರ್ಮವೂ ಆಗಿದೆ. ವೀರಶೈವರು ಮಾಡುವ ಪ್ರತಿಯೊಂದು ಪ್ರಯತ್ನವೂ ಮೈಸೂರಿನ ಕೀರ್ತಿಗೂ ನಮ್ಮನ್ನಾಳುವ ಮಹಾಸ್ವಾಮಿಯವರ ಮೆಚ್ಚುಗೆಗೂ ಪಾತ್ರವಾಗುವಂತೆ ಸುಮಾರ್ಗದಲ್ಲಿ ಸಾಗಲೆಂಬುದೇ ನಮ್ಮ ಉತ್ಕಟಾಭಿಲಾಷೆ. ತಾವುಗಳೆಲ್ಲರೂ ಇಲ್ಲಿಗೆ ಆಗಮಿಸಿರುವುದಕ್ಕೂ ಮುಖ್ಯವಾಗಿ ಶ್ರೀಮಾನ್ ಅನಂತರಾಮನ್ ಸಾಹೇಬರವರು ತಮ್ಮ ಅಮಿತ ರಾಜಕಾರ್ಯ ಸಂದಣಿಯಲ್ಲಿ ಬಿಡುವುಮಾಡಿಕೊಂಡು ಈ ಸಭೆಯ ಪ್ರಾರಂಭೋತ್ಸವವನ್ನು ನಡೆಸಿದುದಕ್ಕೂ, ಇತರ ಅಧಿಕಾರಿವರ್ಗದವರು ಸಭೆಯನ್ನು ಅಲಂಕರಿಸಿ ಈ ಸಭೆಯನ್ನು ಯಶಸ್ವಿಯನ್ನಾಗಿ ಮಾಡಿದುದಕ್ಕೂ ನಮಗೆ ತುಂಬಾ ಸಂತೋಷ ಉಂಟಾಗಿರುವುದಲ್ಲದೆ ವೀರಶೈವರು ಅವರೆಲ್ಲರಿಗೂ ಋಣಿಗಳಾಗಿರುತ್ತಾರೆಂದು ಮತ್ತೊಮ್ಮೆ ಹೇಳಬಯಸುತ್ತೇವೆ. ತಮ್ಮೆಲ್ಲರಿಗೂ ಈ ಕ್ಷೇತ್ರಾಧಿಪನಾದ ಶ್ರೀ ಭ್ರಮರಾಂಬಾ ಸಮೇತ ಮಲ್ಲಿಕಾರ್ಜುನಸ್ವಾಮಿಯವರು ಸಕಲ ಸನ್ಮಂಗಳವನ್ನೀಯಲೆಂದು ಹಾರೈಸುತ್ತೇವೆ.

---

# ಸುತ್ತೂರು ಶ್ರೀ ವೀರಸಿಂಹಾಸನ ಮಠದ ಜಗದ್ಗುರು ಪಟ್ಟದ ಶ್ರೀ ಶಿವರಾತ್ರಿಸ್ವಾಮಿಗಳವರು

**...ಂಡ್ಲುಪೇಟೆ ತಾಲ್ಲೂಕು ಕಬ್ಬಹಳ್ಳಿಯಲ್ಲಿ 24-3-1940 ನೇ ಭಾನುವಾರ ...ಿದ ಮೈಸೂರು ಸಂಸ್ಥಾನದ ವೀರಶೈವ ಮಹಾಸಭೆಯ ಅಧ್ಯಕ್ಷಸ್ಥಾನದಿಂದ ಮಾಡಿದ ಭಾಷಣ**

—⁓⁓—

ಮೈಸೂರು ಸಂಸ್ಥಾನದ ದಿವಾನ್ ಸಾಹೇಬರವರಾದ ಸರ್ ಎಂ. ಮಿರ್ಜಾ ...ಹೇಬರವರೆ, ವೀರಶೈವ ಬಾಂಧವರೆ ಮತ್ತು ಮಹಾಶಯರೆ,

ಮೊನ್ನೆ ತಾನೇ ಶ್ರೀಮದ್ಯುವರಾಜರವರು ಕೈಲಾಸವಾಸಿಗಳಾದುದರಿಂದ ...ೃಸೂರು ಸಂಸ್ಥಾನವೇ ಶೋಕಸಾಗರದಲ್ಲಿ ಮುಳುಗಿದೆ. ಅಂತಹ ಪ್ರಭುವನ್ನು ...ಳೆದುಕೊಂಡ ನಾವೇ ಭಾಗ್ಯಹೀನರು. 'ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ...ಭಾಶುಭಂ' ಎಂಬಂತೆ ಯಾವ ಯಾವ ಕಾಲದಲ್ಲಿ ಏನೇನು ಆಗಬೇಕೋ ಅದನ್ನು ...ಡೆಯಲು ಯಾರಿಗೂ ಸಾಧ್ಯವಿಲ್ಲ ಎಂಬ ತಿಳುವಳಿಕೆಯನ್ನು ಗಮನದಲ್ಲಿಟ್ಟುಕೊಂಡು ...ಮ್ಮ ಶ್ರೀಮನ್ಮಹಾರಾಜರವರೂ ರಾಜಕುಟುಂಬದವರೂ ಧೈರ್ಯ ತೆಗೆದುಕೊಳ್ಳ ...ೀಕಾಗಿ ಹಾರೈಸುತ್ತೇನೆ.

ಮೈಸೂರು ದೇಶದ ವೀರಶೈವರ ಚರಿತ್ರೆಯಲ್ಲಿ ಈ ದಿನವು ಪ್ರಾಮುಖ್ಯದ ದಿನ ...ಾಗಿ ಪರಿಣಮಿಸುವುದೆಂದು ಹೇಳಬಹುದಾಗಿದೆ. ನಮ್ಮ ದಿವಾನರಾದ ಸರ್ ಮಿರ್ಜಾ ...ಂ. ಇಸ್ಮಾಯಿಲ್‌ರವರು ಈ ಸಭೆಯ ಪ್ರಾರಂಭೋತ್ಸವವನ್ನು ನೆರವೇರಿಸಿರುವುದೇ ...ುಂದಿನ ಶುಭಸೂಚನೆಗೆ ಗುರುತಾಗಿದೆ. ವೀರಶೈವರು ಸ್ವಾಭಾವಿಕವಾಗಿ ಧರ್ಮ ...ಕ್ಷೇತ್ರದಲ್ಲಿಯೇ ನಿರತರಾಗಿ ಆಸಕ್ತಿಯಿಂದ ಕೆಲಸ ಮಾಡುವವರು. ಆದರೆ ಈಗಿನ ...ಸ್ಥಿತಿಗತಿಗಳಿಗೆ ಗಮನಕೊಟ್ಟು ರಾಜಕೀಯ ಕ್ಷೇತ್ರದಲ್ಲಿಯೂ ಪ್ರವೇಶಿಸಿ ವೀರಶೈವರು ...ತಮ್ಮ ಧರ್ಮವನ್ನು ಹೇಗೆ ಉಳಿಸಿಕೊಳ್ಳಬೇಕು, ಸಂಸ್ಥಾನದಲ್ಲಿ ತಮ್ಮ ಸ್ಥಾನಮಾನ ...ಗಳನ್ನು ಹೇಗೆ ಕಾಪಾಡಿಕೊಳ್ಳಬೇಕು—ಎಂಬೀ ಮೊದಲಾದ ವಿಷಯಗಳನ್ನು ಸೌಹಾ...ರ್ದಸಹಾನುಭೂತಿಯಿಂದ ಆಲೋಚಿಸುವ ಸದುದ್ದೇಶದಿಂದಲೇ ಈ ಸಭೆಯನ್ನು ಸೇರಿ...ಸಿದುದಾಗಿದೆ. ಧರ್ಮಾಂಗಣವೇ ಗುರುವರ್ಗದವರ ಕಾರ್ಯಕಲಾಪಗಳಿಗೆ ಮುಖ್ಯ ...ಕ್ಷೇತ್ರವಾಗಿದ್ದಾಗ್ಯೂ ನಮ್ಮ ಧರ್ಮದ ಮೂಲಸೂತ್ರಗಳನ್ನೇ ಅಲ್ಲಾಡಿಸಿ ಕಿತ್ತು ...ಹಾಕುವ ಸನ್ನಿವೇಶಗಳು ಒದಗಿದ ಕಾಲದಲ್ಲಿ ಮೌನವಾಗಿ ಕುಳಿತು ಧರ್ಮವು ಅಳಿದು

ಹೋಗುವುದಕ್ಕೆ ಅವಕಾಶಕೊಡುವುದು ಗುರುಗಳೆನಿಸಿಕೊಂಡವರಿಗೆ ಯುಕ್ತವ ವೆಂದು ತೋರುತ್ತದೆ. ಈ ದೃಷ್ಟಿಯಿಂದ ಸ್ವಾಗತ ಸಂಘದವರ ಅಪೇಕ್ಷೆಯನ್ ಅಂಗೀಕರಿಸಿ ಕಳೆದ ತಿಂಗಳು ನಡೆದ ಮುಡುಕುತೊರೆ ವೀರಶೈವ ಸಭೆಯಲ್ಲಿಯೂ ದಿವಸದ ಸಭೆಯಲ್ಲಿಯೂ ಭಾಗವಹಿಸಲು ಸಮ್ಮತಿಸಬೇಕಾಯಿತು.

ತಮಗಿರುವ ಅನೇಕ ಕಾರ್ಯಗೌರವದ ಮಧ್ಯದಲ್ಲಿಯೂ ಅಲ್ಲದೆ ಕಲ್ಕ ಮೊದಲಾದ ಮೈಸೂರಿನ ಹೊರ ಪ್ರದೇಶಗಳಲ್ಲಿ ಆಘೋಷವಾದ ಅನೇಕ ರಾಜಕಾ ದಲ್ಲಿ ಭಾಗವಹಿಸಿ ಆಯಾಸಪಟ್ಟುಕೊಂಡು ನೊನ್ನೆ ತಾನೆ ಹಿಂದಿರುಗಿದ್ದಾಗ್ಯೂ ವಿಶ್ರಾಂತಿಯನ್ನೂ ಪಡೆಯದೆ ನಮ್ಮ ಸರ್ ಮಿರ್ಜಾ ಸಾಹೇಬರವರು ಪ್ರೀತಿಪೂರ್ವ ವಾಗಿ ಪ್ರಾರಂಭೋತ್ಸವವನ್ನು ನೆರವೇರಿಸಲು ದಯಮಾಡಿರುವುದು ಮೈಸೂರಿನ ಇದ ವೀರಶೈವರ ಪುಣ್ಯ. ಇದಕ್ಕಾಗಿ ಆದ್ಯಂತ ಸಮಾಜವೇ ಅವರಿಗೆ ಕೃತಜ್ಞತೆಯನ್ ಅರ್ಪಿಸುತ್ತದೆ.

ಸ್ವಾಗತ ಸಂಘದ ಅಧ್ಯಕ್ಷರು ವೀರಶೈವ ಸಮಾಜದ ಕುಂದುಕೊರತೆಗಳನ್ ಕುರಿತು ಎಲ್ಲಾ ಭಾಗಗಳನ್ನೂ ಒಳಗೊಂಡ ಶ್ರೇಷ್ಠ ತಿಳುವಳಿಕೆಯನ್ನು ನಮ್ಮ ಮುಂ ಇಟ್ಟಿರುತ್ತಾರೆ. ಮಾನವವರ್ಗಕ್ಕೆ ಪ್ರಬಲವಾದ ಶಕ್ತಿಯನ್ನು ಕೊಟ್ಟಿರುವ ಧರ್ಮ ವಿಷಯದಲ್ಲಿ ಮಾತ್ರ ಒಂದೆರಡು ಮಾತು ಹೇಳಲು ಅಪೇಕ್ಷೆಯುಂಟು. ಪ್ರಪಂಚ ಎಲ್ಲಾ ಧರ್ಮದ ಮೂಲ ಸೂತ್ರಗಳೂ ಒಂದೇ. ಅವುಗಳ ಬಾಹ್ಯ ಲಕ್ಷಣಗ ಅಂದರೆ, ಆಚಾರ ವ್ಯವಹಾರಗಳು ದೇಶ ಕಾಲಗಳಿಗನುಸಾರವಾಗಿ ವ್ಯತ್ಯಾಸಗೊಂಡಿ ಬಹುದು. ಧರ್ಮದ ಮೂಲವು ಬಲವಾಗಿರದ ಹೊರತು, ಅದರ ಸಂರಕ್ಷಣೆಯ ಪೋಷಿಸಲ್ಪಟ್ಟ ಹೊರತು, ಮಾನವನು ಸರ್ವತೋಮುಖವಾದ ಪ್ರಗತಿಮಾರ್ಗದ ಮುಂಬರಿಯುವುದಿಲ್ಲನೆಂಬ ಅಂಶವು ಪ್ರಪಂಚದ ಇತಿಹಾಸವನ್ನು ನೋಡಿದವರಿ ವೇದ್ಯವಾಗಿದೆ. ಧರ್ಮದ ವಿಶಾಲತ್ವವು ಅನುಭವದ ಸಹಾಯದಿಂದ ಅಂತರಂ ಮತ್ತು ಬಹಿರಂಗದಿಂದ ರೂಪುಗೊಂಡು, ಧರ್ಮದ ಬೆಳವಣಿಗೆಯ ಫಲಿತಾಂಶವಾ ಬೇರೆ ಬೇರೆ ಮತ, ಬೇರೆ ಬೇರೆ ಜಾತಿಗಳು ಕಾಣಬರಬಹುದು. ಈ ವೈವಿಧ್ಯ ಶಾಖೆಗಳ ದೆಸೆಯಿಂದ ಧರ್ಮದ ಮೂಲವು ಯಾವ ರೀತಿಯಿಂದಲೂ ಹೀನಾವಸ ಯನ್ನು ಹೊಂದಲಾರದು. ಈ ಮೂಲಾಧಾರವಾದ ಧರ್ಮವೇ ದಯೆ, ವಿಶ್ವಪ್ರೇಮ ಸರ್ವಸಮಾನತೆ. ಧರ್ಮದ ಈ ಮೂಲವನ್ನು ಆಚರಣೆಯಲ್ಲಿಯೂ ತಂದ ಅಂದರೆ ನುಡಿದಂತೆ ನಡೆದ ಸ್ವತಂತ್ರ ಮತವೆಂದರೆ ಅದು ವೀರಶೈವ ಮತ. ಇಹಲೋಕದ ಧರ್ಮಪರಿಪಾಲನೆಮಾಡಿ "ಇಲ್ಲಿ ಸಲ್ಲುವವನು ಅಲ್ಲಿಯೂ ಅಂದರೆ ಪರಲೋಕದಲ್ಲಿಯ ಸಲ್ಲುವನು" ಎಂಬ ತತ್ವವನ್ನು ಆಚಾರ, ವ್ಯವಹಾರಕ್ಕೆ ತಂದವರಲ್ಲಿ ವೀರಶೈವರು ಒ ರಾಗಿರುತ್ತಾರೆ. ಗಂಡು ಹೆಣ್ಣು ಎಂಬ ಭೇದವನ್ನು ಅಳಿದು ಸಮಾನತ್ವವನ್ನು ಅಂ

ಸಿ ವ್ಯಕ್ತಿ ಸ್ವಾತಂತ್ರ್ಯವನ್ನು ಅನುಷ್ಠಾನಕ್ಕೆ ತಂದು ಕೀಳು ಮೇಲೆಂಬ ದುರ್ಭಾವನೆ
ನ್ನು ಮೂಲೋತ್ಪಾಟನೆಮಾಡಿ "ಎನಗಿಂತ ಕಿರಿಯನಿಲ್ಲ ಶಿವಭಕ್ತನಿಗಿಂತ ಹಿರಿಯ
" ಎಂಬ ಉದಾತ್ತ ಧ್ಯೇಯಗಳನ್ನು ಪ್ರಪಂಚಕ್ಕೆ ಸಾರಿ ಸಮಾಜದ ಹಳ್ಳ ತಿಟ್ಟು
ನ್ನು ಸಮಮಾಡಿ "ಕಾಯಕವೇ ಕೈಲಾಸ" ವೆಂದು ಕೊಂಡಾಡಿ ಉದ್ಯೋಗದಲ್ಲಿನ
ರವವನ್ನು ಹೆಚ್ಚಿಸಿ ಮಾನವವರ್ಗಕ್ಕೆ ಶಾಂತಿ ಶೀಲ ಸಮಾಧಾನ ಸೌಹಾರ್ದತೆ
ನ್ನು ನೀಡಿದ ಮತವೆಂದರೆ ವೀರಶೈವರ ಮತ.

ವೀರಶೈವ ಸಮಾಜದವರು 40 ಲಕ್ಷ ಪ್ರಜೆಗಳು ಉತ್ತರ ಕರ್ಣಾಟಕ, ಕೊಡಗು
ಸೂರು ಮತ್ತು ಹೈದರಾಬಾದು- ಈ ಸಂಸ್ಥಾನಗಳಲ್ಲಿ ನೆಲಸಿರುತ್ತಾರೆ. ಈ ದೊಡ್ಡ
ಾಜವು ಕೇಡಿಗೆ ಗುರಿಯಾಗದಂತೆ ನೋಡಿಕೊಳ್ಳಲು ಸಾವಿರಾರು ಮಠಗಳು
ಪಿಸಲ್ಪಟ್ಟಿವೆ. ಮೈಸೂರು ದೇಶ ಒಂದರಲ್ಲಿಯೇ ಹತ್ತು ಸಾವಿರದಷ್ಟು ಮಠಗಳಿವೆ.
ಸೂರಿನ 17 ಸಾವಿರ ಗ್ರಾಮುಗಳಲ್ಲಿ 10 ಸಾವಿರ ಗ್ರಾಮುಗಳಿಗೆ ಮೇಲ್ಪಟ್ಟು ವೀರ
ವರಿರುವ ಗ್ರಾಮುಗಳುಂಟು. ಇಂಥಾ ಮಠಗಳಲ್ಲಿ ಅನೇಕ ಮಠಗಳು ಕ್ಷೀಣದೆಶಿಗೆ
ಿವೆ. ವೀರಶೈವರಿಗೆ ಮಠಗಳ ಅವಶ್ಯಕತೆ ಬಹಳ. ವೀರಶೈವರಿಗೆ ತತ್ವಬೋಧೆ
ಾಡುವ ಗುರುವು ಬೇಕು. ಭಕ್ತ ಮಾಹೇಶ್ವರರ ಸಂಗಬೇಕು. ಭಕ್ತಮಾಹೇಶ್ವರರ
ಶ್ರೇಧ್ಯ ಸಹವಾಸವಿರಬೇಕು. ಮಠವಿಲ್ಲದೆ ವೀರಶೈವವಿಲ್ಲ, ವೀರಶೈವವಿಲ್ಲದೆ ಮಠವಿಲ್ಲ.
ದೇ ವೀರಶೈವ ತತ್ವ. ಇದೇ ವೀರಶೈವ ಮತ. ಇದೇ ವೀರಶೈವ ಸಮಾಜ.
ನೆರಡು ಬೆರತಿಲ್ಲದಲ್ಲಿ ವೀರಶೈವವಿಲ್ಲ.

ಇಂಥ 8 ಲಕ್ಷ ಜನಸಂಖ್ಯೆಯಿಂದ ಕೂಡಿದ ಒಂದು ಪ್ರದೇಶದ, ಒಂದು
ಲ್ಲೆಯ ಸಮಾಜದ ಹಿತಚಿಂತನೆಯನ್ನು ನಿರ್ಧರಿಸಬೇಕಾದ ಸಮ್ಮೇಳನವು ಇದಾ
ದೆ. . ಈ ಹೊತ್ತಿನ ದಿನ ಪ್ರಪಂಚವೇ ಯೂರೋಪಿನ ಮಹಾರಣದ ಪ್ರಯುಕ್ತ
ಲ್ಲೋಲಕಲ್ಲೋಲ ಸ್ಥಿತಿಯಲ್ಲಿದೆ. ನಮ್ಮ ಮಾತೃಭೂಮಿಯಾದ ಹಿಂದೂಸ್ಥಾನವೂ ಈ
ಾಪದಲ್ಲಿ ಸಿಕ್ಕಿಕೊಂಡು ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ಪ್ರಯತ್ನಿಸುತ್ತಿದೆ.
ತಿ ಮನುಷ್ಯನ ತಿಳುವಳಿಕೆಯೂ ಮತ್ತು ದೃಷ್ಟಿಯೂ ಈ ಮಹತ್ಕಾರ್ಯಗಳ ಕಡೆ
ರುಗಿರುವಾಗ, ಇಂಥ ಸಮಾಜ ಸಂಘಟನೆಯ ಕಾರ್ಯಗಳಿಗೆ ಅವಕಾಶವೆಲ್ಲಿದೆ
ಂದು ಪ್ರಶ್ನಿಸುವುದುಂಟು. ಈಗಿನ ನಾಗರಿಕತೆಯಲ್ಲಿ ಇಡೀ ಪ್ರಪಂಚದ ಜೀವ
ಾನದ ಬೆಳವಣಿಗೆ ಮತ್ತು ಅಭಿವೃದ್ಧಿಯು ಸುರಕ್ಷಿತವಾಗಿ ಜರಗಬೇಕಾದರೆ ಪ್ರತಿ
ನುಷ್ಯನೂ ತನ್ನ ಹಕ್ಕುಬಾಧ್ಯತೆಗಳನ್ನು ಭದ್ರಪಡಿಸಿಕೊಂಡು ತನ್ನ ಯೋಗ್ಯತೆ
ುನ್ನು ಳಿಸಿಕೊಳ್ಳದಿದ್ದರೆ. ತಾನು ಮನುಷ್ಯವರ್ಗದಲ್ಲಿ ಒಬ್ಬನೆನ್ನಿಸಿಕೊಳ್ಳುವುದಿಲ್ಲ.
ಈ ರೀತಿ ನಿಲ್ಲಬೇಕಾದರೆ ಇದಕ್ಕೆ ತಕ್ಕ ವಾತಾವರಣವನ್ನು ಕಲ್ಪಿಸಿಕೊಂಡು ಯೋಗ್ಯ
ಾದ ಜೀವನವನ್ನು ಜೀವಿಸಿ ತಾನೂ ಉಳಿದು ಸಾಧ್ಯವಾದಷ್ಟು ಮಟ್ಟಿನ ಮಾನುಷ

ವರ್ಗದ ಇತರ ತನ್ನ ಸಹೋದರರೂ ಉಳಿಯುವಂತೆ ಮಾಡುವುದೇ ಪುಣ್ಯಜೀವನ
ನಾಗರಿಕ ಬೆಳವಣಿಗೆಯೆಂದರೆ ಪ್ರತಿ ಮನುಷ್ಯನೂ ತಿಳುವಳಿಕಸ್ಥನಾಗಬೇಕು; ಶಕ್ತ
ನಾಗಬೇಕು. ಒಂದು ಸಂಸಾರಸ್ಥಿತಿಗೆ ಬರಬೇಕು; ಅನೇಕ ಸಂಸಾರಗಳು ಸೇ
ಒಂದು ಸಮಾಜ. ಅನೇಕ ಸಮಾಜಗಳು ಸೇರಿ ಒಂದು ಜನಾಂಗ; ಅನೇಕ ಜನಾ
ಗಗಳು ಸೇರಿ ಒಂದು ಮಾನುಷವರ್ಗ. ಅಂದರೆ ತಿಳುವಳಿಕೆಯೂ ಶಕ್ತಿಯೂ ಒಬ್
ನಿಂದ ಆರಂಭವಾಗಿ ವಿಶ್ವವನ್ನು ವ್ಯಾಪಿಸಬೇಕು. "ತಳಕೆಳಕು" ಕಡೆಯಿಂದ ಅಂದ
ವಿಶ್ವದಿಂದ ಆರಂಭಿಸಿ ಒಬ್ಬ ವ್ಯಕ್ತಿಯಲ್ಲಿ ಕೊನೆಗಾಣಿಸುವುದು ಸ್ವಭಾವವೂ ಅಲ್ಲ
ಪ್ರಯೋಜನಕಾರಿಯೂ ಅಲ್ಲ. ಆದ್ದರಿಂದ ಎಂಟು ಲಕ್ಷ ಜನಸಂಖ್ಯೆಯ ವೀರಶೈವರ
ಒಂದಾಗಿ ಒಂದು ಸಂಘಟಣೆಯಲ್ಲಿ ಭಾಗಿಗಳಾಗಿ ಒಂದು ಶಕ್ತಿ ಎಂದರೆ ದೇಶದ ಉನ್ನ
ತಿಯಲ್ಲಿ ಭಾಗವಹಿಸಲು ಯೋಗ್ಯರಾಗುತ್ತಾರೆ. ಅಲ್ಲದೆ ಛಿದ್ರಛಿದ್ರವಾದರೆ ತಮಗೂ
ಪ್ರಯೋಜನವಿಲ್ಲ. ಮತ್ತೊಬ್ಬರಿಗೂ ಪ್ರಯೋಜನವಿಲ್ಲ; ದೇಶಕ್ಕೂ ಪ್ರಯೋಜನವಿಲ್ಲ
ಸಮಾಜವನ್ನು ಮರೆತುಬಿಡಿಯೆಂದು ಕೆಲವರು ಹೇಳುವುದುಂಟು. ಇದು ಸಾಧ್ಯವಿಲ್ಲ
ಇದು ಹಿಂದೂಸ್ಥಾನದಲ್ಲಿ ಸಾಧ್ಯವಿಲ್ಲ. ಒಂದೊಂದು ಗುಂಪಿನಲ್ಲಿ ಒಂದೊಂದ
ಕಟ್ಟಳೆ ಸಾವಿರಾರು ವರ್ಷಗಳಿಂದ ಚಿರಸ್ಥಾಯಿಯಾಗಿ ಬಂದು ನಿಂತು ಫಲಕಾ
ಯಾಗಿವೆ. ಈ ಶೀಲ, ಈ ಶಿಸ್ತು ಉಳಿಸಿಕೊಂಡು ದೇಶಸೇವೆ ಮಾಡುವುದು ಸು
ವಾದ ಮಾರ್ಗವಾಗಿದೆ. ವೀರಶೈವರಾದ ನಾವು ಈ ದೃಷ್ಟಿಯಿಂದ ಒಂದಾಗಿ ಕೆಲ
ಮಾಡುವುದು ಅತ್ಯವಶ್ಯಕವಾಗಿದೆ. ಅದರಲ್ಲೂ ಯಾವ ಮತ್ತೊಂದು ಗುಂಪಿಗೂ
ಲಭಿಸದಿರುವ ಸಮಾಜ ಸುಧಾರಣೆಯು ವೀರಶೈವರಲ್ಲಿ ಅನೇಕ ಶತಮಾನಗಳಿಂ
ಆಚರಣೆಯಲ್ಲಿ ಬಂದಿರುವುದರಿಂದ, ನಮ್ಮಲ್ಲಿ ಬಲವಾದ ಪರಸಹಾಯಕ್ಕೆ ಯೋಗ್ಯವಾ
ಸಂಘಟಣೆಯನ್ನು ಇಡೀ ಮೈಸೂರಿಗೆ ಕಲ್ಪಿಸುವುದು ಸಾಧ್ಯಸುಲಭವಾಗಿದೆ. ಅಲ್ಲ
ವೀರಶೈವರಲ್ಲಿ ಜೀವಿಸುವುದಕ್ಕೆ ಒಂದು ವಿಶೇಷವಾದ ಸ್ವಾತಂತ್ರ್ಯವಿದೆ. ನಮ್ಮದ
ಸ್ವತಂತ್ರ ಮತ, ಸ್ವತಂತ್ರ ಸಾಹಿತ್ಯ. ಹಿರಿದು ಕಿರಿದು ಎನ್ನದೆ ಎಲ್ಲಾ ಕಸಬುಗಳನ
ಮಾಡುತ್ತಿದ್ದ ಮಾಡುತ್ತಿರುವ ಸಮಾಜ. ದೊಡ್ಡ ಸಣ್ಣ ಜಮೀನ್ದಾರರಿದ್ದಾರೆ
ವಿಶೇಷವಾಗಿ ಜಮೀನು ಕೃಷಿಮಾಡುತ್ತಾರೆ. ವ್ಯಾಪಾರದಲ್ಲಿ ಮುಂದಾಳುಗಳಾ
ದ್ದಾರೆ. ಅಂದರೆ ಪ್ರಪಂಚದ ಯಾವ ಉದ್ಯೋಗವು ಇವರಿಗೆ ಬಾರದಿಲ್ಲ. ಗುರ
ವನ್ನೂ ಮತ್ತು ಮಠಗಳನ್ನೂ ಹುಡುಕಿಕೊಂಡು ಹೋಗುವಂತಿಲ್ಲ. ಮತ್ತಾ
ಸಮಾಜಕ್ಕೆ ಈ ಅನುಕೂಲತೆಗಳಿವೆ. ವಿದ್ಯಾಭ್ಯಾಸಕ್ಕೆ ಐದು ಲಕ್ಷಕ್ಕೆ ಮೇಲ್ಪಟ್ಟ
ಹಣವು ರಾಶಿಯಾಗಿದೆ. ಮೂವತ್ತಕ್ಕೆ ಮೇಲೆ ಆಹಾರ ವ್ಯಾಸಂಗಗಳಿಗೆ ಅನುಕೂ
ಪಡಿಸುವ ಸಂಸ್ಥೆಗಳಿವೆ. ಯಾವ ಸಮಾಜಕ್ಕೆ ಈ ಅನುಕೂಲವಿದೆ ? ಇನ್ನೂ ಹೆಚ್ಚು
ಸಂಭವವು ತೋರುತ್ತವೆ. ಪ್ರತಿವರ್ಷವೂ ಒಂದು ಎರಡು ಸಂಸ್ಥೆಗಳು ಸ್ಥಾಪಿತವ
ಗುತ್ತಲೇ ಇವೆ. ಈ ಅನುಕೂಲತೆಗಳೆಲ್ಲವೂ ಬೇರೆ ಬೇರೆಯಾಗಿ ಒಂದು ಶಿಸ್ತಿಗೆ ಒ

ತವಿರುವುದರಿಂದ ಸಮಾಜಕ್ಕೆ ಪೂರ್ತಿ ಫಲ ಫಲಿಸುತ್ತಿಲ್ಲ. ಮುಂದೆ ಈ ಎಲ್ಲಾ
ಶಗಳು ಕೂಲಂಕಷವಾಗಿ ಯೋಚಿಸಲ್ಪಟ್ಟು ಒಂದು ಸ್ಥಿರವಾದ ಸಂಘಟಣೆಯಾಗ
ಕಾಗಿವೆ. ಈ ಸಭೆಯ ಉದ್ದೇಶಗಳಲ್ಲಿ ಈ ಮೇಲೆ ವಿವರಿಸಿರುವ ಅಂಶಗಳು
ರಿವೆ. ವೀರಶೈವರ ಮುಂದಾಳುಗಳು ಈ ದಿನ ಸೇರಿ ಚರ್ಚಿಸಿ ನಿರ್ಧಾರಗಳನ್ನು
ಾಡುವವರಿದ್ದಾರೆ.

ಮಹಾಶಯರೆ, ಮೈಸೂರು ದೇಶದಲ್ಲಿ ನಮ್ಮ ಸ್ಥಿತಿಗಳನ್ನು ಯೋಚಿಸುವ ಸಂದ
ರ್ದಲ್ಲಿ ನಾವು ಯಾವ ಯಾವ ಪ್ರದೇಶದಲ್ಲಿ ಗಣ್ಯರಾಗಿರುತ್ತೇವೆಂಬುದನ್ನು ಪರೀಕ್ಷಿಸಿ
ೋಡಿದರೆ 50 ತಾಲ್ಲೂಕುಗಳಿಗೆ ಮೇಲ್ಪಟ್ಟ ಸ್ಥಳಗಳಲ್ಲಿ ವೀರಶೈವರ ಹಕ್ಕುಬಾಧ್ಯತೆ
ಳು ಹೆಚ್ಚಾಗಿರುವಂತೆ ಕಾಣಬರುತ್ತದೆ. ಈ ಸ್ಥಳಗಳ ವೀರಶೈವ ಮಹನೀಯರು
ಂದಾಗಿ ಸೇರಿ ದೇಶಸೇವೆಗೆ ಒಮ್ಮುಖರಾಗಬೇಕೆಂಬುದು ಈ ಸಭೆಯ ಮುಖ್ಯೋ
್ದೇಶ. ಪ್ರಮುಖರಾದ ನಾವು ಆಲೋಚನೆ ಮಾಡಿ ಒಂದು ನಿರ್ಧಾರಕ್ಕೆ ಬರುವುದು
ೇಲು. ಈ ಸಭೆಯ ಮುಂದೆ ಇದು ಬಂದಾಗ ಸರ್ವರೂ ಏಕಮನಸ್ಸಿನಿಂದ ಈ
ಲಹೆಯನ್ನು ಬಲಪಡಿಸುವಿರೆಂದು ನಂಬಿರುತ್ತೆ.

ಮುಖ್ಯವಾದ ಮಾತು ಒಂದಿದೆ. ಅದು ರಾಜಕೀಯ ವಿಷಯ. ಇದು ಹಿಂದೂ
ಸ್ಥಾನದಲ್ಲಿ ಎಲ್ಲೆಲ್ಲಿಯೂ ಗುಡುಗಾಡುತ್ತಿದೆ. ಬ್ರಿಟಿಷ್ ಇಂಡಿಯಾದ ರಾಜಕೀಯ
ಂಗತಿ ಬೇರೆ. ಅದರ ಮಾತು ಇಲ್ಲಿ ಅಪ್ರಕೃತ. ಸಂಸ್ಥಾನಗಳಲ್ಲಿನ ರಾಜಕೀಯ
ಂಗತಿಗಳಿಗೆ ನಾವು ಗಮನ ಕೊಡುವುದು ಅತ್ಯವಶ್ಯಕವಾಗಿದೆ. ಇದು ಒಬ್ಬರಿಗೆ
ೇಕು, ಮತ್ತೊಬ್ಬರಿಗೆ ಬೇಡ ಎನ್ನುವಂತಿಲ್ಲ. ಸರ್ವರ ಉಸರು ಇದು, ಸರ್ವರ ಜೀವ
ಇದು. ಮಾದರಿ ಸಂಸ್ಥಾನವೆಂದು ಹೆಸರುಗೊಂಡಿರುವ ನಮ್ಮ ಪ್ರಿಯ ಮೈಸೂರಿನಲ್ಲಿ
ಕುಡಿದ ನೀರು ಅಲ್ಲಾಡುವುದಿಲ್ಲ" ಎಂಬ ನಾಣ್ಣುಡಿಯನ್ನು ಸಾರ್ಥಕ್ಯಗೊಳಿಸಿರುವ
ನಮ್ಮ ಮೈಸೂರಿನಲ್ಲಿ, ಕೇಳಿದ್ದನ್ನು ಕೊಡುವ ನಮ್ಮನ್ನಾಳುವ ಮಹಾಸ್ವಾಮಿಯವರಿ
ುವ ನಮ್ಮ ಮೈಸೂರಿನಲ್ಲಿ, ಎಲ್ಲಾ ಜನತೆಯಲ್ಲಿಯೂ ಐಶ್ವರ್ಯವಂತ, ಬಡವ,
ಪಟ್ಟಣದವನು, ಹಳ್ಳಿಯವನು, ವಿದ್ಯಾವಂತನು, ಅವಿದ್ಯಾವಂತನು, ಸುಂದರನು,
ಕುರೂಪಿಯು, ಸರ್ಕಾರದ ನೌಕರನು, ಅಲ್ಲದವನು, ಮಡಿಬಟ್ಟೆ ತೊಟ್ಟಿರುವನು,
ಮೈಲಿಗೆ ಬಟ್ಟೆಯವನು, ಈ ಜಾತಿಯವನು, ಆ ಜಾತಿಯವನು ಎಂಬ ಯಾವ ಭೇದ
ವನ್ನು ಗಮನಿಸದೆ ಏಕಚಿತ್ತದಿಂದ ಎಲ್ಲರಲ್ಲಿಯೂ ಮಿಳಿತವಾಗಿ ಸವಿನುಡಿಯಿಂದ
ಸುಹೃದಯದಿಂದ ಕುಂದುಕೊರತೆಗಳನ್ನು ತಾಳ್ಮೆಯಿಂದ ಕೇಳಿ ಗ್ರಹಿಸಿ, ಅನುಕೂಲ
ಪಡಿಸಿಕೊಡುವ, ಬಾಲ್ಯದಿಂದಲೂ ರಾಜಕುಟುಂಬಗಳ ಸಹವಾಸದಲ್ಲಿದ್ದು 20 ವರ್ಷಕಾಲ
ಮಹಾಸ್ವಾಮಿಯವರ ಸಮ್ಮುಖದಲ್ಲ ಸೇವೆಮಾಡಿ 14 ವರ್ಷದವರಿಗೆ ರಾಜಸೇವೆ
ಪ್ರಜಾಸೇವೆ ಮಾಡಿ ದಣಿಯದೆ ಇರುವ ಸರ್ ಮಿರ್ಜಾರವರಂಥ ಮಂತ್ರಿವರ್ಯರುಳ್ಳ

ನಮ್ಮ ಮೈಸೂರಿನಲ್ಲಿ ಯಾವ ರಾಜಕೀಯ ಚಳುವಳಿ ಬೇಕು? ಯಾವ ಸ್ವಾ
ತ್ರ್ಯಕ್ಕೆ ಭಯವುಂಟು? ಈಗ ದಯಪಾಲಿಸಿರುವ ರಾಜಕೀಯ ಸುಧಾರಣೆಗ
ಒಳಾಂತರ್ಯವನ್ನು ಚರ್ಚಿಸುವುದು ಅನಾವಶ್ಯಕವಾಗಿದೆ. ಯಾವ ಸಂಸ್ಥಾ
ಜನರೂ ಕಣ್ತೆರಿಯದಿದ್ದ ಕಾಲದಲ್ಲಿಯೇ ನಮಗೆ ಅಪ್ರಾರ್ಥಿತವಾಗಿ ಸುಧಾರ
ಗಳನ್ನು ದಯಪಾಲಿಸುತ್ತಾ ಬಂದು ಒಂದು ಮೆಟ್ಟಲಿಂದ ಮತ್ತೊಂದು ಮೆಟ್ಟಲ
ಪ್ರಜೆಗಳನ್ನು ರಾಜ್ಯಾಡಳಿತದಲ್ಲಿ ಮೇಲಕ್ಕೆತ್ತುತ್ತಿರುವ ನಮ್ಮ ಮೈಸೂರಲ್ಲಿ
ಮತ್ತೊಂದು ಸಂಸ್ಥಾನವೆಲ್ಲಿ? ನಮ್ಮನ್ನಾಳುವ ಮಹಾಸ್ವಾಮಿಯವರ ವಿಶ್ವಾಸ, ಪ್ರ
ಗಳ ರಾಜಭಕ್ತಿ–ಎರಡೂ ಮಿಳಿತವಾಗಿ ಸುಖಾನುಭವದಲ್ಲಿರುವ ನಮ್ಮ ಮೈಸೂ
ಪುಣ್ಯಭೂಮಿ. ಈ ಸಭೆಯು ಒಮ್ಮನಸ್ಸಿನಿಂದ ಸುಧಾರಣೆಗಳನ್ನು ಅಂಗೀಕರ
ರಾಜಭಕ್ತಿಯನ್ನು ತೋರಿಸುವ ಇಡೀ ಮೈಸೂರು ವೀರಶೈವರ ಪರವಾಗಿ ಒ
ನಿರ್ಧಾರವನ್ನು ಹೊರಡಿಸುವುದು ಈ ದಿನದ ಕಾರ್ಯಗಳಲ್ಲಿ ಮೊದಲನೆಯದಾಗಿ
ವೀರಶೈವ ಸಮಾಜವೇ ಒಂದಾಗಿ ಇದನ್ನು ಸಮರ್ಥಿಸುವರೆಂಬ ನಂಬಿಕೆಯುಂಟ
ವೀರಶೈವರ ನಿತ್ಯದ ಉದ್ಯೋಗಗಳೂ, ಅವರ ಶಾಂತಿಸ್ವಭಾವವೂ, ಅವರ ಧರ್ಮಪ
ರಾಜಾಶ್ರಯಕ್ಕೆ ಅಧೀನವಾಗಿರುವಂಥ ರಾಜಕೀಯ ಸುಧಾರಣೆಗಳಿಂದ ಕಾಪಾಡ
ಡುವುದಕ್ಕಿರುವ ಅನುಕೂಲತೆಗಳೂ ಕ್ಷಣೇ ಕ್ಷಣೇ ಬದಲಾವಣೆಗೆ ಈಡಾಗಬಹುದ
ಸುಧಾರಣೆಗಳಿಂದ ದೊರೆಯಲಾರವೆಂಬುದನ್ನು ಸುಲಭವಾಗಿ ಪ್ರತಿಯೊಬ್ಬರೂ ತಿ
ಕೊಳ್ಳಬಹುದಾಗಿದೆ. ಮತ್ತೆ ಮತ್ತೆ ಒತ್ತಿ ಹೇಳಬೇಕಾಗಿಲ್ಲ. ನಾವು ನಮ್ಮ ಮನ
ವಾಚಾ ವೀರಶೈವ ಸಮಾಜದವರಲ್ಲಿ ಹೇಳುವುದೇನೆಂದರೆ, ಈ ನಮ್ಮ ಸಂದೇಶವ
ಪ್ರತಿಯೊಬ್ಬರೂ ಮನಸಮಾಡಿಕೊಂಡು ಎಲ್ಲಾ ಡಿಸ್ಟ್ರಿಕ್ಟುಗಳಲ್ಲಿಯೂ ಸಭೆಗಳ
ಒಂದಾದ ಮೇಲೆ ಒಂದರಂತೆ ಸೇರಿಸಿ ಈ ಠರಾವನ್ನು ಸಮರ್ಥಿಸುವ ಏರ್ಪಾ
ಮಾಡುವರೆಂದು ಮನಃಪೂರ್ತಿಯಾಗಿ ನಂಬಿರುತ್ತೆ.

ಶ್ರೀಮಾನ್ ಬಿ. ಎಸ್. ಪುಟ್ಟಸ್ವಾಮಿಯವರು ಈ ಕಾರ್ಯದಲ್ಲಿ ಕಂಕ
ಬದ್ಧರಾಗಿ ನಿಂತು ಅಹೋರಾತ್ರಿ ಇದಕ್ಕಾಗಿ ಶ್ರಮಿಸುತ್ತಿರುವರೆಂದು ತಿಳಿಸಲು ಹ
ವಾಗುತ್ತದೆ. ಈ ಮಹತ್ಕಾರ್ಯದಲ್ಲಿ ವೀರಶೈವ ಬಾಂಧವರೆಲ್ಲರೂ ಅವರಿಗೆ ಬೆಂಬ
ವಾಗಿ ನಿಂತು ಈ ದೊಡ್ಡ ಗೌರವಯುತವಾದ ಸಮಾಜದವರು ದೇಶಸೇವೆ
ರಾಜರ ಅನುಗ್ರಹವನ್ನು ಸಂಪಾದಿಸುವರೆಂದು ನಮ್ಮ ನಂಬಿಕೆಯುಂಟು. ಮ
ರಾಜಾಶ್ರಯದಿಂದಲೇ ಸುರಕ್ಷಿತವಾಗಬೇಕಾಗಿರುವ ಎಲ್ಲಾ ವೀರಶೈವ ಮಠಾಧಿ
ಗಳೂ ಈ ನಮ್ಮ ಸಂದೇಶವನ್ನು ತಮ್ಮದೆಂದು ಭಾವಿಸಿ ತಾವುಗಳು ಬೇರೆ ಬೇರೆಯಾ
ಸಂದೇಶಗಳನ್ನು ಹೊರಡಿಸಬೇಕೆಂದೂ ಆಶಿಸುತ್ತೇನೆ.

ಸರ್ ಮಿರ್ಜಾ ಇಸ್ಮಾಯಿಲ್‌ರವರು ತಮ್ಮ ಅನೇಕ ಕಾರ್ಯಗಳ ಮಧ್ಯೆ ನ



ಗುಂಡ್ಲುಪೇಟೆ ತಾಲ್ಲೂಕು ಕಬ್ಬಹಳ್ಳಿಯಲ್ಲಿ ದಿವಾನ್ ಸರ್ ಎಂ. ಮಿರ್ಜಾ ಇಸ್ಮಾಯಿಲ್‌ರವರ
ಸಮ್ಮುಖದಲ್ಲಿ ನಡೆದ ವೀರಶೈವ ಮಹಾಸಭೆಯ ಅಧ್ಯಕ್ಷ ಭಾಷಣ ಮಾಡುತ್ತಿರುವುದು

ಪ್ರಾರ್ಥನೆಯನ್ನು ಅಂಗೀಕರಿಸಿ ಈ ದಿನದ ಆರಂಭೋತ್ಸವವನ್ನು ನೆರವೇರಿಸಿದುದ
ಕ್ಕಾಗಿ ನಮ್ಮ ಪರವಾಗಿಯೂ, ಈ ಸಮ್ಮೇಳನದ ಸ್ವಾಗತ ಸಂಘದವರ ಪರವಾಗಿಯೂ
ಮೈಸೂರು ಸೀಮೆಯ ವೀರಶೈವರ ಪರವಾಗಿಯೂ ಸಂತೋಷವನ್ನು ಸೂಚಿಸುವುದಲ್ಲದೆ
ವೀರಶೈವ ಸಮಾಜದ ಕೃತಜ್ಞತೆಯನ್ನು ಈ ಮುಖಾಂತರ ಅರ್ಪಿಸಿರುತ್ತೆ.

ಈ ಸಮ್ಮೇಳನಕ್ಕೆ ದಯಮಾಡಿಸಿ ಇದಕ್ಕೆ ಯಶಸ್ಸು ದೊರೆಯುವಂತೆ ಮಾಡಿದ
ತಮ್ಮೆಲ್ಲರಿಗೂ ಸಮಾಜವು ಋಣಿಯಾಗಿರುತ್ತದೆ.

ನಮ್ಮನ್ನಾಳುವ ಮಹಾಸ್ವಾಮಿಯವರಾದ ಶ್ರೀ ನಾಲ್ವಡಿ ಕೃಷ್ಣರಾಜ ಭೂಪಾಲ
ರಿಗೂ, ಅವರ ಕುಟುಂಬವರ್ಗದವರಿಗೂ, ಅವರ ಆಳ್ವಿಕೆಗೂ ಶ್ರೇಯಸ್ಸುಂಟಾಗಲೆಂದು
ಹರಸಿ ಈ ನಮ್ಮ ಭಾಷಣವನ್ನು ಮುಗಿಸಲಾಗಿದೆ.



# ಅರ್ಧ ಶತಮಾನದಲ್ಲಿ!

—§—

ಜಗದ್ಗುರು ಶ್ರೀ ಶಿವರಾತ್ರಿಮಹಾಸ್ವಾಮಿಗಳವರು ಶ್ರೀ ಸುತ್ತೂರು ವೀ ಸಿಂಹಾಸನ ಮಠದ ಧರ್ಮಸೂತ್ರವನ್ನು ಹಿಡಿದು ಅರ್ಧ ಶತಮಾನ ತುಂಬಿತು ಹಸುಳೆಯಾಗಿದ್ದಾಗ ಆಶ್ರಮಾಧಿಕಾರವನ್ನು ಪಡೆದು ಪುಣ್ಯಶೀಲರಲ್ಲಿ ಧಾರ್ಮಿ ಶಿಕ್ಷಣ ಪಡೆದು ವಿಚಕ್ಷಣೆಯಿಂದಲೂ ಧರ್ಮದೃಷ್ಟಿಯಿಂದಲೂ ತುಂಬು ಜೀವನ ನಡೆ ಸಮಾಜದಲ್ಲಿ ನಿಷ್ಠೆ ಮತ್ತು ನವಚೈತನ್ಯ ತುಂಬಿ ಮಹಾನುಭಾವರೆನಿಸಿದರು. ಧರ್ಮ ಖಿಲವಾಗುತ್ತಿದ್ದಾಗ ವೀರಶೈವರಿಗೆ ಮಾರ್ಗದರ್ಶನ ನೀಡಿ ಮಹತ್ಕಾರ್ಯಗಳನ್ನು ನೆರವೇರಿಸಿ ಕೀರ್ತಿಪಡೆದರು. ಭಕ್ತ ಸಮುದಾಯದಲ್ಲಿ ಸಂಘಟನೆಯನ್ನು ಸಾಧಿ ಧಾರ್ಮಿಕ ಪ್ರವೃತ್ತಿಯನ್ನುಂಟುಮಾಡಿದರು. ವೀರಶೈವ ಸಮಾಜದ ಉನ್ನತಿ ಶ್ರಮಿಸಿದರು. ಪಕ್ಷಪಾತಿಗಳಾಗಿರದೆ ಮಾನವತೆಯ ಹಿತವನ್ನು ಸಾಧಿಸಲು ಉತ್ತ ಮಾರ್ಗದರ್ಶನ ನೀಡಿದರು. ಪಂಡಿತರು ಪಾಮರರೆಲ್ಲರು ಅಚ್ಚರಿಗೊಳ್ಳುವಂತ ಕಾರ್ಯನಿಷ್ಠೆ ವ್ಯವಹಾರ ಚಾತುರ್ಯ ಜಂಗಮಪ್ರೇಮ ಮುಂತಾದ ಸದ್ಗುಣಗ ಅವರಲ್ಲಿ ಮನೆಮಾಡಿಕೊಂಡುವು. ಆದುದರಿಂದ ಮೈಸೂರು ಜಿಲ್ಲೆಯ ಜನ ಮಹಾ ಸ್ವಾಮಿಗಳವರ ಸಿಂಹಾಸನಾರೋಹಣದ ಸ್ವರ್ಣಮಹೋತ್ಸವವನ್ನು ಅತಿ ವಿಜೃಂಭ ಯಿಂದ ನೆರವೇರಿಸಿ ತನ್ನ ಭಕ್ತಿಯನ್ನರ್ಪಿಸಲು ಏರ್ಪಡಿಸಿತು. ಅಂದಿನ ದಿವಾ ರಾಗಿದ್ದ ಶ್ರೀ ಎನ್. ಮಾಧವರಾಯರ ಅಧ್ಯಕ್ಷತೆಯಲ್ಲಿ ಅತ್ಯಂತ ವಿಜೃಂಭಣೆ ಸಮಾರಂಭವು ಮೈಸೂರಿನಲ್ಲಿ ನಡೆಯಿತು. ಈ ಸಮಾರಂಭದಲ್ಲಿ ಉನ್ನತ ರಾಜಕಾ ಣಿಗಳೂ ಸುಧಾರಕರೂ ಮಠಾಧೀಶರೂ, ವಿದ್ವನ್ಮಣಿಗಳೂ, ಆಡಳಿತ ತಜ್ಞರೂ ಭಾ ವಹಿಸಿ ತಮ್ಮ ಕೃತಜ್ಞತೆಯನ್ನು ಸಮರ್ಪಿಸಿದರು. ನಾಗರೀಕರ ಪರವಾಗಿ ಪೂ ಶ್ರೀಗಳವರಿಗೆ ರಜತಕರಂಡದಲ್ಲಿ ಬಿನ್ನವತ್ತಳೆಯನ್ನರ್ಪಿಸಿ ಅವರ ಸೇವಾ ಪ್ರಶ ಯನ್ನು ವ್ಯಕ್ತಪಡಿಸಲಾಯಿತು. ಸಂಸ್ಥಾನದ ಗಣ್ಯರನೇಕರು ಭಾಷಣಮಾ ಶ್ರೀಗಳವರ ವ್ಯಕ್ತಿತ್ವವನ್ನು ಮುಕ್ತಕಂಠದಿಂದ ಪ್ರಶಂಸಿಸಿದರು.

ಜನತೆಯ ಕೃತಜ್ಞತೆಯನ್ನು ಸ್ಮರಿಸುತ್ತಾ ಜಗದ್ಗುರುಗಳವರು ಮಹಾಸಂದೇ ವನ್ನು ದಯಪಾಲಿಸಿ ಆಶೀರ್ವದಿಸಿದರು.

———

# ...ಾನವನನ್ನು ಮಾನವನನಾಗಿಸುವ ಅಂತಶ್ಶಕ್ತಿಯೇ ಗುರುತ್ವ

—೦೦—

**...ೀ ಸುತ್ತೂರು ವೀರಸಿಂಹಾಸನ ಮಠದ ಪಟ್ಟದ ಶಿವರಾತ್ರಿ ಸ್ವಾಮಿಗಳವರು ...ತಮ್ಮ ಸ್ವರ್ಣಮಹೋತ್ಸವ ಸಮಯದಲ್ಲಿ ಮೈಸೂರು ಸಂಸ್ಥಾನದ ದಿವಾನ ...ರಾದ ಪ್ರಧಾನಶಿರೋಮಣಿ ಶ್ರೀಮಾನ್ ಎನ್. ಮಾಧವರಾಯರು, ಬಿ.ಎ. ಬಿ.ಎಲ್., ಸಿ.ಐ.ಇ., ಅವರ ಸಮಕ್ಷಮದಲ್ಲಿ ಮೈಸೂರು ನಗರದ ರಂಗಚಾರ್ಲು ಪುರಭವನದಲ್ಲಿ ಅಪ್ಪಣೆಕೊಡಿಸಿದ ಭಾಷಣ**

(30ನೆಯ ಸೆಪ್ಟೆಂಬರ್ 1944)

ವೀರ ಸಿಂಹಾಸನಾಸೀನಃ ಶಿವರಾತ್ರೀಶ್ವರೋ ವಿಭುಃ ।
ದದ್ಯಾತ್ ವಿಶ್ವಸ್ಯ ಜಗತಃ ಶಾಂತಿ ಭಿಕ್ಷಾಂ ಕೃಪಾನಿಧಿಃ ॥

ಮಾನ್ಯರಾದ ಶ್ರೀಮಾನ್ ದಿವಾನ್ ಸಾಹೇಬರವರೇ. ಪೀಠಾಭಿಮಾನಿಗಳಾದ ...ೀರಶೈವ ಮತಬಾಂಧವರೇ ಮತ್ತು ಮಹಾಶಯರೇ,

ಈ ದಿನ ವಿಶೇಷ ಶ್ರದ್ಧಾ ಭಕ್ತಿಗಳಿಂದ ಪೀಠಾಭಿಮಾನಿಗಳಾದ ಶಿಷ್ಯಮಂಡಲಿ ...ರುವರು ಏರ್ಪಡಿಸಿರುವ ಸಮಾರಂಭವು ಪೀಠದಲ್ಲಿ ಅವರಿಗಿರುವ ಅಮಿತವಾದ ಭಕ್ತ್ಯು... ...ಸ್ನಹಗಳನ್ನು ವ್ಯಕ್ತಗೊಳಿಸುತ್ತದೆ. ನಾವು ಪೀಠಾರೋಹಣ ಮಾಡಿದಂದಿನಿಂದ ...ೀಮಠದಲ್ಲಿ ಮತ್ತು ಮಠದ ಆಶ್ರಯದಲ್ಲಿ ನಡೆದಿರುವ ಕಾರ್ಯಕಲಾಪಗಳ ವಿಷಯ ...ಲ್ಲಿ ತೋರ್ಪಡಿಸಿರುವ ಪ್ರೀತಿ ವಿಶ್ವಾಸಗಳು ತಮ್ಮ ಸಹೃದಯತೆಯ ಕುರುಹೆಂದೇ ...ಾವಿಸುತ್ತೇವೆ. ಶ್ರೀಮಠದ ಎಲ್ಲಾ ಅಭಿವೃದ್ಧಿಯೂ ನಮ್ಮನ್ನಾಳುವ ಶ್ರೀಮನ್ಮ... ...ಾರಾಜರ ಘನ ಸರ್ಕಾರದವರ ಮತ್ತು ಸಮಸ್ತ ಶಿಷ್ಯ ಸಮುದಾಯದ ಸಹಕಾರದ ...ತ್ಫಲವಲ್ಲದೆ ಬೇರೆಯಲ್ಲ.

ಗುರುಪೀಠಾಧಿಕಾರವು ಅಸಿಧಾರಾವ್ರತದಂತೆ ದುರ್ಧರವಾದುದು. ಅಪಾರವಾದ ಈ ಮಹಾಸಾಗರದಲ್ಲಿಳಿದು ಪಾರಗಾಣಬೇಕಾದರೆ ಸುಸಂಸ್ಕಾರವೂ ಹಿರಿಯ ಗುರುವ ...ರ್ಯರ ಆಶೀರ್ವಾದವೂ ಅವಶ್ಯವಾಗಿರಬೇಕು. ನಮ್ಮ ಗುರುಪೀಠದ ಪ್ರಾಚೀನತೆ ...ುತ್ತು ಸ್ಥಾನಮಾನಗಳ ...ಂದಲ್ಲಿ ತಾವು ಯಥಾರ್ಥವಾದ ಅಂಶಗಳನ್ನು ಉಲ್ಲೇಖಿ ...ಿರುತ್ತೀರಿ. ಇಂತಹ ಮಹಸೀಯವಾದ ಪೀಠದ ಗೌರವವನ್ನು ಕಾಯ್ದುಕೊಂಡು ...ಬರುವ ಹೊಣೆಗಾರಿಕೆಯು ದೊಡ್ಡದಾದರೂ ನಾವು ಶ್ರೀ ಗುರುಗಳ ದಿವ್ಯಾಶೀರ್ವಾದ ...ಬಲದಿಂದಲೂ ಮತ್ತು ತಮ್ಮ ಸಹಕಾರ ಸೌಹಾರ್ದತೆಗಳ ಬೆಂಬಲದಿಂದಲೂ ಈ ...ೆಲಸದಲ್ಲಿ ತೊಡಗಿರುತ್ತೇವೆ.

ತನ್ನ ನೆರೆಹೊರೆಯವರ ಸುಖದುಃಖಗಳನ್ನು ತನ್ನದೆಂದು ತಿಳಿಯುವುದೆ ಆದರ್ಶ ನಾಗರಿಕತೆಯೆಂದು ಸ್ವಾಮಿ ವಿವೇಕಾನಂದರು ಅಪ್ಪಣೆ ಕೊಟ್ಟಿರುತ್ತಾರೆ ಈ ರೀತಿಯಾದ ನಾಗರಿಕತೆಯನ್ನು ಗಳಿಸುವುದಕ್ಕೆ ಪ್ರತಿಯೊಬ್ಬರೂ ಪ್ರಯತ್ನಿ ಬೇಕಾಗಿದೆ.

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ |
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ||

ಎಂಬ ವಚನಾನುಸಾರವಾಗಿ ನಮ್ಮ ಎಲ್ಲ ಕೆಲಸಗಳನ್ನೂ ಶಿವಾರ್ಪಿತ ಬುದ್ಧಿ ಯಿಂದ ಎಸಗಿ ಅನಾಸಕ್ತಿಯಿಂದ ವರ್ತಿಸುವುದಾದರೆ ನೀರಿನಲ್ಲಿ ಅದ್ದಿದ ತಾವರೆಯ ಎಲೆಯಂತೆ ನಮಗೆ ಪಾಪ ಲೇಪವಾಗದು. ಆದುದರಿಂದ ನಾವು ಅನಾಸಕ್ತರಾ ಕರ್ತವ್ಯನಿಷ್ಠೆಯಿಂದ ವರ್ತಿಸುವುದಾದರೆ ನಮ್ಮ ನಾಡು ಸ್ವಾತಂತ್ರ್ಯದ ಹೊಲಬನು ಅಚಿರದಲ್ಲಿಯೇ ಮುಟ್ಟುವುದರಲ್ಲಿ ಸಂದೇಹವಿಲ್ಲ.

ಜನತೆಯ ಅಜ್ಞಾನವೆಂಬ ಕಾರ್ಗತ್ತಲೆಯನ್ನು ತಮ್ಮ ದಿವ್ಯ ತೇಜಸ್ಸಿನಿಂ ತೊಡೆದು ಕುಮಾರ್ಗದಿಂದ ಸನ್ಮಾರ್ಗದ ಕಡೆಗೂ ಕತ್ತಲಿನಿಂದ ಬೆಳಕಿನಕಡೆಗ ಮರ್ತ್ಯತ್ವದಿಂದ ಅಮೃತತ್ವದಕಡೆಗೂ ಒಯ್ದು ಮಾನವನನ್ನು ಮಾನವನನ್ನಾ ಮಾಡುವ ಅಂತಶ್ಶಕ್ತಿಯೇ ಗುರುತ್ವಾಧಿಕಾರವನ್ನು ಪಾರಗಾಣಿಸುವ ಸುಲಭ ಸಾಧನ

ವೀರಶೈವ ಧರ್ಮವು ಇಂತಹ ದಿವ್ಯಾದರ್ಶಗಳ ಹಿನ್ನೆಲೆಯ ಮೇಲೆ ಸ್ಥಾಪಿ ವಾದುದೆಂಬುದು ತಮಗೆ ವೇದ್ಯವಿದೆ. ಇದು ಶ್ರೀ ರೇಣುಕಾದಿ ಆಚಾರ್ಯರ ಮತ್ತು ಬಸವಾದಿ ಶರಣರ ದಿವ್ಯೋಪದೇಶದ ರಸಾಯನ. ಇದರಲ್ಲಿ ಸರ್ವಧರ್ಮಗಳ ಸಾ ಸರ್ವಸ್ವವೂ ಮೂರ್ತಿಮತ್ತಾಗಿದೆ.

"ಆರೇನೆಂದರೂ ಓರಂತಿರ್ಪುದೇ ಸಮತೆ, ಆರು ಜರೆದರೂ ಅವರೆನ್ನ ಮನ ಕಾಳಿಕೆಯ ಕಳೆದರೆಂಬುದೇ ಸಮತೆ, ಆರು ಸ್ತೋತ್ರ ಮಾಡಿದರೂ ಅವರೆನ್ನ ಜನ್ಮ ಹಗೆಗಳೆಂಬುದೇ ಸಮತೆ; ಇಂತಿದು ಗುರುಕಾರುಣ್ಯ"

ಎಂಬ ಶಿವಶರಣರ ಸಮತೆಯು ಎಷ್ಟು ಉತ್ಕೃಷ್ಟವಾದುದೆಂಬುದು ಇದರಿಂ ಸ್ಪಷ್ಟವಾಗಿದೆ. ಇಂತಹ ದಿವ್ಯಾದರ್ಶನಗಳನ್ನು ನಮ್ಮ ಜೀವನಕ್ಕೆ ಅಳವಡಿಸಿಕೊಂ ಜೀವನಮಾರ್ಗವನ್ನು ಪವಿತ್ರವಾಗಿ ಮಾಡಿ ಸಮತೆ, ಸೌಹಾರ್ದ ಸೌಶೀಲ್ಯಗಳನ ಗಳಿಸಿ ವಿಶ್ವದ ಸತ್ಪ್ರಜೆಯಾಗುವುದೇ ಪ್ರತಿಯೊಬ್ಬನ ಮುಖ್ಯ ಧರ್ಮ.

ಈ ಮಾತನ್ನು ನಮ್ಮ ವಿದ್ಯಾರ್ಥಿವೃಂದವು ಹೆಚ್ಚಾಗಿ ಗಮನಿಸಬೇಕೆಂಬು

ಉದ್ದೇಶ. ಮುಂದಿನ ಪ್ರಜೆಗಳೇ ಇಂದಿನ ವಿದ್ಯಾರ್ಥಿಗಳಾದುದರಿಂದ ಅವರು ದ ಆಗು ಹೋಗುಗಳಿಗೆ ಹೊಣೆಗಾರರು. ವಿಶ್ವ ಸಾಹಿತ್ಯದ ಅಂತಸ್ಸತ್ವವನ್ನು ಸಿಕೊಂಡು ನಮ್ಮ ಸುಸಂಸ್ಕೃತಿಯನ್ನು ಸಂರಕ್ಷಿಸುವ ಹೊಣೆಗಾರಿಕೆಯು ಅವರದು. ಯುದು ಹೊಸಮುಗಳನ್ನು ತೂಗಿ ಒರೆ ಹಚ್ಚುವ ವಿಮರ್ಶನ ಶಕ್ತಿಯನ್ನು ಅವರು ಯುಬೇಕಾಗಿದೆ. ಹಳೆಯುದೆಲ್ಲವೂ ಒಳ್ಳೆಯುದೆಂಬ ಅಂಧ ವಿಶ್ವಾಸವಿಲ್ಲದಿರುವುದರ ತೆಗೆ ಹೊಸದು ಅಥವ ಹೊರಗಡೆಯಿಂದ ಬಂದುದೆಲ್ಲವೂ ದೈವದತ್ತವಾದುದೆಂಬ ಮಾನವೂ ಕೆಟ್ಟುದೇ. ಆದುದರಿಂದ ನಮ್ಮ ವಿದ್ಯಾರ್ಥಿಗಳು ಭಾರತೀಯ ಸಂಸ್ಕೃತಿ ಲ್ಲಿನ ಉದಾತ್ತತೆಯನ್ನು ಮನಗಂಡು ಅದರ ಪರಿಪೋಷಕರಾಗಬೇಕು. ವಿಶ್ವ ಹಿತ್ಯೋದ್ಯಾನದಲ್ಲಿನ ದಿವ್ಯ ಕುಸುಮಗಳ ಮಧು ಸಂಗ್ರಹಣ ಮಾಡಿ ಮುಂದಿನ ಷ್ಟ್ರ ನಿರ್ಮಾಣಮಾಡುವ ಆದರ್ಶವನ್ನು ಮುಂದಿಟ್ಟುಕೊಂಡು ಅವರು ಅಭ್ಯಾಸದಲ್ಲಿ ಡಗಬೇಕು.

ಭರತಖಂಡದಲ್ಲಿ ಸ್ಥಾಪಿತವಾದ ಮಠಗಳು ಮಾಡಿದುದು ಇದೇ ಧ್ಯೇಯಸಾಧನೆ ನ್ನು. ಈ ಉದ್ದೇಶಗಳನ್ನು ಕಾರ್ಯರೂಪದಲ್ಲಿ ತರುವುದೇ ಗುರುಪೀಠಾಧಿಕಾರದ ರಿ. ನಮ್ಮ ಮಠದ ಆಶ್ರಯದಲ್ಲಿ ಈ ಉದ್ಯಮಗಳ ಸಾಧನೆಯು ನಡೆದಿದ್ದರೆ ಆದು ಉದ್ದೇಶದಿಂದ ಮಾತ್ರವಲ್ಲದೆ ಬೇರೆಯಲ್ಲ. ಮಾದರಿಯ ರಾಜ್ಯವೆನಿಸಿದ ನಮ್ಮ ನ ಸರ್ಕಾರದ ಆಶ್ರಯದಲ್ಲಿ ನಮ್ಮ ಮುಂದಿನ ಪೀಠಾಧಿಪತಿಗಳೂ ಈ ಧ್ಯೇಯ ಧಕರಾಗಿ ಮಠದ ವರಮಾನವನ್ನು ಇತೋಪ್ಯತಿಶಯವಾಗಿ ಅಭಿವೃದ್ಧಿಪಡಿಸಿ ಂಡು ಹೆಚ್ಚು ಹೆಚ್ಚಾಗಿ ಜನೋಪಕಾರವಾಗುವಂತೆ ಶ್ರಮಿಸುವರೆಂದು ಸಂಪೂರ್ಣ ಗಿ ನಂಬಿದ್ದೇವೆ.

ತಾವುಗಳು ಇಷ್ಟು ಹೊತ್ತಾದರೂ ತಮ್ಮ ಅನೇಕ ಮಹತ್ವದ ಕಾರ್ಯಗಳನ್ನು ದಿಗಿಟ್ಟು ಈ ಸಮಾರಂಭದಲ್ಲಿ ಭಾಗವಹಿಸಿ ವಿಶ್ವಾಸ ತೋರಿದುದಕ್ಕಾಗಿ ತಮಗೆ ಗನಂತನು ಆಯುರಾರೋಗ್ಯಾದಿ ಸನ್ಮಂಗಲಗಳನ್ನಿತ್ತು ಕಾಪಾಡಲೆಂದೂ ವಿಶ್ವ ವ್ಯಾಪಿಯಾದ ಯುದ್ಧವು ಅಚಿರದಲ್ಲಿಯೇ ಕೊನೆಗಂಡು ವಿಶ್ವಶಾಂತಿಯೊದಗಲೆಂದೂ ಪ್ರಾರ್ಥಿಸಿ ನಮ್ಮನ್ನಾಳುವ ಶ್ರೀಮನ್ಮಹಾರಾಜರವರಿಗೂ ಅವರ ಘನಸರ್ಕಾರದ ಎಲ್ಲಾ ಧಿಕಾರಿ ವರ್ಗಕ್ಕೂ ಮತ್ತು ಸಮಸ್ತ ಪ್ರಜಾಕೋಟಿಗೂ ಅನಂತಾನಂತ ಸೌಭಾಗ್ಯ ಸಂಪದೆಗಳನ್ನೀಯಲೆಂದು ಶ್ರೀ ಶಿವರಾತ್ರೀಶ್ವರನನ್ನು ಪ್ರಾರ್ಥಿಸುತ್ತೇವೆ.

ಸರ್ವೇ ಭವಂತು ಸುಖಿನಃ ಸರ್ವೇ ಸಂತು ನಿರಾಮಯಾಃ ।
ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿದ್ದುಃಖಭಾಗ್ ಭವೇತ್ ॥
ಓಂ ಶಾಂತಿ ಶ್ಶಾಂತಿ ಶ್ಶಾಂತಿಃ

———

# ಪರಧರ್ಮದಲ್ಲಿ ಸಹಾನುಭೂತಿಯಿಂದಿರುವುದರಿಂದಲೇ ಆತ್ಮಕಲ್ಯಾಣ

**ಶ್ರೀ ಸುತ್ತೂರು ವೀರಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು ದಕ್ಷಿಣ ಕನ್ನಡ ಜಿಲ್ಲೆ ಧರ್ಮಸ್ಥಳದಲ್ಲಿ 23-11-19 ರಲ್ಲಿ ಸಮಾವೇಶವಾಗಿದ್ದ ಸರ್ವಧರ್ಮ ಸಮ್ಮೇಳನದಲ್ಲಿ ಅಪ್ಪಣೆಕೊಡಿಸಿದ ಅಧ್ಯಕ್ಷ ಭಾಷಣ**

—~~—

ಧರ್ಮಾತ್ಮರಾದ ಶ್ರೀ ಮಂಜಯ್ಯ ಹೆಗ್ಗಡೆಯವರೆ, ಸರ್ ಮಿರ್ಜಾರವ ವಿವಿಧ ಧರ್ಮಪ್ರತಿನಿಧಿಗಳಾದ ಪಂಡಿತೋತ್ತಮರೆ, ಮಹಿಳೆಯರೆ, ಮಹ ಮಹನೀಯರೇ,

ಭಗವಂತನಾದ ಶ್ರೀ ಮಂಜುನಾಥಸ್ವಾಮಿಯ ದಿವ್ಯ ಸಾನ್ನಿಧ್ಯದಲ್ಲಿ ನೆರೆದಿ ಈ ಮಹಾಸಮ್ಮೇಳನದಲ್ಲಿ ಭಾಗವಹಿಸುವ ಸುಯೋಗವನ್ನು ನಮಗೆ ದೊರಕಿಸಿ ಕೊ ರುವುದಕ್ಕಾಗಿ ತಮಗೆ ತುಂಬ ಕೃತಜ್ಞರಾಗಿದ್ದೇವೆ. ಪರಮ ಸಾತ್ವಿಕ ಮನೋವೃ ಯವರೂ ಸತ್ಕಾರ್ಯರೂ ಆದ ಶ್ರೀ ಮಂಜಯ್ಯ ಹೆಗ್ಗಡೆಯವರು ಇಲ್ಲಿ ನಮ್ಮೆಲ್ಲರನ ಬರಮಾಡಿಕೊಂಡು ವಿವಿಧ ಧರ್ಮಗಳ ಸ್ವರೂಪವನ್ನು ಮಾಡಿಕೊಡುವುದರ ಮೂಲ ನಮ್ಮನ್ನು ಚಿರಋಣಿಗಳನ್ನಾಗಿ ಮಾಡಿರುವರೆಂದು ಬೇರೆ ಹೇಳಬೇಕಾಗಿಲ್ಲ.

“**ಧ್ರಿಯತೆ ಅನೇನೇತಿ ಧರ್ಮಃ**” ಎಂಬ ನಿರ್ವಚನವನ್ನು ಅನುಸ ಲೋಕವು ಧರ್ಮದ ಆಧಾರದ ಮೇಲೆ ನಿಂತಿದೆ. ಯಾವುದರಿಂದ ಮಾನವನಿ ಅಭ್ಯುದಯ ನಿಶ್ಶ್ರೇಯಸ್ಸುಗಳು ಲಭ್ಯವಾಗುವವೊ ಅದು ಧರ್ಮ. ಉದಾತ್ತವಾ ಬಗೆಯಲ್ಲಿ ಐಹಿಕ ಜೀವನವನ್ನು ನಡೆಸಿ ಪರಮಾರ್ಥವನ್ನು ಸಾಧಿಸುವುದೇ ಮಾನ ಜೀವನದ ಗುರಿ. “ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ” ಎಂಬ ಬಸವ ನವರ ಅಮೃತವಾಣಿ ಇದನ್ನೇ ಸಮರ್ಥಿಸುತ್ತದೆ. ಆದರೂ ದೇಶ ಕಾಲ ಸಂದರ್ಭ ಗಳಿಗೆ ಅನುಸಾರವಾಗಿ ಅಂದಂದಿಗೆ ಅವತರಿಸಿದ ಆಚಾರ್ಯರು ಸರ್ವಜನಹಿತ ವಾದ ಧರ್ಮ ತತ್ತ್ವಗಳನ್ನು ಉಪದೇಶಿಸಿ ಅಮರರಾಗಿದ್ದಾರೆ. ಮುಂದೆ ಅ ಅನುಯಾಯಿಗಳು ಆ ಮೂಲತತ್ತ್ವಗಳ ಆಧಾರದ ಮೇಲೆ ಪಾರಿಭಾಷಿಕ ಅ ಗಳನ್ನು ಸ್ಥಿರಪಡಿಸಿ ವಿವಿಧ ಮತಗಳಿಗೆ ಬುನಾದಿಹಾಕಿದರು. ಪ್ರತಿಯೊಬ್ಬ ಆಚಾ ರ್ಯರೂ ತಮಗೆ ಹಿಂದೆ ಇದ್ದ ಮತಗಳಲ್ಲಿನ ಲೋಪದೋಷಗಳನ್ನು ಸರಿಪಡಿಸಿ ಸವ ಸಮ್ಮತವಾದ ಸಿದ್ಧಾಂತವನ್ನು ಸ್ಥಾಪಿಸಲು ಪ್ರಯತ್ನಿಸಿದರು. ಆದರೆ ಮುನ್ನ

ರ ಮತಗಳೇ ಒಂದೊಂದು ಪ್ರತ್ಯೇಕ ಪಂಗಡವಾಗಿ ಏರ್ಪಟ್ಟು ಜಗತ್ತಿನ ಮತಗಳ ತ್ಯೆಯನ್ನು ಹೆಚ್ಚಿಸಿದವು. "**ಏಕಂ ಸತ್ ವಿಪ್ರಾಃ ಬಹುಧಾ ವದಂತಿ**" ಎಂಬ ದವಾಣಿ ಭಗವಂತನ ಏಕತ್ವವನ್ನು ಸಾರಿತಾದರೂ ದೇವರ ಬಗ್ಗೆ ಜನರಲ್ಲಿ ನಡೆದ ತ್ಞಾಸೆ ಎಷ್ಟು ? ಹೋರಾಟವೆಷ್ಟು ?

"ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ, ಅನ್ಯರಿಗೆ ಅಸಹ್ಯ
ಪಡಬೇಡ, ತನ್ನ ಬಣ್ಣಿಸಬೇಡ, ಇದಿರಹಳಿಯಲುಬೇಡ, ಇದೇ
ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ"

ಂಬ ನೈತಿಕ ಧರ್ಮ ಯಾರಿಗೆ ಬೇಡ ?

ಧೃತಿಃ ಕ್ಷಮಾ ದಮೋಽಸ್ತೇಯಃ ಶೌಚಮಿಂದ್ರಿಯನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧಃ ದಶಕಂ ಧರ್ಮಲಕ್ಷಣಮ್ ॥
(ಮನು 6-92)

ಎಂಬ ಮನು ಉಕ್ತಿಯೂ ಈ ನೀತಿಯನ್ನೇ ಧರ್ಮವೆಂದು ಸಾರಿದೆ. ಸರ್ವ ನಹಿತಕರವಾದ ಇಂಥ ಉದಾತ್ತ ದಿವ್ಯತತ್ತ್ವಗಳು ಎಲ್ಲ ಮತಗಳಲ್ಲಿಯೂ ಅಡಗಿವೆ. ವುಗಳನ್ನು ಅರಿಯದಿರುವುದರಿಂದಲೇ ಜಗತ್ತಿನಲ್ಲಿ ಮತಾಂಧತೆಯು ಹೆಚ್ಚಿ ಗೊಂದ ಕ್ಕೆ ಕಾರಣವಾಯಿತು. ಈ ಅನರ್ಥಗಳು ಅಳಿಯಬೇಕಾದರೆ ಎಲ್ಲ ಧರ್ಮಾನು ಯಾಯಿಗಳೂ ಆಗಾಗ್ಗೆ ಒಂದೆಡೆ ಸೇರಿ ಪರಸ್ಪರ ವಿಚಾರವಿನಿಮಯಮಾಡಿಕೊಂಡು ರ್ಮರಹಸ್ಯಗಳನ್ನು ಅರಿತು ಅನುಷ್ಠಾನಕ್ಕೆ ತೊಡಗಬೇಕು. ಸಮನ್ವಯವೇ ಭಾರತ ಸಂಸ್ಕೃತಿಯ ಮುಖ್ಯಲಕ್ಷಣ. ಅನೇಕ ಶತಮಾನಗಳಿಂದ ಭಾರತದಲ್ಲಿ ವಿವಿಧ ಮತ ಗಳು ಸೌಹಾರ್ದತೆಯನ್ನು ಬೆಳೆಸಿಕೊಂಡು ಬಂದಿವೆ. ಹಿಂದೆ ಮತಗಳಲ್ಲಿ ಉಂಟಾ ಗುತ್ತಿದ್ದ ಅಂತಃಕಲಹಗಳನ್ನು ನಿವಾರಿಸಲು ಅಂದಿನ ಧರ್ಮಪ್ರಭುಗಳು ಪ್ರಯತ್ನಿಸಿ ರುವ ಅಂಶ ಶಿಲಾಶಾಸನಗಳಲ್ಲಿ ಉಲ್ಲಿಖಿತವಾಗಿದೆ. ಭಾರತ ಸಂಸ್ಕೃತಿಯ ವೈಶಿಷ್ಟ್ಯ ವನ್ನು ಒಂದು ಕಿತ್ತಳೆಹಣ್ಣಿಗೆ ಹೋಲಿಸಬಹುದು. ಒಂದೇ ಹಣ್ಣಿನಲ್ಲಿರುವ ತೊಳೆಗಳು ಬೇರೆಬೇರೆಯಾಗಿದ್ದರೂ ಅವೆಲ್ಲವುಗಳ ರಹಸ್ಯ ಒಂದೇ ಮಾಧುರ್ಯವನ್ನು ಹೇಗೆ ಒಸರುತ್ತವೆಯೋ ಅದರಂತೆ ಒಂದೇ ಮಾನವ ಸಂಸ್ಕೃತಿಗೆ ಸೇರಿದ ವಿವಿಧ ಮತಗಳು ವೈವಿಧ್ಯವನ್ನು ಪಡೆದಿದ್ದರೂ ಅವುಗಳ ಸಾರಭೂತವಾದ ಪರತತ್ತ್ವಸಾಧನೆಯ ಗುರಿ ಯೊಂದು. ಆದ್ದರಿಂದಲೇ ಭಾರತದಲ್ಲಿನ ವೈದಿಕ, ಜೈನ, ಬೌದ್ಧ, ಜೊರಾಷ್ಟ್ರ, ಇಸ್ಲಾಂ, ಕ್ರೈಸ್ತ ಮುಂತಾದ ಎಲ್ಲ ಮತಗಳಲ್ಲಿಯೂ ಆತ್ಮವಿಕಾಸದ ಪ್ರಯತ್ನ ನಡೆದಿದೆ. ಹಾದಿಗಳು ಬೇರೆ ಬೇರೆ ಕಂಡರೂ ಗಂತವ್ಯವೊಂದೇ ಎಂಬುದನ್ನು ನಾವು ಮನಗಾಣಬೇಕು.

ಪ್ರಕೃತ ಈ ಧರ್ಮ ಸಮ್ಮೇಳನದಲ್ಲಿ ಭಾಷಣಕ್ಕಾಗಿ ಮಂಡಿಸಿರುವ ಚಿದಚಿತ್

ವಸ್ತುಗಳ ಅಸ್ತಿತ್ವ ಮತ್ತು ಪುಣ್ಯಪಾಪಗಳ ಸ್ವರೂಪ ನಿರೂಪಣವೆಂಬ ವಿಷಯ
ಬಗ್ಗೆ ಒಂದೆರಡು ಮಾತುಗಳನ್ನು ಹೇಳುವುದು ಅವಶ್ಯವಿದೆ. ಇದು ತತ್ತ್ವ ಶಾಸ್ತ್ರ
ಅತ್ಯಂತ ಸಾರಭೂತವಾದ ವಿಚಾರ. ಜನಸಾಮಾನ್ಯರಿಗೆ ಈ ವಿಚಾರವು ತಿಳಿ
ವುದು ಸ್ವಲ್ಪ ಕಷ್ಟ. ಚಿದಚಿದ್ವಸ್ತುಗಳ ಅಸ್ತಿತ್ವ ಮತ್ತು ಅವುಗಳ ಸನಾತನತ್ವ
ಬಗ್ಗೆ ಅನೇಕ ಶತಮಾನಗಳಿಂದಲೂ ವಿಚಾರ ಮಥನ ನಡೆದಿದೆ. ಎಲ್ಲ ಮ
ಚಾರ್ಯರೂ ಈ ಬಗ್ಗೆ ತಮ್ಮ ತಮ್ಮ ಅನುಭವವೇದ್ಯವಾದ ಸಿದ್ಧಾಂತಗಳನ್ನು ಸಾ
ದ್ದಾರೆ. ಪ್ರಕೃತ ನಾವು ವಸ್ತು ನಿರ್ದೇಶನವನ್ನು ಮಾತ್ರ ಮಾಡಿ ಹೆಚ್ಚಿನ ವಿವರ
ವನ್ನು ಭಾಷಣಕಾರರಿಗೆ ಒಪ್ಪಿಸಲೆಳಸಿದ್ದೇವೆ.

**ಸತ್ತು**— ಪ್ರಪಂಚದಲ್ಲಿ ನಾವು ಜಡ ಮತ್ತು ಚೇತನರೂಪವಾದ ಇಬ್ಬಗೆ
ವಸ್ತುಗಳನ್ನು ಕಾಣುತ್ತಿದ್ದೇವೆ. ಇವುಗಳನ್ನು ಕ್ರಮವಾಗಿ ಅಚಿತ್ತು (ಜಡ) ಚಿ
(ಚೇತನ) ಎಂದು ಕರೆಯುತ್ತಾರೆ. ಜಗತ್ತು ಜಡವಾದ ಘಟಪಟಾದಿಗಳಿಂದಲ
ಚೇತನವಾದ ಜೀವಕೋಟಿಯಿಂದಲೂ ಕೂಡಿದೆ. ಇವೆರಡೂ ಮೂಲಭೂತವಾ
ಸನಾತನ ವಸ್ತುವಿನಿಂದ ಉಂಟಾದುವೆಂದು ತತ್ತ್ವಶಾಸ್ತ್ರ ಸಾರುತ್ತದೆ.

"ಸದೇವ ಸೌಮ್ಯೇದಮಗ್ರ ಆಸೀತ್, ಏಕಮೇವಾದ್ವಿತೀಯಂ....
ತದೈಕ್ಷತ ಬಹುಸ್ಯಾಂ ಪ್ರಜಾಯೇಯ" (ಛಾಂದೋಗ್ಯ 6-2-

ಎಂದರೆ ಮೊಟ್ಟಮೊದಲು 'ಸತ್' ರೂಪವಾದ ವಸ್ತು ಒಂದೇ ಇತ್ತು. ಎರಡ
ಯದಿರಲಿಲ್ಲ. ಅದು 'ನಾನು ಬಹಳವಾಗಿ ಆಗುವೆನು' ಎಂದು ಬಯಸಿತು. ಅದರಿ
ತೇಜಸ್ಸು, ಅಪ್ಪು (ಜಲ) ಅನ್ನ ಮುಂತಾದವುಗಳೂ ಅವುಗಳಿಂದ ಅಂಡಜ, ಜೀವ
ಮತ್ತು ಉದ್ಭಿಜ ಮುಂತಾದ ಜಗತ್ತೂ ಸೃಷ್ಟಿಯಾಯಿತೆಂದು ಹೇಳಿದೆ. ಮತ್ತೊ
ಕಡೆ—

"ಸೋಽಕಾಮಯತ । ಬಹುಸ್ಯಾಂ ಪ್ರಜಾಯೇಯೇತಿ । ಸ ತಪೋ ತಪ್ಯತ
ಸ ತಪಸ್ತಪ್ತ್ವಾ । ಇದಂ ಸರ್ವಮಸೃಜತ । ಯದಿದಂ ಕಿಂಚ । ತತ್ಸೃಷ್ಟ್ವಾ
ದೇವಾನುಪ್ರಾವಿಶತ್ | ತದನುಪ್ರವಿಶ್ಯ । ಸಚ್ಚತ್ಯಚ್ಚಾಭವತ್"
(ತೈತ್ತಿರೀಯ, ಅನಂ.

ಎಂದರೆ ಸತ್ ರೂಪವಾದ ಆ ವಸ್ತು 'ಬಹಳವಾಗಿ ಆಗುವೆನು' ಎಂದು ಬಯ
ಜಗತ್ತನ್ನು ಸೃಷ್ಟಿಸಿ ತಾನೂ ಆ ಸೃಷ್ಟಿಯನ್ನೇ ಪ್ರವೇಶಿಸಿತು. ತರುವಾಯ ಅ
ವಸ್ತು ಜಡಚೇತನಾತ್ಮಕವಾಗಿ ಪರಿಣಮಿಸಿತು. ಎಂಬ ಮಾತುಗಳು ಚಿದಚಿ
ವಸ್ತುಗಳ ಅಸ್ತಿತ್ವವನ್ನೂ ಅವುಗಳ ಸನಾತನತ್ವವನ್ನೂ ಸ್ಥಾಪಿಸುತ್ತವೆ. ಮತ
ಈ ವಿಚಾರವನ್ನು ಸಮರ್ಥಿಸುವುದಕ್ಕಾಗಿ ಉಪನಿಷತ್ತಿನಲ್ಲಿ ಉದಹರಿಸಿರುವ 'ಜೀ

ಗಳು ತನ್ನ ಎಂಜಲಿನಿಂದ ಬಲೆ ಸೃಷ್ಟಿಸಿ ಮತ್ತೆ ಅದನ್ನು ತನ್ನಲ್ಲಿ ಅಡಗಿಸಿಕೊಳ್ಳು
ಂತೆ ಪರವಸ್ತು ಸ್ವಯಂ ಜಗತ್ತನ್ನು ಸೃಜಿಸಿ ಅದರಲ್ಲಿ ಅಡಗುತ್ತದೆ' ಎಂಬ ನಿದರ್ಶನ
ಹತ್ವವಾಗಿದೆ. ಇದರಂತೆ ಆಲದ ಬೀಜ ದೃಷ್ಟಾಂತವೂ ಹೃದಯಂಗಮವಾಗಿದೆ.
ರು ಶಿಷ್ಯನಿಂದ ಒಂದು ಆಲದ ಬೀಜವನ್ನು ತರಿಸಿ ಅದನ್ನು ಒಡೆಯಿಸಿ "ಅದರಲ್ಲಿ
ನಿವೆ" ಎಂದು ಕೇಳಿದನು. ಶಿಷ್ಯನು 'ಏನೂ ಇಲ್ಲ' ಎಂದನು. ಆಗ ಗುರು
ಶಿಷ್ಯನೆ, ಯಾವ ಅತ್ಯಂತ ಸೂಕ್ಷ್ಮವಾದ ವಸ್ತುವನ್ನು ನೀನು ಕಾಣಲಾರೆಯೋ
ದರಿಂದಲೇ ಈ ದೊಡ್ಡ ಆಲದ ಮರವು ಆಗಿದೆ. ಅದನ್ನು ನೀನು ನಂಬು. ಅದೇ
ನು." ಎಂದು ಉಪದೇಶಿಸಿದನು. (ಛಾಂದೋಗ್ಯ 6) ಇದನ್ನು ವಿಚಾರಮಾಡಿದರೆ
ಅವ್ಯಕ್ತ ವಸ್ತುವಿನ ಪರಿಣಾಮವೇ ಚಿದಚಿದಾತ್ಮಕವಾದ ಈ ವಿಶ್ವವೆಂದು ಸ್ಪಷ್ಟ
ಾಗುತ್ತದೆ.

ಚಿತ್ತು— "ಚಿತಿರೇವ ಚೇತನ ಪದಾದವರೂಢಾ
ಚೈತ್ಯ ಸಂಕೋಚಿನೀ ಚಿತ್ತಂ ॥ (ಪ್ರ.ಹೃ. 5)

ಚಿತ್ತು ಅವರೋಹಣ ಕ್ರಮದಲ್ಲಿ ತನ್ನ ಚೈತನ್ಯ ಸ್ಥಿತಿಯಿಂದಿಳಿದು ಸಂಕುಚಿತ
ಾಗಿ 'ಚಿತ್ತ' ವೆನಿಸುತ್ತದೆ.

ತತ್ಪರಿಜ್ಞಾನೆ ಚಿತ್ತಮೇವ ಅಂತರ್ಮುಖೀಭಾವೇನ
ಚೇತನ ಪದಾಧ್ಯಾರೋಹಾತ್ ಚಿತಿಃ ॥ (ಪ್ರ.ಹೃ.13)

ಮೇಲೆ ಹೇಳಿದ 'ಚಿತ್ತ'ವೇ ಅಂತರ್ಮುಖವಾಗಿ ಪರಮಚಿದ್ರೂಪವನ್ನು ಪಡೆದು
ಚಿತ್' ಆಗುತ್ತದೆ.

ಈ ಚಿತ್ತು ಸ್ವತಂತ್ರ ಹಾಗೂ ಸ್ವಪ್ರಕಾಶಮಯವಾದುದು.

ಸತ್ ರೂಪವಾದ ಮೂಲವಸ್ತುವೇ ಜಗತ್ತು ಜೀವ ದೇವ (ಬ್ರಹ್ಮ) ಸ್ವರೂಪ
ಾಗಿದೆ. ಬ್ರಹ್ಮವು ಸಚ್ಚಿದಾನಂದಮಯವಾದುದು. ಸತ್ತು ಚಿತ್ತು ಆನಂದಗಳಲ್ಲಿ
ಪ್ರತಿಯೊಂದು ಪದವೂ ಮಹತ್ವಪೂರ್ಣವಾದುದು. ಸತ್ವವು (ಇರುವಿಕೆ) ಜಗತ್ತು
ಜೀವ ಬ್ರಹ್ಮಗೆ ಸಾಧಾರಣವಾದುದು. ಚಿತ್ತವು (ಚೈತನ್ಯ) ಜೀವ ಮತ್ತು ಬ್ರಹ್ಮ
ಸಾಧಾರಣವಾದುದು. ಆನಂದವು ಬ್ರಹ್ಮವೊಂದರಲ್ಲಿ ಮಾತ್ರವಿದೆ. ಜೀವನಲ್ಲಿಯೂ
ಯತ್ಕಿಂಚಿತ್ ಆನಂದವಿದ್ದಿಯಾದರೂ ಅದು ಕ್ಷಣಿಕ. ಪರಬ್ರಹ್ಮಗತವಾದ ಆನಂದ
ನಿತ್ಯವಾದುದು.

ಚಿದಾನಂದಲಾಭೇ ದೇಹಾದಿಷು ಚೈತ್ಯಮಾನೇಷ್ವಪಿ
ಚಿದ್ಯೈಕಾತ್ಮ್ಯ ಪ್ರತಿಪತ್ತಿದಾರ್ಢ್ಯಂ ಜೀವನ್ಮುಕ್ತಿಃ ॥ (ಪ್ರ.ಹೃ.16)

ಚಿದಾನಂದ ಲಾಭವಾದರೆ ಜೀವನ್ಮುಕ್ತಿ ಲಭಿಸುತ್ತದೆ.

ಜಗತ್ತು—ಪರಬ್ರಹ್ಮದ ಇಚ್ಛಾಶಕ್ತಿಯಿಂದ ಉತ್ಪನ್ನವಾದುದರಿಂದ ಜಗತ್ತು
ಸತ್ಯ.

ಆತ್ಮಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ ।
ಕುಟೀಭಾವಾದ್ಯಥಾ ಭಾತಿ ಪಟಸ್ವಸ್ಯ ಪ್ರಸಾರಣಾತ್ ॥
ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ ।
ತಥಾ ಭೂಮ್ಯಾದಿರೂಪೇಣ ಶಿವಏಕೋ ವಿರಾಜತೇ ॥

(ಸಿದ್ಧಾಂತಶಿಖಾಮಣಿ ಪಂ. 10)

ಎಂಬ ಶ್ರೀ ರೇಣುಕ ಭಗವತ್ಪಾದಾಚಾರ್ಯರ ಉಕ್ತಿ ಈ ವಿಷಯವನ್ನು ಸಮರ್ಥಿಸುತ್ತದೆ.

**ಜೀವ**—ಜೀವನು ಪರಮಾತ್ಮನ ಅಂಶ. ಬೆಂಕಿಯಿಂದ ಕಿಡಿಗಳು ಸಿಡಿಯುವಂತೆ ಅನಾದಿವಾಸನಾ ರೂಪವಾದ ಕರ್ಮವಶದಿಂದ ಜೀವರು ಅವತರಿಸುತ್ತಾರೆ. **"ಅಂಶೋ ನಾನಾ ವ್ಯಪದೇಶಾತ್"** (ಬ್ರ.ಸೂ. 2-3-40) ಎಂಬಲ್ಲಿ ಬಾದರಾಯಣರೂ ಇದೇ ವಿಚಾರವನ್ನು ಸಮರ್ಥಿಸಿರುತ್ತಾರೆ.

"ಚಿದ್ವತ್ತಚ್ಛಕ್ತಿ ಸಂಕೋಚಾತ್ ಮಲಾವೃತಃ ಸಂಸಾರೀ" (ಪ್ರ.ಹೃ.9)

"ಚಿದಾತ್ಮಕನಾದ ಪರಶಿವನೇ ಶಕ್ತಿಸಂಕೋಚದಿಂದ ಮಲಾವೃತನಾಗಿ ಸಂಸಾರಿಯೆನಿಸುತ್ತಾನೆ" ಈ ಮಲವೇ ಕರ್ಮವೆನಿಸುವುದು. ಕರ್ಮವು ಅನಾದಿಯಾದರೂ ಅದು ಈಶ್ವರನ ಅಧೀನ. ಕರ್ಮಫಲವನ್ನು ಕೊಡುವ ಅಧಿಕಾರವು ಪರಮೇಶ್ವರನ ಹೊರತು ಕರ್ಮಕ್ಕಾಗಲಿ ದ್ವೇಷಾಸೂಯಭೂಯಿಷ್ಠರಾದ ಇತರರಿಗಾಗಲಿ ಇಲ್ಲವೆಂಬ ಅಂಶವು ವೈಷಮ್ಯ ನೈರ್ಘೃಣ್ಯಾಧಿಕರಣದಲ್ಲಿ ವಿಸ್ತರಿಸಲ್ಪಟ್ಟಿದೆ.

ಕರ್ಮಕ್ಕೆ ಆದಿಯಿಲ್ಲ, ಅಂತ್ಯವುಂಟು. ತಾಮ್ರದಲ್ಲಿನ ಕಿಲುಬಿನಂತೆ ಜೀವನಿಗೆ ಕರ್ಮಪಾಶವು ಅಂಟಿಕೊಂಡಿರುತ್ತದೆ. ರಸವೇಧ ಅಥವಾ ಸ್ಪರ್ಶಮಣಿ ಸಂಪರ್ಕದಿಂದ ಕಿಲುಬು ಅಳಿದು ತಾಮ್ರವು ಸುವರ್ಣವಾಗುವಂತೆ ದೀಕ್ಷೆ ಮುಂತಾದ ಸಂಸ್ಕಾರಗಳಿಂದ ಜೀವನಿಗೆ ಮಲರೂಪವಾಗಿ ಅಂಟಿರುವ ಕರ್ಮವು ಸಂಪೂರ್ಣ ನಷ್ಟವಾಗಿ ಜೀವನು ದೇವನಾಗುತ್ತಾನೆ. ಜೀವನ ಬಂಧಕ್ಕೆ ಕಾರಣವಾದ ಕರ್ಮವನ್ನು ಅವಿದ್ಯೆ, ಮಲ, ಅಜ್ಞಾನ ಮುಂತಾದ ಪದಗಳಿಂದ ಬೇರೆ ಬೇರೆ ಮತೀಯರು ಹೇಳುತ್ತಾರೆ. ಇಂಥ ಕರ್ಮವಳಿದು ಜೀವನು ದೇವತ್ವ ಪಡೆಯಲು ತತ್ತ್ವಶಾಸ್ತ್ರವು ಅನೇಕ ಮಾರ್ಗಗಳನ್ನು ಬೋಧಿಸುತ್ತದೆ. ಪ್ರತಿಪಾದನೆಯಲ್ಲಿ ವ್ಯತ್ಯಾಸವಿದ್ದರೂ ಎಲ್ಲ ಆಚಾರ್ಯರ ಸಿದ್ಧಾಂತಗಳೂ ಜೀವನು ಬಂಧಮುಕ್ತನಾಗುವುದನ್ನೇ ಸಾರುತ್ತವೆ.

## ಪಾಪ ಪುಣ್ಯಗಳ ಸ್ವರೂಪ

ಕರ್ಮಗಳಲ್ಲಿ ದುಷ್ಕರ್ಮಗಳೆಂದೂ ಸತ್ಕರ್ಮಗಳೆಂದೂ ಎರಡು ಬಗೆಯಿದೆ

ಭಕ್ಷ್ಯಭಕ್ಷಣ, ಅಪೇಯಪಾನ, ಅಗಮ್ಯಗಮನರೂಪವಾದವುಗಳೇ ದುಷ್ಕರ್ಮಗಳು ಾಪ ಪುಣ್ಯ ಕರ್ಮಗಳನ್ನು ಮಾಡುವವರನ್ನು ಕುರಿತು ಶ್ರುತಿಯು—

"ತದ್ಯ ಇಹ ರಮಣೀಯ ಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ೋನಿಮಾಪದ್ಯೇರ್ನ್; ಬ್ರಾಹ್ಮಣಯೋನಿಂ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ಾ । ಅಥ ಯ ಇಹ ಕಪೂಯ ಚರಣಾ ಕಪೂಯಾಂ ಯೋನಿಮಾಪದ್ಯೇರನ್; ್ವಯೋನಿಂ ವಾ ಸೂಕರಯೋನಿಂ ವಾ ಚಂಡಾಲ ಯೋನಿಂ ವಾ"

ಎಂದರೆ ಸತ್ಕರ್ಮಗಳನ್ನು ಮಾಡಿದವರು ಶ್ರೇಷ್ಠ ಜನ್ಮಗಳಲ್ಲಿ ಹುಟ್ಟುತ್ತಾರೆ. ೀಚಕರ್ಮಮಾಡಿದವರು ಶ್ವಾನಸೂಕರಾದಿ ನೀಚಜನ್ಮಗಳನ್ನು ತಳೆಯುತ್ತಾರೆ. ಈ ಚಾರವನ್ನು ಬಾದರಾಯಣರು ಕೃತಾತ್ಯಯಾಧಿಕರಣದಲ್ಲಿ ವಿಸ್ತಾರವಾಗಿ ಹೇಳಿರು ತ್ತಾರೆ. ಸತ್ಕರ್ಮವು ಸಕಾಮ ಮತ್ತು ನಿಷ್ಕಾಮ ಎಂದು ಎರಡು ಬಗೆಯಾಗಿದೆ. ಸ್ವರ್ಗ ಸ್ವಾರಾಜ್ಯ ಮುಂತಾದ ಫಲಾಭಿಲಾಷೆಯಿಂದ ಮಾಡುವ ಜ್ಯೋತಿಷ್ಟೋಮಾದಿ ಕರ್ಮಗಳು ಸಕಾಮ ಕರ್ಮಗಳು, ಇವುಗಳಿಂದ ಪುಣ್ಯ ಸಂಗ್ರಹವಾಗಿ ಸ್ವರ್ಗಾದಿ ಪದವಿಗಳು ಲಭಿಸುತ್ತವೆಯಾದರೂ ಆಯಾ ಪುಣ್ಯ ತೀರಿದ ಮೇಲೆ ಅವರು "**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ**" ಎಂಬ ಶ್ರುತಿವಚನದಂತೆ ಮತ್ತೆ ಜನ್ಮ ತಳೆಯ ಬೇಕಾಗುತ್ತದೆ. ಅದಕ್ಕಾಗಿ ಪಶುಕರ್ಮಗಳೆನಿಸಿದ ಸಕಾಮ ಕರ್ಮಗಳು ಅಷ್ಟು ಮಹತ್ವವಾದವುಗಳಲ್ಲ. ಇಂಥ ಕರ್ಮಗಳನ್ನು ಕುರಿತು ಉಪನಿಷತ್ಕಾರರು ದುರ್ಬಲ ನೌಕೆಗಳೆಂದು ಹಾಸ್ಯಮಾಡಿರುತ್ತಾರೆ. ಆದುದರಿಂದ ಮುಮುಕ್ಷುಗಳು ಶಾಂತ್ಯಾದಿ ಸದ್ಗುಣಗಳಿಂದ ಕೂಡಿ ನಿಷ್ಕಾಮ ಕರ್ಮಗಳನ್ನು ಮಾಡಬೇಕು. ಭಗವಾನ್ ಬಾದ ರಾಯಣರು ಶಮಾದ್ಯಧಿಕರಣದಲ್ಲಿ

**"ಶಾಂತೋ ದಾಂತೋ ಉಪರತಸ್ತಿತಿಕ್ಷು ಶ್ರದ್ಧಾವತೋ**
**ಭೂತ್ವಾತ್ಮ ನ್ಯೇವಾತ್ಮಾನಂ ಪಶ್ಯೇತ್"**

ಎಂದರೆ ಶಾಂತಿ, ದಾಂತಿ, ಉಪರತಿ, ತಿತಿಕ್ಷೆಯುಳ್ಳವನಾಗಿ ಮುಮುಕ್ಷುವು ಪರ ಮಾತ್ಮನಧ್ಯಾನ, ಉಪಾಸನ, ಜಪಾನುಷ್ಠಾನಗಳಿಂದ ತನ್ನಲ್ಲಿ ತನ್ನನ್ನುಅನುಸಂಧಾನ ಮಾಡಬೇಕೆಂದು ಸ್ಪಷ್ಟಪಡಿಸಿರುತ್ತಾರೆ. ಆದುದರಿಂದ ಶ್ರುತಿಯು

"ವಿವಿಕ್ತದೇಶೇ ಚ ಸುಖಾಸನಸ್ಥಃ ಶುಚಿಸ್ಸಮಗ್ರೀವ ಶಿರಃ ಶರೀರಃ ।
ಅತ್ಯಾಶ್ರಮಸ್ಥಃ ಸಕಲೇಂದ್ರಿಯಾಣಿ ನಿರುಧ್ಯಭಕ್ತ್ಯಾಸ್ವಗುರು ಪ್ರಣಮ್ಯ ॥
ಹೃತ್ಪುಂಡರೀಕೇ ವಿರಜಂ ವಿಶುದ್ಧಂ ವಿಚಿಂತ್ಯಮಧ್ಯೇ ವಿಶದಂವಿಶೋಕಂ "
(ಕೈವಲ್ಯ)

ಎಂದು ವರವಸ್ತುವಿನ ಅನುಸಂಧಾನ ಮಾರ್ಗವನ್ನು ಉಪದೇಶಿಸಿದೆ. ಆದುದರಿಂದ ಪ್ರತಿಯೊಬ್ಬರೂ ತಮ್ಮ ತಮ್ಮ ಮತಾಚಾರ್ಯೋಪದಿಷ್ಟವಾದ ಮಾರ್ಗದಲ್ಲಿ ಶ್ರದ್ಧೆಯಿಂದ ವರ್ತಿಸುತ್ತ ಪರಧರ್ಮದ ವಿಷಯದಲ್ಲಿ ಸಹಾನುಭೂತಿಯನ್ನಿಟ್ಟು ವರ್ತಿಸಿದ ಪಕ್ಷದಲ್ಲಿ ಆತ್ಮಕಲ್ಯಾಣವೂ ತನ್ಮೂಲಕ ಲೋಕಕಲ್ಯಾಣವೂ ಆಗುವುದರಲ್ಲಿ ಸಂದೇಹವಿಲ್ಲ.

ಕಡೆಯದಾಗಿ ಇಂದು ತಾವು ಒಪ್ಪಿಸಿರುವ ಬಿನ್ನವತ್ತಳೆಯಲ್ಲಿ ನಮ್ಮ ವಿಚಾರದಲ್ಲಿ ಉಲ್ಲಿಖಿಸಿರುವ ಮಹಾಮಂತ್ರಲೇಖನದ ವಿಷಯವು ಈ ವಿಷಯದಲ್ಲಿ ಗಮನಾರ್ಹವಾದುದಾಗಿದೆ. ಭಾರತದ ಎಲ್ಲ ಮತಾಚಾರ್ಯರೂ ಒಂದೊಂದು ಮಂತ್ರವನ್ನು ಮುಖ್ಯವಾಗಿ ಭಾವಿಸಿ ಅದರ ಪುರಶ್ಚರಣೆಗೆ ವಿಶೇಷ ಗಮನವನ್ನು ಕೊಟ್ಟಿರುತ್ತಾರೆ. ಮಂತ್ರ ಪುರಶ್ಚರಣೆಯಿಂದಾಗುವ ಅನೇಕ ಮಹಾ ಸಿದ್ಧಿಗಳನ್ನು ಯೋಗಶಾಸ್ತ್ರದಲ್ಲಿಯೂ ಪುರಾಣೇತಿಹಾಸಗಳಲ್ಲಿಯೂ ಬಹಳವಾಗಿ ಪ್ರತಿಪಾದಿತವಾಗಿದೆ. ಜಪವು ಏಕಾಗ್ರತೆಯ ಸಾಧನೆಗೆ ಅತ್ಯುತ್ತಮ ಮಾರ್ಗ. ಆದುದರಿಂದ ಮಹಾಜನರು ಮಂತ್ರಪುರಶ್ಚರಣೆ ಹಾಗೂ ಮಂತ್ರಲೇಖನದ ಮಹತ್ವವನ್ನು ಮನನಮಾಡಿಕೊಂಡು ತಮಗೆ ಇಷ್ಟವಾದ ಮಹಾಮಂತ್ರವನ್ನು ಗುರುಮುಖದಿಂದ ಪಡೆದು ಅನುಷ್ಠಾನದಲ್ಲಿಟ್ಟುಕೊಂಡಲ್ಲಿ ಇಹಪರ ಸುಖಗಳೆರಡೂ ಅವರಿಗೆ ಸುಲಭವಾಗಿ ಲಭ್ಯವಾಗುವದರಲ್ಲಿ ಯಾವ ಸಂದೇಹವೂ ಇಲ್ಲವೆಂದು ಸೂಚಿಸಲೆಳಸುತ್ತೇವೆ. ಇನ್ನು ತಾವು ನಮ್ಮ ಪೀಠದ ವತಿಯಿಂದ ಆಗುತ್ತಿರುವ ಕಾರ್ಯಕ್ರಮಗಳ ಬಗ್ಗೆ ಪ್ರಸ್ತಾಪಿಸಿರುತ್ತೀರಿ. 'ಮಠಶ್ಛಾತ್ರಾದಿ ನಿಲಯಃ' ಎಂಬ ಉಕ್ತಿಯಂತೆ ವಿದ್ಯಾರ್ಥಿಗಳಿಗಾಗಿಯೇ ಮಠಗಳು ಏರ್ಪಟ್ಟದು. ಶಿಷ್ಯರ ಅಜ್ಞಾನಾಂಧಕಾರವನ್ನು ಹೋಗಲಾಡಿಸುವುದಕ್ಕಾಗಿಯೇ ಗುರು ಅವತರಿಸಿರುತ್ತಾನೆ.

ಗು ಶಬ್ದಸ್ತ್ವಂಧಕಾರಃಸ್ಯಾತ್ ರು ಶಬ್ದಸ್ತನ್ನಿರೋಧಕಃ ।
ಅಂಧಕಾರನಿರೋಧತ್ವಾತ್ ಗುರುರಿತ್ಯಭಿಧೀಯತೆ ॥

ಎಂಬ ವಚನದಂತೆ ಗುರು ಶ್ರೋತ್ರಿಯ ಬ್ರಹ್ಮನಿಷ್ಠನಾಗಿ ಉತ್ತಮ ಅಧಿಕಾರಿಗಳನ್ನು ಬರಮಾಡಿಕೊಂಡು ಅವರಿಗೆ ಸದ್ವಿದ್ಯೆಯನ್ನು ಉಪದೇಶಮಾಡುತ್ತಾನೆ. ಹಿಂದಿನ ಋಷ್ಯಾಶ್ರಮಗಳಲ್ಲಿ ಈ ತೆರನಾದ ವ್ಯವಸ್ಥೆಯಿದ್ದುದರಿಂದಲೇ ರಾಜಾಧಿರಾಜರು ಅಂಥ ಆಶ್ರಮಗಳಿಗೆ ಬೇಕಾದಷ್ಟು ದತ್ತಿಗಳನ್ನು ಕೊಟ್ಟು ಗೌರವಿಸುತ್ತಿದ್ದರು. ಅಂದಿನ ಆಶ್ರಮಗಳೇ ಮುಂದೆ ಮಠಗಳೆನಿಸಿದವು. ಮಹಾತ್ಮನಾದ ಕಣ್ವ ಮಹರ್ಷಿಯು ಹತ್ತು ಸಹಸ್ರ ಮಂದಿ ವಿದ್ಯಾರ್ಥಿಗಳಿಗೆ ಅಶನ, ವಸತಿ ಮತ್ತು ವಿದ್ಯಾದಾನ ಮಾಡುತ್ತಾ '**ಕುಲಪತಿ**' ಎಂಬ ಶ್ರೇಷ್ಠವಾದ ಪದವಿಗೆ ಪಾತ್ರನಾಗಿದ್ದ ವಿಷಯವು ಸುಪ್ರಸಿದ್ಧವಾಗಿದೆ. ಇಂಥ ಶ್ರೇಷ್ಠವಾದ ಮಾರ್ಗದಲ್ಲಿ ಇಂದು ಭಾರತದ ಎಷ್ಟೋ ಮಠಾಧಿಪತಿಗಳೂ ಮಹನೀಯರೂ ಸೇವೆ ಸಲ್ಲಿಸುತ್ತಿದ್ದಾರೆ. ನಮ್ಮ

ೀಠವೂ ಸಹ ಈ ವಿಚಾರದಲ್ಲಿ ಯಥಾಶಕ್ತಿ ಶ್ರಮಿಸುತ್ತಿದೆ. ಇದು ಕೇವಲ ನಮ್ಮ ರ್ತವ್ಯನಿರ್ವಹಣೆ ಮಾತ್ರವೇ ಹೊರತು ಲೋಕೋಪಕಾರವೆಂದು ಭಾವಿಸಲಾರೆವು. ೀಲಾಗಿ ಘನ ಸರ್ಕಾರದವರೂ ಮಹಾಜನರೂ ನಮ್ಮ ಈ ಉದ್ಯಮಕ್ಕೆ ವಿಶೇಷವಾದ ರವನ್ನು ನೀಡಿ ನಮ್ಮನ್ನು ಕೃತಕೃತ್ಯರನ್ನಾಗಿ ಮಾಡಿರುತ್ತಾರೆ. ಇದಕ್ಕೆ ಸಲ್ಲಬೇಕಾದ ರವ ಅವರಿಗೇ ಸೇರಿದ್ದೆಂದು ಭಾವಿಸಿರುತ್ತೇವೆ.

"ಇಡೀ ಮಾನವನ ಆದರ್ಶವನ್ನು ಸಾಧಿಸುವುದೇ ವಿದ್ಯಾಭ್ಯಾಸದ ಗುರಿ" ಎಂಬ ನ್ಯ ತತ್ತ್ವವನ್ನು ಅನುಷ್ಠಾನಕ್ಕೆ ತಂದಿರುವ ಸ್ವತಂತ್ರ ಭಾರತ ಸರ್ಕಾರದ ತತ್ತ್ವ ನ್ನು ಮನಗಂಡು ನಮ್ಮ ವಿದ್ಯಾರ್ಥಿನಿಲಯಗಳಲ್ಲಿ ಎಲ್ಲ ಜಾತಿ ಮತಗಳ ಅರ್ಹರಾದ ದ್ಯಾರ್ಥಿಗಳಿಗೂ ಆಶ್ರಯವನ್ನು ಕೊಡಲಾಗಿದೆ. ಮಹಾತ್ಮ ಗಾಂಧೀಜಿಯವರ ಸರ್ವೋದಯ"ದ ಬುನಾದಿಯ ಮೇಲೆ ಏರ್ಪಟ್ಟಿರುವ ಈ ವಿಧಾನವು ಸಾರ್ವತ್ರಿಕ ಾಗಿ ಹರಡಿ ಭಾರತ ಸಂಸ್ಕೃತಿಯನ್ನು ಬೆಳಗಿಸಲೆಂದು ಹಾರೈಸುತ್ತೇವೆ. ಹೀಗೆ ಯಥಾಶಕ್ತಿ ಕರ್ತವ್ಯದಲ್ಲಿ ತೊಡಗಿರುವ ನಮ್ಮ ಹಾಗೂ ನಮ್ಮ ಕಿರಿಯ ಸ್ವಾಮಿಗಳ ಗ್ಗೆ ತಾವು ತೋರಿಸಿರುವ ಪ್ರೇಮಾದರಗಳಿಗೆ ನಾವು ತುಂಬ ಕೃತಜ್ಞರಾಗಿರುತ್ತೇವೆ.

ಮಾದರಿ ಮಾನವನ ಜೀವನಾದರ್ಶದ ಪ್ರತೀಕರಾಗಿರುವ ಮೈಸೂರು ಸಂಸ್ಥಾ ನದ ಮಾಜಿ ದಿವಾನರಾದ ಮಾನ್ಯ ಸರ್ ಮಿರ್ಜಾ ಇಸ್ಮಾಯಿಲ್ ಅಮೀನ್ ಉಲ್ ಮುಲ್ಕ್ ಅವರು ಈ ಧರ್ಮ ಸಮ್ಮೇಳನದ ಉದ್ಘಾಟನೆಯನ್ನು ನೆರವೇರಿಸಿರುವುದು ಈ ಸಮ್ಮೇಳನಕ್ಕೆ ವಿಶೇಷವಾದ ಶೋಭೆಯನ್ನುಂಟುಮಾಡಿರುತ್ತದೆ. ಈ ಮಹಾ ಸಮ್ಮೇ ಳನದಲ್ಲಿ ಭಾಗವಹಿಸಿ ವಿವಿಧ ಧರ್ಮಗಳ ವಿಷಯದಲ್ಲಿ ತಮ್ಮ ಅಮೋಘವಾದ ಭಾಷಣ ಗಳನ್ನು ಮಾಡಲು ಅನೇಕ ವಿದ್ವನ್ಮಣಿಗಳೂ, ಸಾಹಿತಿಗಳೂ ಕಲಾವಿದರೂ ಆಗಮಿಸಿ ರುವುದು ತುಂಬಾ ಸಂತೋಷಕರವಾದದು.

ಇಂಥ ಅಮೃತ ಸನ್ನಿವೇಶವನ್ನು ದೊರಕಿಸಿಕೊಟ್ಟಿರುವ ಸನ್ಮಾನ್ಯ ಶ್ರೀ ಹೆಗ್ಗಡೆ ಯವರಿಗೂ ಅವರ ಬಂಧುವರ್ಗಕ್ಕೂ ಭಗವಾನ್ ಮಂಜುನಾಥಸ್ವಾಮಿಯೂ ಚಿರಾ ಯುರಾರೋಗ್ಯಭಾಗ್ಯಗಳನ್ನು ಕರುಣಿಸಲೆಂದು ಹಾರೈಸುತ್ತೇವೆ. ಈ ಪುಣ್ಯಕರವಾದ ಮಹೋತ್ಸವದಲ್ಲಿ ಭಾಗಿಗಳಾಗಿರುವ ತಮ್ಮೆಲ್ಲರಿಗೂ ಮಂಗಳವಾಗಲಿ.

"ಅಸತೋ ಮಾ ಸದ್ಗಮಯ,
ತಮಸೋ ಮಾ ಜ್ಯೋತಿರ್ಗಮಯ,
ಮೃತ್ಯೋರ್ಮಾ ಅಮೃತಂ ಗಮಯ"
॥ ಓಂ ಶಾಂತಿಶ್ಶಾಂತಿಶ್ಶಾಂತಿಃ ॥
ಶಿವಂ ಭೂಯಾತ್

———

# ಗುರುಗಳು ಕಾಲಧರ್ಮವನ್ನು ಮನಗಂಡು ಸೌಹಾರ್ದದಿಂದ ವರ್ತಿಸಬೇಕು

—ಌಌ—

**ಚಿಟ್ಟದಪುರ ಮಠದ ಶ್ರೀ ನಿ. ಪ್ರಣವ ಸ್ವರೂಪಿಗಳಾದ ಶ್ರೀ ಶ್ರೀ ಚಿಕ್ಕವೀರ ದೇಶೀಕೇಂದ್ರ ಸ್ವಾಮಿಗಳವರ ಆರಾಧನಾ ರಜತ ಮಹೋತ್ಸವ ಏಕಾದಶ ರುದ್ರಪೂಜೆ, ಶಿವಾನುಭವ ಸಮ್ಮೇಳನ ಮಹಾ ಸಮಾರಂಭದಲ್ಲಿ ಶ್ರೀ ಸುತ್ತೂರು ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು ಷಟ್‌ಸ್ಥಲ ಧ್ವಜಾರೋಹಣ ಮಾಡಿದ ಸಂದರ್ಭದಲ್ಲಿ ಅಪ್ಪಣೆ ಕೊಡಿಸಿದ ಭಾಷಣ**

ತಾ॥ 6-4-1953

ಪೂಜ್ಯರಾದ ಗುರು-ವಿರಕ್ತಮೂರ್ತಿಗಳವರೆ, ಸ್ವಾಗತ ಸಮಿತಿಯ ಅಧ್ಯಕ್ಷರೆ, ಸದಸ್ಯರೆ, ಮಾತೆಯರೆ ಮತ್ತು ಮಹಾಜನರೆ,

ಮಹಾಮಹಿಮರೂ ಪೂಜ್ಯರೂ ಆದ ಶ್ರೀ ನಿ. ಪ್ರ. ಲಿಂ॥ ಚಿಕ್ಕವೀರ ದೇಶಿಕೇಂದ್ರ ಸ್ವಾಮಿಗಳವರ ಪವಿತ್ರವಾದ ಈ ಆರಾಧನಾ ರಜತ ಮಹೋತ್ಸವದ ಅಂಗವಾಗಿ ಏರ್ಪಡಿಸಿರುವ ಏಕಾದಶ ರುದ್ರ **ಪೂಜೆ** ಮತ್ತು **ಶಿವಾನುಭವ ಸಮ್ಮೇಳನಗಳ** ಈ ಮಹಾ ಸಮಾರಂಭದಲ್ಲಿ **ಷಟ್** ಸ್ಥಳ **ಧ್ವಜಾರೋಹಣ**ಮಾಡಲು ನಮ್ಮನ್ನು ಬರಮಾಡಿಕೊಂಡು ಈ ಪವಿತ್ರ ಕರ್ತವ್ಯವನ್ನು ನೆರವೇರಿಸುವ ಅವಕಾಶ ಕಲ್ಪಿಸಿ ಕೊಟ್ಟುದಕ್ಕಾಗಿ ತುಂಬಾ ಕೃತಜ್ಞರಾಗಿದ್ದೇವೆ.

ವೈದಿಕ ಕ್ರಿಯೆಗಳ ಆರಂಭದಲ್ಲಿ ನಾಂದಿಗೆ ಎಷ್ಟು ಮಹತ್ವವಿದೆಯೋ ಅಷ್ಟೇ ಪ್ರಾಮುಖ್ಯತೆಯು ಆಗಮಿಕ, ಧಾರ್ಮಿಕ ಹಾಗೂ ರಾಷ್ಟ್ರೀಯ ಕ್ರಿಯೆಗಳ ಆರಂಭದಲ್ಲಿ ಧ್ವಜಾರೋಹಣಕ್ಕಿದೆ. ಪ್ರಾಚೀನ ಭಾರತದ ಇತಿಹಾಸದಲ್ಲಿ ಧ್ವಜಾರೋಹಣವು ಅತಿ ಮುಖ್ಯವಾದ ಕ್ರಿಯೆಗಳಲ್ಲೊಂದು. ವೃಷಭಧ್ವಜ, ಗರುಡಧ್ವಜ, ಹನುಮಧ್ವಜ, ಉರುಗಧ್ವಜ, ಮಯೂರಧ್ವಜ, ಹಂಸಧ್ವಜ. ಸ್ವಾಸ್ತಿಕಧ್ವಜ, ವರಾಹಧ್ವಜ, ಗಂಡಭೇರುಂಡಧ್ವಜ ಮತ್ತು ತ್ರಿವರ್ಣಧ್ವಜ ಎಂಬುವುಗಳು ಕೆಲವುವೇಳೆ ಧರ್ಮ ಅಥವಾ ಸಂಸ್ಕೃತಿಯ ಕುರುಹುಗಳಾಗಿಯೂ, ರಾಷ್ಟ್ರದ ಪ್ರತೀಕವಾಗಿಯೂ, ವ್ಯಕ್ತಿಗಳ ಸೂಚಕವಾಗಿಯೂ ಇದ್ದಂತೆ ತಿಳಿದುಬರುತ್ತದೆ.

ಮತಾಚಾರ್ಯರುಗಳು ಶಾಸ್ತ್ರೋಕ್ತವಾಗಿ ಧರಿಸುವ ದಂಡವು ಅವರ ಧರ್ಮ

ಂಸ್ಕೃತಿ ಸೂಚಕನಾದ ಧ್ವಜದ ಪ್ರತೀಕವೇ ಆಗಿದೆ. ವೀರಶೈವ ಮತಾಚಾರ್ಯರು
ರಿಸಿರುವುದು ಷಟ್‌ಸ್ಥಲಧ್ವಜ. ಇದು ಇಡೀ ವೀರಶೈವಸಿದ್ಧಾಂತ, ಸಂಸ್ಕೃತಿಗಳ
ುರುಹು.

ಅಧಿಷ್ಠಾನಂ ಸಮಸ್ತಸ್ಯ ಸ್ಥಾವರಸ್ಯ ಚರಸ್ಯ ಚ।
ಜಗತೋ ಯದ್ಭವೇತ್ ತತ್ತ್ವಂ ತದ್ಧಿ ವೈ ಸ್ಥಲಮುಚ್ಯತೇ ॥
(ಅ. ಸೂ. ೨. ೬)

ಸ್ಥಾವರಜಂಗಮಾತ್ಮಕವಾದ ಸಮಸ್ತ ಪ್ರಪಂಚಕ್ಕೂ ಅಧಿಷ್ಠಾನವಾದುದೇ ಸ್ಥಲ. ಜಡ-ಚೇತನ, ಪ್ರಕೃತಿ-ಪುರುಷ ಅಥವಾ ಅಂಗಸ್ಥಲ-ಲಿಂಗಸ್ಥಲ ಎಂಬ ವಿಲಕ್ಷಣ ವಿಭಾಗದಿಂದ ಈ ಸ್ಥಲವು ಎರಡು ವಿಧವಾಗಿದೆ. ಅಂಗಸ್ಥಲವು ತ್ಯಾಗಾಂಗ, ಭೋಗಾಂಗ, ಯೋಗಾಂಗವೆಂದೂ, ಲಿಂಗಸ್ಥಲವು ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗವೆಂದೂ ವಿಭಾಗಿಸಲ್ಪಟ್ಟು ಮೂರು ಮೂರು ಸ್ಥಲಗಳಾಗುತ್ತವೆ. ತ್ಯಾಗಾಂಗವು ಭಕ್ತ-ಮಹೇಶ ಎಂದೂ, ಭೋಗಾಂಗವು **ಪ್ರಸಾದಿ-ಪ್ರಾಣಲಿಂಗಿ** ಎಂದೂ, ಯೋಗಾಂಗವು **ಶರಣ-ಐಕ್ಯ** ಎಂದೂ ಆರು ವಿಧವಾಗುತ್ತದೆ. ಅದರಂತೆ ಇಷ್ಟಲಿಂಗವು **ಆಚಾರಲಿಂಗ-ಗುರುಲಿಂಗ** ವೆಂದೂ, ಪ್ರಾಣಲಿಂಗವು **ಶಿವಲಿಂಗ-ಜಂಗಮಲಿಂಗ** ವೆಂದೂ, ಭಾವಲಿಂಗವು ಪ್ರಸಾದಲಿಂಗ-**ಮಹಾಲಿಂಗ**ವೆಂದೂ ವಿಭಾಗಿಸಲ್ಪಟ್ಟು ಷಟ್‌ಸ್ಥಲವು ಆರುಲಿಂಗಗಳು, ಆರು ಅಂಗಗಳು, ಆರು ಶಕ್ತಿಗಳು, ಆರು ಭಕ್ತಿಗಳು ಮತ್ತು ಆರು ಕಲೆಗಳಿಂದ ಕೂಡಿ ೬ X ೬ = ೩೬ (ಮೂವತ್ತಾರು)೧೦೧-೨೧೬ ಎಂಬ ಸಕೀಲುಗಳಿಂದ ಕೂಡಿರುವ ರಹಸ್ಯವನ್ನು ಗುರುಮುಖದಿಂದ ಅರಿಯಬೇಕು. ಇದೇ ಷಟ್‌ಸ್ಥಲದಲ್ಲಿ ಧ್ವಜದ ಸಂಕೇತ.

ಷಟ್‌ಸ್ಥಲ ಧ್ವಜಪಟದಲ್ಲಿ ಕಾಣುವ ಚಕ್ರದ ರಹಸ್ಯವನ್ನು ಸಹ ಈ ಸಂದರ್ಭದಲ್ಲಿ ಅರಿಯುವುದು ಅವಶ್ಯಕ. ಈ ಚಕ್ರಕ್ಕೆ ಶಾಂಭವೀಮುದ್ರೆಯೆಂದೂ ಷಟ್‌ಸ್ಥಲ ಚಕ್ರವೆಂದೂ ಹೆಸರು. ಎರಡು ತ್ರಿಕೋಣಗಳ ಸಾಮರಸ್ಯವು ಈ ಚಕ್ರದಲ್ಲಿ ಕಾಣುತ್ತದೆ. ಮೊದಲನೆಯ ತ್ರಿಕೋಣವು ಪ್ರಕೃತಿಯ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳನ್ನೂ ಎರಡನೆಯದು ಜೀವನು ಸತ್ತು, ಚಿತ್ತು, ಆನಂದವಿಶಿಷ್ಟನೆಂಬುದನ್ನೂ ಸೂಚಿಸುವುದಲ್ಲದೆ ಇವೆರಡರ ಸಾಮರಸ್ಯದಿಂದ ಈ ಚಕ್ರವೇರ್ಪಟ್ಟು ಮಧ್ಯದಲ್ಲಿರುವ ಪ್ರಣವ ಸಂಬಂಧದಿಂದ ಕೂಡಿರುವುದೇ ಇದರ ವೈಶಿಷ್ಟ್ಯ. ಶಿವಲಿಂಗ ಓಂಕಾರ ಮತ್ತು ಈ ಶಾಂಭವೀ ಮುದ್ರೆಗಳು ಸಮಾನಾರ್ಥದಲ್ಲಿಯೆ ಇದ್ದು ಲಿಂಗಾಂಗ ಸಾಮರಸ್ಯ ಅಥವಾ ಶಕ್ತಿ ವಿಶಿಷ್ಟಾದ್ವೈತ ರಹಸ್ಯವನ್ನು ವ್ಯಕ್ತಗೊಳಿಸುತ್ತವೆ. ಧ್ವಜದ ಮೇಲ್ಭಾಗದಲ್ಲಿರುವ ಲಿಂಗ-ಅಂಗಸ್ವರೂಪವಾದ ಲಿಂಗ ಮತ್ತು ಬಸವಗಳೂ, ಕೆಳಭಾಗದಲ್ಲಿ ...ವ ಸೂರ್ಯ-ಚಂದ್ರ ಗುರ್ತುಗಳು ಸಹ ಯೋಗಶಾಸ್ತ್ರಪ್ರಸಿದ್ಧವಾಗಿವೆ.

ಚಕ್ರದ ಮಧ್ಯದಲ್ಲಿರುವ ಲಿಂಗಸ್ವರೂಪವಾದ ಪ್ರಣವವನ್ನು ಪ್ರದಕ್ಷಿಣ ಕ್ರಮದಿ ಜೀವನು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯನೆಂ ಹಂತಗಳಲ್ಲಿ ಶಿವಪ್ರಸಾದ ಲಬ್ಧವಾದ ಭಕ್ತಿಯ ಸಹಾಯದಿಂದ ವಿಕಾಸವನ್ನು ಹೊಂ ಸಮರಸವಾಗಬೇಕೆಂಬುದೇ ಈ ಷಟ್‌ಸ್ಥಲ ಧ್ವಜದ ರಹಸ್ಯ. ಶಿವಾಂಶನಾದ ಜೀವನ ಶಿವದೀಕ್ಷೆಯೆಂಬ ಸಂಸ್ಕಾರ ಹೊಂದಿ, ಅಷ್ಟಾವರಣ, ಪಂಚಾಚಾರಗಳನ್ನು ಸರಿಯಾ ಅನುಷ್ಠಾನಮಾಡುವುದರ ಮೂಲಕ ಕ್ರಮ ಕ್ರಮವಾಗಿ ಮಲಾವರಣವನ್ನು ಕಳೆದ ಕಡೆಗೆ ಮಧ್ಯದಲ್ಲಿರುವ ಓಂಕಾರ(ಲಿಂಗ)ದೊಡನೆ ನೀರು-ನೀರಿನಲ್ಲಿ, ಜೆಂಕಿ-ಬೆಂಕಿಯ ನದಿಗಳು-ಸಮುದ್ರದಲ್ಲಿ ಐಕ್ಯವಾಗುವಂತೆ ಸಮರಸವಾಗುವ ರಹಸ್ಯವು ಷಟ್‌ಸ್ಥ ಚಕ್ರದಲ್ಲಿಅಡಗಿದೆ.

ಇಂಥಾ ಮಹತ್ವ ಪೂರ್ಣವಾದ ಧ್ವಜಾರೋಹಣವನ್ನು ಮಾಡಿ ಅದರ ಆಶ್ರ ದಲ್ಲಿ ಏರ್ಪಡಿಸಿರುವ ಈ ಮಹಾ ಸಮಾರಂಭವು ತಾತ್ವಿಕವಾಗಿಯೂ, ಸಾಂಪ್ರದಾ ಯಿಕವಾಗಿಯೂ ಆದರ್ಶವಾದುದಾಗಿದೆ.

ಏಕಾದಶ ರುದ್ರಪೂಜೆಯು ವೀರಶೈವ ಸಂಸ್ಕೃತಿದ್ಯೋತಕ. ಶಿವ, ಶಂಭು ಪಿನಾಕಿ, ಗಿರೀಶ ಹರ, ಸ್ಥಾಣು, ಭರ್ಗ, ಭೈರವ, ಸದಾಶಿವ, ಕಪಾಲಿ, ಈಶ್ವರ ಎಂಬ ಶಿವನ ಲೀಲಾವಿಭೂತಿಗಳೇ ಏಕಾದಶ ರುದ್ರರು. "ಜಂಗಮೋ ಜಗದೀಶ್ವರಃ ಎಂಬ ಉಕ್ತಿಯಂತೆ ವೀರಮಾಹೇಶ್ವರ(ಜಂಗಮ) ರನ್ನು ಸಾಕ್ಷಾತ್ ಶಿವಸ್ವರೂ ರೆಂದೇ ಭಾವಿಸಿ ಆರಾಧಿಸಬೇಕೆಂಬುದು ವೀರಶೈವ ಸಿದ್ಧಾಂತ. ವೀರಮಾಹೇಶ್ವ ರೆನಿಸಿರುವ ಗುರು-ವಿರಕ್ತಮೂರ್ತಿಗಳೆಲ್ಲರೂ ಜಂಗಮ ಪದವಾಚ್ಯರಾಗಿರುತ್ತಾರೆ "ಏಕಮೂರ್ತಿಃ ತ್ರಿಧಾ ಭೂತಃ ಗುರುರ್ಲಿಂಗಂತು ಜಂಗಮಃ" ಎಂಬ ಪ್ರಮಾಣ ದಂತೆ ಪರಮಾತ್ಮನು ಭಕ್ತೋದ್ಧಾರ ಮಾಡುವುದಕ್ಕಾಗಿ ಗುರು-ಲಿಂಗ-ಜಂಗಮ ವೆಂಬ ಮೂರು ಉಪಾಧಿ ತಳೆದು ಅವತರಿಸಿರುವನು. ಈ ಮೂವರಲ್ಲಿ ಭೇದವಿರು ದಿಲ್ಲ. ಇವರನ್ನು ಭಕ್ತರು ಸಮಾನಭಾವದಿಂದ ಆರಾಧಿಸಿ, ಅವರ ದಿವ್ಯೋಪದೇಶಕ್ಕೆ ಪಾತ್ರರಾಗಬೇಕೆಂಬ ಉದ್ದೇಶದಿಂದ ತಾವು ಏಕಾದಶ ರುದ್ರಪೂಜೆ ಮತ್ತು ಶಿವಾನ ಭವ ಸಮ್ಮೇಳನಗಳನ್ನು ಏರ್ಪಡಿಸಿರುವುದಾಗಿ ತಿಳಿದು ನಮಗೆ ಅತ್ಯಂತ ಸಂತೋಷ ವಾಗಿದೆ.

ರೇಣುಕಾದಿ ಆಚಾರ್ಯರು ಮತ್ತು ಬಸವಾದಿ ಪ್ರಮಥರು ಒಂದೇ ಧ್ಯೇಯ ಸಾಧನೆಗಾಗಿ ಅವತರಿಸಿದ ಮಹಾ ವಿಭೂತಿಗಳೆಂಬುದಕ್ಕೆ ಇಂದು ಭಾರತದಲ್ಲಿ ಆಸೇತು ಹಿಮಾಚಲದವರೆಗೆ ವಿರಾಜಿಸುತ್ತಿರುವ ಸಹಸ್ರಾರು ಮಠಗಳೇ ನಿದರ್ಶನ. ಈ ಮಠ ಗಳಲ್ಲಿ ಆಗಿಹೋದ ಮಹಿಮಾಶಾಲಿಗಳಾದ ಮೂರ್ತಿಗಳು ಶಿವಾನುಭವಾನುಷ್ಠಾನದಿಂದ ಪ್ರಭಾವಶಾಲಿಗಳಾಗಿದ್ದರೆಂಬುದಕ್ಕೆ ಅನೇಕ ರಾಜಾಧಿರಾಜರುಗಳೂ, ಸಕಲ ಜನಾಂಗ ಗಳವರೂ ಈ ಧರ್ಮದೀಕ್ಷೆಯನ್ನು ಸ್ವೀಕರಿಸಿರುವುದೇ, ಸಾಕ್ಷಿಯಾಗಿದೆ. ಬೆಟ್ಟದಪುರದ

ಶ್ರೀ ಮಠಾಧಿಪತಿಗಳಾಗಿದ್ದ ಶ್ರೀ ನಿ. ಪ್ರ. ಚಿಕ್ಕವೀರ ದೇಶೀಕೇಂದ್ರಸ್ವಾಮಿಗಳವರು ಇಂದಿಗೆ ಇಪ್ಪತ್ತೈದು ವರುಷಗಳ ಹಿಂದೆ ನಡೆಸಿದ ಮಹಿಮಾ ವಿಶೇಷಗಳ ಪ್ರಭಾವವೇ ನಮ್ಮನ್ನಿಂದು ಇಲ್ಲಿ ನೆರೆಯುವಂತೆ ಮಾಡಿದೆಯೆಂಬುದಕ್ಕೆ ಬೇರೆ ನಿದರ್ಶನ ಬೇಕಿಲ್ಲ ಈ ಮಹಾತ್ಮರ ದಿವ್ಯ ತತ್ವವನ್ನನುಸರಿಸಿ ಇಂದಿನ ಎಲ್ಲಾ ಗುರು–ವಿರಕ್ತಮೂರ್ತಿಗಳೂ ಸಹ ಕಾಲಧರ್ಮವನ್ನು ಮನಗಂಡು ಪರಸ್ಪರ ಸೌಹಾರ್ದದಿಂದಲೂ, ಕರ್ತವ್ಯದೃಷ್ಟಿ ಯಿಂದಲೂ ಮೇಲಾಗಿ ಶಿಷ್ಯೋದ್ಧಾರ ಕಾರುಣ್ಯದಿಂದಲೂ ಇಲ್ಲಿ ಭಾಗವಹಿಸಿರುವುದು ಸಮಾಜದ ಸೌಭಾಗ್ಯವೆಂದು ಭಾವಿಸುತ್ತೇವೆ. ಪ್ರಕೃತದಲ್ಲಿ ಶ್ರೀ ಮಠದ ಅಧಿಪತಿ ಗಳಾಗಿರುವ ಶ್ರೀ ನಿ. ಪ್ರ. ಚನ್ನವೀರದೇಶಿಕೇಂದ್ರಸ್ವಾಮಿಗಳವರೂ ಮತ್ತು ಸ್ವಾಗತ ಸಮಿತಿಯ ಅಧ್ಯಕ್ಷರು–ಸದಸ್ಯರು ಸಮಾಜದ ಪರವಾಗಿ ಏರ್ಪಡಿಸಿರುವ ಈ ಉತ್ಸವವು ಆದರ್ಶವಾಗಿದೆ.

ಪರಮೇಶ್ವರನ ಕೃಪೆಯಿಂದಲೂ ಎಲ್ಲಾ ಗುರೂ ಜಂಗಮ ಮೂರ್ತಿಗಳ ದಿವ್ಯಾ ಶೀರ್ವಾದದಿಂದಲೂ ಈ ಮಹಾಸಮಾರಂಭವು ಯಶಸ್ವಿಯಾಗಿ ನೆರವೇರಿ, ಸಮಸ್ತ ರಿಗೂ ಸಕಲ ಸನ್ಮಂಗಲಗಳುಂಟಾಗಲೆಂದು ಹಾರೈಸುತ್ತೇವೆ.

**ಓಂ ಸಹನಾವವತು । ಸಹನೌಭುನಕ್ತು । ಸಹವೀರ್ಯಂಕರವಾವಹೈ ।**
**ತೇಜಸ್ವಿನಾವಧೀತಮಸ್ತು । ಮಾವಿದ್ವಿಷಾವಹೈ ॥**
ಓಂ ಶಾಂತಿಃ ಶಾಂತಿಃ ಶಾಂತಿಃ

(ಈ ಸಮಾರಂಭದ ಅಂಗವಾಗಿ ಸಂಜೆ ನಡೆದ ಸಭೆಯನ್ನು ಮೈಸೂರಿನ ಶ್ರೀಮನ್ಮಹಾರಾಜರವರು ಉದ್ಘಾಟಿಸಿದರು. ಚಿತ್ರದುರ್ಗದ ಜಗದ್ಗುರು ಶ್ರೀ ಮುರಘ ರಾಜೇಂದ್ರ ಮಹಾಸ್ವಾಮಿಗಳವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.)

————

# ವಿಶ್ವ ಧರ್ಮ

—೦೦—

**ಶ್ರೀ ಸುತ್ತೂರು ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ಜಗದ್ಗುರು ಪಟ್ಟದ ಶಿವರಾತ್ರಿಮಹಾಸ್ವಾಮಿಗಳವರು ತಾ|| ೬-೨-೧೯೫೭ ರಲ್ಲಿ ಏರಿದ ನೂತನ ಸಿಂಹಾಸನ ಮತ್ತು ಬೆಳ್ಳಿಪಾಲಕಿಗಳ ಸಂಪ್ರೋಕ್ಷಣ ಮಹಾಸಮಾರಂಭದಲ್ಲಿ ಭಕ್ತಮಂಡಳಿಯವರು ಸಮರ್ಪಿಸಿದ ಬಿನ್ನವತ್ತಳಿಗೆ ಉತ್ತರವಾಗಿ ದಯಪಾಲಿಸಿದ ಭಾಷಣ**

ವೀರಸಿಂಹಾಸನಾಸೀನಃ ಶಿವರಾತ್ರೀಶ್ವರೋ ವಿಭುಃ ।
ದದ್ಯಾತ್ ವಿಶ್ವಸ್ಯ ಜಗತಃ ಶಾಂತಿಭಿಕ್ಷಾಂ ಕೃಪಾನಿಧಿಃ ॥

ಗುರುಜಂಗಮಮೂರ್ತಿಗಳೇ, ಮಹಾಪೀಠದ ಕೃಪಾಶೀರ್ವಾದಕ್ಕೆ ಪಾತ್ರರಾಗಿರುವ ಭಕ್ತಮಹಾಶಯರೇ ಮತ್ತು ಮಹನೀಯರೇ ?

ಈದಿನ ವಿಶೇಷ ಶ್ರದ್ಧಾಭಕ್ತಿಗಳಿಂದ ಪೀಠಾಭಿಮಾನಿಗಳಾದ ತಾವು ಏರ್ಪಡಿಸಿರುವ ಈ ಸಮಾರಂಭವು ಪೀಠದಲ್ಲಿ ತಮಗಿರುವ ಅಮಿತವಾದ ಭಕ್ತ್ಯುತ್ಸಾಹಗಳನ್ನು ವ್ಯಕ್ತಗೊಳಿಸುತ್ತದೆ. ನಾವು ಪೀಠಾರೋಹಣ ಮಾಡಿದಂದಿನಿಂದ ಶ್ರೀಮಠದಲ್ಲಿ ಮತ್ತು ಮಠದ ಆಶ್ರಯದಲ್ಲಿ ನಡೆಯುತ್ತಿರುವ ಕಾರ್ಯಕಲಾಪಗಳ ವಿಷಯದಲ್ಲಿ ತೋರ್ಪಡಿಸಿರುವ ಪ್ರೀತಿವಿಶ್ವಾಸಗಳು ತಮ್ಮ ಸಹೃದತೆಯ ಕುರುಹೆಂದೇ ಭಾವಿಸುತ್ತೇವೆ. ಶ್ರೀಮಠದ ಎಲ್ಲ ಅಭಿವೃದ್ಧಿಯೂ ನಮ್ಮ ಘನ ಸರ್ಕಾರದ ಹಾಗೂ ಸಮಸ್ತ ಶಿಷ್ಯಸಮುದಾಯದ ಸಹಕಾರದ ಸತ್ಫಲವಲ್ಲದೆ ಬೇರೆಯಲ್ಲ.

ಗುರು ಪೀಠಾಧಿಕಾರವು ತುಂಬಾ ಹೊಣೆಗಾರಿಕೆಯುಳ್ಳದ್ದು. ಅಪಾರವಾದ ಈ ಮಹಾಸಾಗರದಲ್ಲಿಳಿದು ಪಾರಗಾಣಬೇಕಾದರೆ ಸುಸಂಸ್ಕಾರವೂ ಹಿರಿಯ ಗುರುವರ್ಯರ ಆಶೀರ್ವಾದವೂ ಅತ್ಯಾವಶ್ಯಕ. ನಮ್ಮ ಗುರುಪೀಠದ ಪ್ರಾಚೀನತೆ ಮತ್ತು ಸ್ಥಾನಮಾನಗಳ ವಿಷಯದಲ್ಲಿ ತಾವು ಯಥಾರ್ಥವಾದ ಅಂಶಗಳನ್ನು ಬಿನ್ನವತ್ತಳಿಯಲ್ಲಿ ಉಲ್ಲೇಖಿಸಿರುತ್ತೀರಿ. ಇಂತಹ ಮಹನೀಯವಾದ ಪೀಠದ ಗೌರವವನ್ನು ಕಾಯ್ದುಕೊಂಡು ಬರುವ ಹೊಣೆಗಾರಿಕೆಯು ದೊಡ್ಡದಾದರೂ ನಾವು ಶ್ರೀ ಗುರುಗಳ ದಿವ್ಯಾಶೀರ್ವಾದ ಬಲದಿಂದಲೂ ಮತ್ತು ತಮ್ಮ ಸಹಕಾರ ಸೌಹಾರ್ದತೆಗಳ ಬೆಂಬಲದಿಂದಲೂ ಈ ಕೆಲಸದಲ್ಲಿ ತೊಡಗಿರುತ್ತೇವೆ.

"ನಮ್ಮ ಎಲ್ಲ ಕೆಲಸಗಳನ್ನು ಶಿವಾರ್ಪಿತಬುದ್ಧಿಯಿಂದ ಎಸಗಿ ಅನಾಸಕ್ತಿಯಿಂದ

ವರ್ತಿಸುವುದಾದರೆ ನೀರಿನಲ್ಲಿ ಅದ್ದಿದ ತಾವರೆಯ ಎಲೆಯಂತೆ ನಮಗೆ ಕರ್ಮಲೇಪ ವಾಗುವುದಿಲ್ಲ"ವೆಂಬ ಭಗವದುಕ್ತಿ ಮಾನವರ ಆದರ್ಶವಾಗಿದೆ. ಅದರಂತೆ ನಾವೂ ಸಹ ಕರ್ತವ್ಯದೃಷ್ಟಿಯಿಂದ ಒಂದಿಷ್ಟು ಅಳಿಲಸೇವೆಯನ್ನು ಯಥಾಶಕ್ತಿ ಮಾಡಿರುತ್ತೇವೆ.

ಜನತೆಯ ಅಜ್ಞಾನವೆಂಬ ಕಾರ್ಗತ್ತಲೆಯನ್ನು ತಮ್ಮ ಜ್ಞಾನತೇಜಸ್ಸಿನಿಂದ ತೊಡೆದು ಕುಮಾರ್ಗದಿಂದ ಸನ್ಮಾರ್ಗದ ಕಡೆಗೂ ಕತ್ತಲಿನಿಂದ ಬೆಳಕಿನಕಡೆಗೂ ಮರ್ತ್ಯತ್ವದಿಂದ ಅಮೃತತತ್ವದಕಡೆಗೂ ಒಯ್ದು ಮಾನವನನ್ನು ಮಾನವನನ್ನಾಗಿ, ಅಥವಾ ಅವನನ್ನು ದೇವತ್ವಕ್ಕೊಯ್ಯುವ ಅಂತಃ ಶಕ್ತಿಯೇ ಗುರುತ್ವಾಧಿಕಾರವನ್ನು ಪಾರಗಾಣಿಸುವ ಸುಲಭಸಾಧನ.

ವೀರಶೈವ ಧರ್ಮವು ಇಂತಹ ಅನೇಕ ದಿವ್ಯಾದರ್ಶಗಳ ಹಿನ್ನೆಲೆಯ ಮೇಲೆ ಸ್ಥಾಪಿತವಾದುದೆಂಬುದು ತಮಗೆ ತಿಳಿದೇ ಇದೆ. ಇದು ಶ್ರೀ ರೇಣುಕಾದಿ ಆಚಾರ್ಯರ ಮತ್ತು ಬಸವಾದಿ ಶಿವಶರಣರ ದಿವ್ಯೋಪದೇಶಗಳ ಮೇಲೆ ರೂಪುಗೊಂಡ ಅನುಭವ ರಸಾಯನದಂತಿದೆ. ಉಪನಿಷತ್ ಧರ್ಮಗಳಲ್ಲಿ ಮುಖ್ಯವಾದ ನಿಷ್ಕಾಮಕರ್ಮ, ಸಮದರ್ಶಿತ್ವ ಮತ್ತು ಅನನ್ಯಭಕ್ತಿಗಳು ಈ ಧರ್ಮದಲ್ಲಿ ಹಾಸುಹೊಕ್ಕಾಗಿ ವ್ಯಾಪಿಸಿವೆ. ಆದ್ದರಿಂದಲೇ ವೀರಶೈವ ಧರ್ಮವು ವಿಶ್ವಧರ್ಮವೆಂದು ಅನುಭವಿಗಳು ಮುಕ್ತಕಂಠದಿಂದ ಸಾರುತ್ತಿರುವುದು. ಈ ಧರ್ಮದಲ್ಲಿರುವ ದಿವ್ಯಾದರ್ಶಗಳನ್ನು ನಮ್ಮ ಜೀವನಕ್ಕೆ ಅಳವಡಿಸಿಕೊಂಡು ಜೀವನಮಾರ್ಗವನ್ನು ಪವಿತ್ರವನ್ನಾಗಿ ಮಾಡಿ ಸಮತೆ, ಸೌಶೀಲ್ಯ ಮತ್ತು ಸೌಹಾರ್ದಗಳನ್ನು ಗಳಿಸಿ ವಿಶ್ವದ ಸತ್ಪ್ರಜೆಯಾಗುವುದೇ ಪ್ರತಿಯೊಬ್ಬ ಮಾನವನ ಮುಖ್ಯಧರ್ಮ.

ಭರತಖಂಡದಲ್ಲಿ ಸ್ಥಾಪಿತವಾದ ಮಠಗಳು ಮಾಡಿದುದು ಇದೇ ಧ್ಯೇಯಸಾಧನೆಯನ್ನು. ಈ ಉದ್ದೇಶಗಳನ್ನು ಕಾರ್ಯರೂಪದಲ್ಲಿ ತರುವುದೇ ಗುರುಪೀಠಾಧಿಕಾರದ ಗುರಿ. ನಮ್ಮ ಮಠದ ಆಶ್ರಯದಲ್ಲಿ ಈ ಉದ್ಯಮಗಳ ಸಾಧನೆಯು ನಡೆದಿದ್ದರೆ ಅದು ಈ ಉದ್ದೇಶದಿಂದ ಮಾತ್ರವಲ್ಲದೆ ಬೇರೆಯಲ್ಲ. ಇದನ್ನು ಮನಗಂಡು ನಮ್ಮ ಘನ ಸರ್ಕಾರದವರು ಪೀಠಕ್ಕೆ ನೀಡಿರುವ ಮೊದಲದರ್ಜೆಯ ಬಿರುದು-ಬಾವಲಿಗಳು ತಮ್ಮ ಆದರಾಭಿಮಾನಗಳ ಕುರುಹು. ಆದ್ಯಗುರುವರ್ಯರ ಕೃಪಾಶೀರ್ವಾದದ ಪ್ರತಿಫಲ. ನೂತನವಾಗಿ ರಚಿತವಾಗಿರುವ ಸಿಂಹಾಸನ ಮತ್ತು ಬೆಳ್ಳಿಪಾಲಕಿಗಳ ಸಂಪ್ರೋಕ್ಷಣ ಶುಭಕಾರ್ಯವು ಇಂದು ವಿಧ್ಯುಕ್ತವಾಗಿ ನಡೆದಿದೆ. ಈ ಪೀಠಾರೋಹಣಮಾಡುವ ಗುರುಪರಂಪರೆಯು ಇತೋಽಪ್ಯತಿಶಯವಾದ ಆತ್ಮೋದ್ಧಾರಲೋಕಕಲ್ಯಾಣಗಳನ್ನೆಸಗಿ ಜನತಾಜಗದೀಶ್ವರನ ವಿಶ್ವಾಸ ಪಾತ್ರವಾಗಲೆಂದು ಹಾರೈಸುತ್ತೇವೆ. ಸಿಂಹಾಸನ ಮತ್ತು ಬೆಳ್ಳಿಪಾಲಕಿಗಳನ್ನು ಮಾಡಿಸುವ ಉದ್ಯಮದಲ್ಲಿ ನೀಲಗಿರಿ ಮತ್ತು ಮೈಸೂರು

ಪ್ರಾಂತ್ಯಗಳ ಭಕ್ತಮಂಡಲಿಯವರು ಉದಾರವಾಗಿ ಸಹಾಯಮಾಡಿರುತ್ತಾರೆ. ಇದನ್ನು ಸಿದ್ಧಪಡಿಸುವುದರಲ್ಲಿ ಬೆಂಗಳೂರಿನ ಸುಪ್ರಸಿದ್ಧ ವ್ಯಾಪಾರಿಗಳಾದ ಶ್ರೀ ಶಂಕರಪ್ಪ ಶೆಟ್ಟರು ಮತ್ತು ಅವರ ಬಂಧುವರ್ಗದವರು ಅಮಿತಸೇವೆ ಸಲ್ಲಿಸಿದ್ದಾರೆ. ಇವರೆಲ್ಲರಿಗೂ ಆದಿ ಗುರುವರ್ಯರು ಸಕಲ ಸೌಮಂಗಲ್ಯಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ. ಇದರಂತೆ ಪೀಠದ ಅನೇಕಾನೇಕ ಕಾರ್ಯಕಲಾಪಗಳಲ್ಲಿ ಭಾಗವಹಿಸಿರುವ ತಮ್ಮೆಲ್ಲರಿಗೂ ಚಿರಾಯುರಾರೋಗ್ಯೈಶ್ವರ್ಯಗಳನ್ನು ಶ್ರೀ ಗುರುಶಿವರಾತ್ರೀಶ್ವರನು ಅನುಗ್ರಹಿಸಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಸರ್ವೇ ಭವಂತು ಸುಖಿನಃ ಸರ್ವೇ ಸಂತು ನಿರಾಮಯಾಃ ।
ಸರ್ವೇ ಭದ್ರಾಣಿ ಪಶ್ಯಂತು ಮಾಕಶ್ಚಿದ್ದುಃಖಭಾಗ್ಭವೇತ್ ॥
ಓಮ್ ತತ್ಸತ್



# ಶಿವಯೋಗ ಸಂಸ್ಕೃತಿ

—ೞೞ—

ೂರು ತಾಲ್ಲೂಕು ಗಿರಿಯಾಪುರ ಶ್ರೀ ಕುಮಾರಾಶ್ರಯದಲ್ಲಿ ಹಾನಗಲ್ಲ
ರಾ॥ ಶ್ರೀ ನಿ.ಪ್ರ. ಕುಮಾರಸ್ವಾಮಿ ಸ್ಮಾರಕ ಶಿವಾದ್ವೈತ ತತ್ತ್ವಪ್ರಚಾರಕ
ಸಮಿತಿಯ ಆಶ್ರಯದಲ್ಲಿ ನಡೆದ ಏಳನೆಯ ಶಿವಾನುಭವ ಸಮ್ಮೇಳನದಲ್ಲಿ
ಶ್ರೀ ಸುತ್ತೂರು ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ಜಗದ್ಗುರು
ಶಿವರಾತ್ರಿಮಹಾಸ್ವಾಮಿಗಳವರು ಅಪ್ಪಣೆಕೊಡಿಸಿದ ಅಧ್ಯಕ್ಷ ಭಾಷಣ
(ತಾ॥ 3-3-1956)

ಪರಮಪೂಜ್ಯರಾದ ಗುರುವಿರಕ್ತಮೂರ್ತಿಗಳೇ, ಶರಣ ಶರಣೆಯರೇ ಮತ್ತು ಹಾಶಯರೇ,

ಪವಿತ್ರಾತ್ಮರಾದ ಲಿಂಗೈಕ್ಯ ಹಾನಗಲ್ಲ ಶ್ರೀ ಶಿವಕುಮಾರ ಶಿವಯೋಗಿಗಳ ಸವಿ ನಪಿಗಾಗಿ ಸ್ಥಾಪಿತವಾಗಿರುವ ಶಿವಾದ್ವೈತ ತತ್ತ್ವಪ್ರಚಾರಕ ಸಮಿತಿಯ ಆಶ್ರಯ ಲ್ಲಿ ಏರ್ಪಟ್ಟಿರುವ ಈ ಮಹಾಸಮಾರಂಭದ ಅಧ್ಯಕ್ಷತೆಯನ್ನು ವಹಿಸುವುದು ನಮಗೆ ತ್ಯಂತ ಸಂತೋಷವನ್ನುಂಟುಮಾಡಿದೆ. ಸುಮಾರು ಏಳು ವರ್ಷಗಳ ಹಿಂದೆ ಶ್ರೀ ೀ ಕುಮಾರಸ್ವಾಮಿಗಳವರ ಪ್ರತಿಬಿಂಬದಂತಿರುವ ಷ॥ ಬ್ರ॥ ಶ್ರೀ ಶ್ರೀ ಸದಾಶಿವ ವಾಚಾರ್ಯ ಮಹಾಸ್ವಾಮಿಗಳವರ ಕ್ರತುಶಕ್ತಿಯ ಪ್ರಭಾವದಿಂದ ಈ ಸಾಂಸ್ಕೃತಿಕ ಂಸ್ಥೆಯು ಸ್ಥಾಪಿತವಾದುದಾಗಿ ಕೇಳಿರುತ್ತೇವೆ.

ಪರಮಪವಿತ್ರವಾದ ವೀರಶೈವ ಧರ್ಮತತ್ತ್ವಗಳನ್ನು ಜಗತ್ತಿಗೆ ಬೀರಿ ಕೃತಾರ್ಥ ಾದ ಶ್ರೀ ಕುಮಾರಸ್ವಾಮಿಗಳವರು ವೀರಶೈವ ಮಹಾಸಭೆ ಮತ್ತು ಶಿವಯೋಗ ುಂದಿರ ಮಹಾಸಂಸ್ಥೆಗಳನ್ನು ಸ್ಥಾಪಿಸಿ ಅಮರರಾದರು. ಅವರ ಅತ್ಯಂತ ಕೃಪೆಗೆ ಾತ್ರರಾದ ಶ್ರೀ ಸದಾಶಿವಶಿವಾಚಾರ್ಯ ಮಹಾಸ್ವಾಮಿಗಳವರೂ ಸಹ ತಮ್ಮ ಗುರು ರ್ಯರ ಆದರ್ಶ ತತ್ತ್ವಗಳನ್ನು ಆಚರಿಸುತ್ತಿರುವುದು ಮಹತ್ವದ ಅಂಶ.

ಅಧೀತಿ ಬೋಧ ಆಚರಣ ಮತ್ತು ಪ್ರಸಾರಗಳು ಉತ್ತಮ ಗುರುವರ್ಯರ ಮುಖ್ಯ ಲಕ್ಷಣಗಳು. ಗುರುಮುಖದಿಂದ ಬಾಲ್ಯದಲ್ಲಿ ವಿದ್ಯಾಭ್ಯಾಸಮಾಡಿ, ಸಚ್ಛಿಷ್ಯರಿಗೆ ತಾವರಿತುದನ್ನು ಬೋಧಿಸುತ್ತಿರುವುದಲ್ಲದೆ ಸಂಸ್ಕೃತ ಮತ್ತು ಕನ್ನಡ ಗ್ರಂಥಗಳ ಮೂಲಕ ಧರ್ಮತತ್ತ್ವಗಳನ್ನು ಪ್ರಕಟಿಸುತ್ತಾ, ತಾವೂ ಅದೇ ರೀತಿ ನಡೆದು, ಇಂಥ ಸಮ್ಮೇಳನಗಳ ಮೂಲಕ ಧರ್ಮತತ್ವಗಳನ್ನು ಪ್ರಸಾರಮಾಡುತ್ತಿರುವುದು ಶ್ರೀಯವರ ಆಚಾರ್ಯತ್ವವನ್ನು ಸಾರ್ಥಕಮಾಡಿದೆ. ಭಗವತ್ಪಾದ ರೇಣುಕಾಚಾರ್ಯರು—

ಅಚಿನೋತಿ ಚ ಶಾಸ್ತ್ರಾರ್ಥಾನಾಚರೇ ಸ್ಥಾಪಯತ್ಯಲಂ ।
ಸ್ವಯಮಾಚರತೇ ಯಸ್ಮಾತ್ ಆಚಾರ್ಯಸ್ತೇನ ಚೋಚ್ಯತೇ ॥
(ಸಿ.ಶಿ.ಪ. 15. ಶ್ಲೋ.9)

ಎಂಬ ಮಾತು ಶ್ರೀಯವರಿಗೆ ಅಕ್ಷರಶಃ ಅನ್ವಯಿಸುತ್ತದೆಯೆಂದರೆ ಅತಿಶಯೋಕ್ತಿಯಲ್ಲ. ಇಂಥ ಗುರುವರ್ಯರ ಮಾರ್ಗದರ್ಶಿತ್ವದಲ್ಲಿ ಮುನ್ನಡೆಯುತ್ತಿರುವ ಸಮಿತಿ ಮತ್ತು ಈ ಭಾಗದ ಜನರು ಧನ್ಯರು ! ಶ್ರೀಯವರ ಸೇವೆ ಇತೋಪ್ಯತಿಶಯವಾಗಿ ಬೆಳೆದು ಬೆಳಗಲೆಂದು ಪ್ರಾರ್ಥಿಸುತ್ತೇವೆ.

## ಶಿವಾನುಭವ

ವೀರಶೈವ ಸಾಹಿತ್ಯದಲ್ಲಿ "ಶಿವಾನುಭವ" ಎಂಬ ಪದವು ಅತ್ಯಂತ ಮಹತ್ವವಾದ ಅರ್ಥದಲ್ಲಿ ಬಳಕೆಯಲ್ಲಿದೆ. ಸುಸಂಸ್ಕೃತನಾದ ಜೀವನು ಶಿವಾನುಗ್ರಹದಿಂದ ತನ್ನಲ್ಲಿ ಮೂಡಿದ ಭಕ್ತಿಯ ಸಹಾಯದಿಂದ ಕ್ರಮಕ್ರಮವಾಗಿ ವಿಕಾಸಗೊಂಡು ಶಿವನೊಡನೆ ಅನುಭವಿಸುವ ಅನಿರ್ವಚನೀಯ ಸುಖಾನುಭವವೇ ಶಿವಾನುಭವಶಬ್ದದ ಅರ್ಥ.

## ಮುಕ್ತಿ ಪ್ರಭೇದಗಳು

ಭಾರತೀಯ ತತ್ತ್ವಶಾಸ್ತ್ರದಲ್ಲಿ "ಮುಕ್ತಿ" (ಬಿಡುಗಡೆ) ಎಂಬ ಪದವು ಜೀವನನ್ನು ಜನನಮರಣಾತ್ಮಕವಾದ ಬಂಧನದಿಂದ ಸಂಪೂರ್ಣ ಬಿಡಿಸುವ ಅರ್ಥದಲ್ಲಿದೆ. ಮುಕ್ತಿಯೆಂಬುದು ದೇಹತ್ಯಾಗದ ತರುವಾಯ ಅವನವನ ಸಾಧನೆಗೆ ಅನುಗುಣವಾಗಿ ದೊರೆಯುವ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯರೂಪವಾದದು. ಭಾರತೀಯ ಕರ್ಮಕಾಂಡವು ಸಾಲೋಕ್ಯವನ್ನು ಕೊಡುತ್ತದೆ. ವೇದಾಂತ ವಿಭಾಗಗಳಲ್ಲಿ ಒಂದಾದ ದ್ವೈತವು ಸಾಮೀಪ್ಯರೂಪ ಮುಕ್ತಿಯನ್ನೂ, ವಿಶಿಷ್ಟಾದ್ವೈತವು ಸಾರೂಪ್ಯರೂಪ ಮುಕ್ತಿಯನ್ನೂ, ಅದ್ವೈತವು ಸಾಯುಜ್ಯರೂಪವಾದ ಮುಕ್ತಿಯನ್ನೂ ಪ್ರಸ್ತಾಪಿಸಿರುತ್ತವೆ. ಇದರಂತೆ ಶಕ್ತಿವಿಶಿಷ್ಟಾದ್ವೈತವು ಸಾಮರಸ್ಯರೂಪವಾದ ಮುಕ್ತಿಯನ್ನು ಪ್ರತಿಪಾದಿಸುತ್ತದೆ.

## ಶಿವಾನುಭವ ಮತ್ತು ಮುಕ್ತಿಗಳಿಗಿರುವ ಅಂತರ

ಶಿವಾನುಭವ ಮತ್ತು ಮುಕ್ತಿ ಇವೆರಡು ಪದಗಳ ಮುಖ್ಯಾರ್ಥವೂ ಪರಮಾರ್ಥದಲ್ಲಿ ಒಂದೇ ಆದರೂ ಸಾಧನೆಯಲ್ಲಿ ಎರಡಕ್ಕೂ ವ್ಯತ್ಯಾಸವಿದೆ. ಮುಕ್ತಿ ದೇಹತ್ಯಾಗದ ತರುವಾಯ ದೊರೆಯುವ ಫಲ. ಶಿವಾನುಭವವು ಮಾತ್ರ ನಮ್ಮ ಲೌಕಿಕ ಜೀವನದಲ್ಲಿಯೇ ಅನುಭವಿಸಬಹುದಾದ ಅಮೃತಫಲ. ಲೌಕಿಕಪರಮಾರ್ಥಗಳ

ನ್ನು ಸಮತೂಕದಲ್ಲಿ ಜೀವನದಲ್ಲಿ ಬಳಸಿಕೊಂಡು ಬರುವ ದಿವ್ಯಾನುಭವವೇ ಶಿವಾ ನ. ಇದನ್ನು ಜೀವನ್ಮುಕ್ತಿಯೆಂದು ವೇದಾಂತವು ಹೇಳುತ್ತದೆ.

ಮುಕ್ತಾತ್ಮನ ಅನುಭವ ನಮಗಿಲ್ಲ. ಅದು ದೇಹತ್ಯಾಗವಾದಮೇಲೆ ಆಗುವ ುಭವವೆಂದು ಮೊದಲೇ ಹೇಳಿದ್ದೇವೆ. ಮುಕ್ತರಾದವರು ಹಿಂತಿರುಗಿ ಬಂದು ತಮ್ಮ ುಭವವನ್ನು ಹೇಳುವ ಸಂಭವವೇ ಇಲ್ಲ! ಅದನ್ನು ಶಾಸ್ತ್ರಗಳಿಂದ ಮಾತ್ರ ನಾವು ಯಬೇಕಾಗಿದೆ. ಆದರೆ ಶಿವಾನುಭವವನ್ನು ನಮ್ಮ ಜೀವನದಲ್ಲಿಯೇ ಅನುಭವಿಸ ಬುದು. ಪ್ರತಿಯೊಬ್ಬರೂ ಒಂದೊಂದು ವಿಧದಲ್ಲಿ ಒಂದೊಂದು ವಿಧವಾದ ಸುಖಾ ಭವವನ್ನು ಬಲ್ಲರು. ಸಾಮಾನ್ಯ ಲೌಕಿಕರು ಮನೆ, ಮಠ, ಸತಿ, ಸುತ, ಕ್ಷೇತ್ರ, ವಸುಗಳ ಸಂಪಾದನೆಯಲ್ಲಿ ಒಂದು ರೀತಿಯಾದ ಸುಖವನ್ನು ಕಾಣುವರು, ಕವಿ ು ಕಾವ್ಯರಸಮಗ್ನರಾಗುವರು, ಕಲಾವಿದರು ತಮ್ಮ ಕೃತಿನಿರ್ಮಾಣದಲ್ಲಿ ನಿಮಗ್ನ ಗುವರು, ಸಂಗೀತಗಾರರು ಗಾನಮಾಧುರ್ಯದಲ್ಲಿ ತಮ್ಮನ್ನು ಮರೆಯುವರು. ದರಂತೆ ದೈವಭಕ್ತರೂ ಸಹ ತಮ್ಮ ತಮ್ಮ ಆರಾಧ್ಯದೈವದ ಚಿಂತನಾನುಭವದಲ್ಲಿಯೇ ತನ್ಮಯರಾಗಿ ನಿರ್ವಿಕಲ್ಪತೆಯನ್ನು ಪಡೆಯುವುದನ್ನು ಕಾಣುತ್ತೇವೆ.

ಈ ಸ್ಥಿತಿಯನ್ನು ಪಡೆಯಲು ಸಂಸಾರವನ್ನು ತ್ಯಾಗಮಾಡಲೇಬೇಕೆಂಬ ನಿಯ ವಿಲ್ಲ. ವಿಷಯವಿರಕ್ತಿ ಎಂದರೆ ಅನಾಸಕ್ತಿಯಿದ್ದರೆ ಮಾತ್ರ ಸಾಕು. ವಶಿಷ್ಠಾದಿ ಹರ್ಷಿಗಳೂ, ಬಸವಾದಿ ಪ್ರಮಥರೂ ಸಂಸಾರದಲ್ಲಿದ್ದು ವಿರಕ್ತರಾಗಿ ಶಿವಾನುಭವ ಾಡಿದವರು. ಶುಕ ಕಣ್ವ ಮೊದಲಾದ ಮಹರ್ಷಿಗಳೂ, ರಾಮಕೃಷ್ಣ ಪರಮ ಂಸಾದಿಗಳೂ ಸಂಸ್ಕಾರವಶದಿಂದ ವೀತರಾಗರಾಗಿ ಅವತರಿಸಿದ ವಿಭೂತಿಗಳು. ಟ್ಟನಲ್ಲಿ ಅನಾಸಕ್ತಿಯೇ ಬಿಡುಗಡೆಯ ಬೀಗದಕೈ.

ಕುಂಬಾರಹುಳು ಕೆಸರಿನಲ್ಲಿದ್ದರೂ ಕೆಸರಿಗಂಟದೆ ನಿರ್ಮಲವಾಗಿರುತ್ತದೆ. ಕಮಲ ಲೆಯು ನೀರಿನಲ್ಲಿದ್ದರೂ ನೆನೆಯುವುದಿಲ್ಲ. ಜೇಡರಹುಳು ತನ್ನ ಎಂಜಲಿನಿಂದಲೇ ನ್ನ ಗೂಡನ್ನು ನಿರ್ಮಿಸಿಕೊಂಡು ಅಲ್ಲಿಲ್ಲ ವಿಹರಿಸಿ ಕಡೆಗೆ ಅದರಲ್ಲಿಯೇ ಅಡಗುವುದು. ದರಂತೆ ಸದ್ಭಕ್ತನು ತನ್ನಲ್ಲಿರುವ ಭಗವತ್ ಚೈತನ್ಯದಿಂದ ನಿರ್ಮಿತವಾದ ಈ ವಿಶ್ವ ವ್ಯಾಪಾರಗಳಲ್ಲಿ ತೊಡಗಿದ್ದರೂ ಇವೆಲ್ಲವೂ ಭಗವಂತನ ಲೀಲೆಯೆಂಬ ಸದ್ಭಾವನೆ ಯನ್ನು ಹೊಂದಿರುವನು. ಇದರಿಂದ ಅವನು ಅನುಭವಿಸುವ ಸ್ರಕ್, ಚಂದನ ಮೊದಲಾದ ವಿಷಯಗಳೆಲ್ಲ ಭಗವಂತನ ಪ್ರಸಾದವೆಂದೆನಿಸುವುವು.

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ ॥**
(ಗೀತೆ 9-2 ೭.)

ಎಂಬ ಗೀತೋಕ್ತಿಯು ಇದೇ ಅಂಶವನ್ನು ಸ್ಪಷ್ಟಪಡಿಸುತ್ತದೆ. ಇದನ್ನೇ ಉ
ನಿಷತ್ತು "ತೇನ ತ್ಯಕ್ತೇನ ಭುಂಜೀಥಾಃ"—(ಈಶಾವಾಸ್ಯ) ಎನ್ನುತ್ತದೆ. ವೀರಶೈ
ಧರ್ಮವು ಇದೇ ಅಂಶವನ್ನು ಲಿಂಗಭೋಗೋಪಭೋಗ ಎಂದು ಕರೆಯುತ್ತದೆ.

## ಅನಾಸಕ್ತಿಯೋಗ ಪ್ರಸಾದೋಪಭೋಗ

ಪ್ರಸಾದೋಪಭೋಗಿಯ ಶರೀರ, ಮನಸ್ಸು ಮತ್ತು ಆತ್ಮಗಳು ಪ್ರಸಾದನಿ
ತ್ರವೆ. ಪದಾರ್ಥೋಪಭೋಗಿಯು ಪದಾರ್ಥಕಾಯನು. ಪದಾರ್ಥಸೇವನೆ
ಭವಕ್ಕೆ ದಾರಿ. ಪ್ರಸಾದಸೇವನೆಯು ಭವವಿಮೋಚನೆಯ ಮಾರ್ಗ. ಪ್ರಸಾದಸೇ
ಕೇವಲ ಕೊಳೆದು ಕುಡಿಯುವುದು ಮಾತ್ರವೇ ಅಲ್ಲ. ಆದರೆ ಅದು ಪ್ರಸಾದ ಸ
ನೆಯ ಮಾರ್ಗಗಳಲ್ಲೊಂದು. ಪಂಚೇಂದ್ರಿಯಗಳ ಮೂಲಕ ಗ್ರಹಿಸುವ ಪ್ರತಿಯೊ
ವಿಷಯವೂ ಪ್ರಸಾದವಾಗಿರಬೇಕು. ನಾಸಿಕ, ಜಿಹ್ವೆ, ಕಣ್ಣು, ಚರ್ಮ, ಶ್ರೋ
ಎಂಬ ಪಂಚೇಂದ್ರಿಯಗಳಲ್ಲಿ ಭಾವನೆಯ ಮೂಲಕ ಆಚಾರ, ಗುರು, ಶಿವ, ಜಂಗ
ಪ್ರಸಾದ, ಲಿಂಗಗಳನ್ನು ಸ್ಥಾಪಿಸಿ ಆಯಾ ವಿಷಯವನ್ನು ಆಯಾ ಲಿಂಗಕ್ಕೆ ಸಮರ್ಪ
ಮಾಡಿ ಸೇವಿಸಬೇಕೆಂದು ವೀರಶೈವ ತತ್ತ್ವಶಾಸ್ತ್ರವು ಹೇಳುತ್ತದೆ. ಇದರ ಮು
ತಾತ್ಪರ್ಯ ನಾವು ಸ್ವೀಕರಿಸುವ ಪ್ರತಿಯೊಂದು ವಿಷಯವೂ ಧರ್ಮ ಮತ್ತು ಸಾಮಾಜಿ
ನೀತಿಗಳಿಗೆ ವಿರುದ್ಧವಾಗಿರಬಾರದೆಂಬುದೇ ಆಗಿದೆ.

ನೀತಿಯು ತತ್ತ್ವಶಾಸ್ತ್ರದ ಅಡಿಗಲ್ಲು. ಅದು ಸಮಾಜಶಾಸ್ತ್ರಕ್ಕೆ ಬೀಜ
ಆಗಿದೆ. ನೀತಿಯ ನೆಲೆಗಟ್ಟಿಲ್ಲದವನು ಎಷ್ಟು ಶಾಸ್ತ್ರಗಳನ್ನು ಮೊಗಚಿಹಾಕಿದರ
ಪ್ರಯೋಜನವಿಲ್ಲ. ಬುದ್ಧಿಗತವಾದ ವಿಚಾರವು ಕೃತಿಗೆ ಇಳಿದಾಗಲೇ ಅದು ಸಾರ್ಥ
ವಾಗುವುದು. ಬುದ್ಧಿಯ ಪ್ರಭಾವದಿಂದ ನೂರಾರು ಗ್ರಂಥಗಳನ್ನು ಬರೆಯಬಹುದ
ತಿಂಗಳುಗಳವರೆಗೆ ಪ್ರವಚನ ನಡೆಯಿಸಬಹುದು. ಆದರೆ ನಡೆಯಲ್ಲಿ ಅದನ್ನು ತಾ
ದಿದ್ದ ಪಕ್ಷದಲ್ಲಿ ಅದೆಲ್ಲ ಕಾಗದದ ಕುಸುಮದಂತೆ ವ್ಯರ್ಥವೇ ಆಗುತ್ತದೆ. ಅದಕ್ಕಾಗಿಯ
ಮಹಾತ್ಮರಾದ ಬಸವಣ್ಣನವರು ನುಡಿದಂತೆ ನಡೆವುದು, ನಡೆದಂತೆ ನುಡಿಯುವುದ
ಎಂಬ ವಿಷಯವಾಗಿ

> "ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪಿದರೆ
> ಹಿಡಿದಿರ್ದ ಲಿಂಗವು ಘಟಸರ್ಪನಂತೆ!"
> "ನಡೆಯಲರಿಯದೆ ನುಡಿಯಲರಿಯದೆ
> ಲಿಂಗವ ಪೂಜಿಸಿ ಫಲವೇನು?"

ಎಂದಿದ್ದಾರೆ. ಬಸವಣ್ಣನವರಿಗೆ ನುಡಿದರೆ ಮುತ್ತಿನಹಾರದಂತಿರಬೇಕಂತೆ
ನುಡಿದರೆ ಲಿಂಗದೇವನು ಮೆಚ್ಚಿ ಅಹುದೆನಬೇಕಂತೆ! ಎಂಥ ಪವಿತ್ರವಾದ ಮಾತು
ನಮ್ಮ ಮಾತಿನ ಮಾಲೆಯಿಂದ ಹೆರರನ್ನು ಮುಗ್ಧಗೊಳಿಸಿ ಅವರಿಂದ ಪ್ರಶಂಸೆ ಪಡೆಯ

ಹುದು. ಆದರೆ ನಮ್ಮ ಒಳಹೊರಗುಗಳನ್ನೆಲ್ಲಾ ಮನಗಂಡ ಪರಮಾತ್ಮನನ್ನು ಮರುಳುಮಾಡಲು ಸಾಧ್ಯವೇ? ಅಂತರಂಗ ಬಹಿರಂಗಗಳ ಪವಿತ್ರತೆಯನ್ನು ಹಾಗೂ ನೈರ್ಮಲ್ಯವನ್ನು ಸಾಧಿಸುವುದೇ ಶಿವಾನುಭವದ ಗುರಿ.

ಕರ್ಮೇಂದ್ರಿಯಾಣಿ ಸಂಯಮ್ಯ ಯ ಅಸ್ತೇ ಮನಸಾ ಸ್ಮರ್ರ ।
ಇಂದ್ರಿಯಾರ್ಥಾರ್ ವಿಮೂಢಾತ್ಮಾ ಮಿಥ್ಯಾಚಾರಸ್ಸ ಉಚ್ಯತೇ ॥
(ಗೀತೆ 3-6)

ಕೇವಲ ಬಾಹ್ಯ ಇಂದ್ರಿಯಗಳನ್ನು ಮಾತ್ರ ನಿಗ್ರಹಮಾಡಿ ಮಾನಸಿಕವಾಗಿ ವಿಷಯಲಂಪಟನಾಗಿರುವುದು ಮಿಥ್ಯಾಚಾರ. ಆದ್ದರಿಂದ ಮನಃಪೂರ್ವಕವಾಗಿ ವಿಷಯ ವ್ಯಾಮೋಹವನ್ನು ತ್ಯಜಿಸುವುದೇ ನಿಜವಾದ ಸಾಧನೆಯೆಂದು ತತ್ತ್ವಶಾಸ್ತ್ರವು ಹೇಳುತ್ತದೆ. ಆದರೆ ಈ ಸ್ಥಿತಿಯು ಶಿವಾನುಭವಿಗೆ ಬಹು ಸುಲಭವಾಗಿ ಕೈವಶವಾಗುತ್ತದೆ. ಪ್ರಸಾದೀಕರಣವೇ ಆ ಸಾಧನ.

ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।
ಪ್ರಸನ್ನ ಚೇತಸೋಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥ (ಗೀ.2-65)

ಮನಸ್ಸು ಪ್ರಸನ್ನವಾಗಬೇಕಾದರೆ ನಾವು ಗ್ರಹಿಸುವ ವಿಷಯಗಳು ಪ್ರಸಾದವಾಗಬೇಕು. ಅಂಥ ಪ್ರಸಾದಸೇವನೆಯಿಂದ ಮನಸ್ಸು ಪ್ರಸನ್ನವಾಗುತ್ತದೆ. ಆದರಿಂದ ಎಲ್ಲ ದುಃಖಗಳೂ ದೂರವಾಗುತ್ತವೆ. ದುಃಖರೂಪವಾದ ಕತ್ತಲು ಹರಿಯಿತೆಂದರೆ ಜ್ಞಾನಸೂರ್ಯನು ಮೂಡುತ್ತಾನೆ. ಆಗಲೇ ಶಿವನ ದಿವ್ಯಾನುಭವವು ನಮಗೆ ಆಗುವುದು. ನಾವು ಮಾಡುವ ಎಲ್ಲಾ ಕರ್ಮಗಳನ್ನೂ ಶಿವಾರ್ಪಣಬುದ್ಧಿಯಿಂದ ಮಾಡಿದರೆ ನಮಗೆ ಕರ್ಮಲೇಪವಾಗುವುದಿಲ್ಲ.

### ಶಿವಾನುಭವಸಾಧನೆಗೆ ಸುಲಭಮಾರ್ಗ

ನ ಮಮೇದಂ ಜಗತ್ಸರ್ವಂ ಶಿವಾಯೇತಿ ಶಿವಾರ್ಪಣಂ ।
ಅನಿಧತ್ತೇ ದ್ವಿಮಾತ್ರಾಹ್ವೋ ಮಂತ್ರೋ ಲುಪ್ತಮಕಾರಕಃ ॥
ತಸ್ಮಾದರ್ಪಣಸದ್ಭಾವ ಜ್ಞಾನಮೇವ ಸಮುಚ್ಯತೇತ್ ॥
(ಅನುಭವಸೂತ್ರ 7-30)

ಎಂದರೆ "ಈ ಜಗತ್ತು ನನ್ನದಲ್ಲ ಶಿವನದು" ಎಂಬ ಭಾವವನ್ನು ಒತ್ತಿಒತ್ತಿ ಹೇಳುವುದೇ ಮಂತ್ರಜಪದ ತತ್ತ್ವ. ಅದು ಸುಮ್ಮನೆ ಒಮ್ಮೆ ಉಚ್ಚರಿಸಿಬಿಟ್ಟರಾಗದು. ಅರ್ಥಾನುಸಂಧಾನಪೂರ್ವಕ ಪುನಃ ಪುನಃ ಉಚ್ಚರಿಸುವುದೇ ಜಪತತ್ತ್ವದ ರಹಸ್ಯ. ಅನಾದಿವಾಸನಾರೂಪವಾಗಿ ಜೀವನಿಗೆ ಅಂಟಿಬಂದಿರುವ ಮಮಕಾರಜಾಡ್ಯವು ಹರಿಯ

ಬೇಕಾದರೆ ಮಂತ್ರಜಪಸಂಜೀವಿನಿಯೇ ದಿವ್ಯೌಷಧಿ. ಅದಕ್ಕಾಗಿಯೇ ಎಲ್ಲಾ
ಆಚಾರ್ಯರೂ ಮಂತ್ರಜಪವನ್ನು ವಿಧಿಸಿರುವುದು.

ವಿದ್ಯಾಸು ಶ್ರುತಿರುತ್ಕೃಷ್ಟಾ ರುದ್ರೈಕಾದಶಿನೀ ಶ್ರುತೌ ।
ತತ್ರ ಪಂಚಾಕ್ಷರೀ ತಸ್ಯಾಂ ಶಿವ ಇತ್ಯಕ್ಷರದ್ವಯಂ ॥

ಎಂಬ ಉಕ್ತಿಯಂತೆ ಅರವತ್ತುನಾಲ್ಕು ವಿದ್ಯೆಗಳಲ್ಲಿ ಶ್ರುತಿಗಳು ಶ್ರೇಷ್ಠ. ಅವು
ಗಳಲ್ಲಿ ರುದ್ರಾಧ್ಯಾಯ, ಶ್ರೀ ರುದ್ರದಲ್ಲಿ ಎಂಟನೆಯ ಅನುವಾಕ. ಅಲ್ಲಿ "ನಮಃ
ಶಿವಾಯ" ಎಂಬ ಶಿವಪಂಚಾಕ್ಷರಿಯು ಮುಖ್ಯ. ಅದರಲ್ಲಿಯೂ "ಶಿವ" ಎಂಬ ಎರಡು
ಅಕ್ಷರಗಳು ಅತ್ಯಂತ ಮುಖ್ಯ.

ಶ್ರೀಯಂ ಪಡೆವೊಡೆ ಶಾಶ್ವತ
ದಾಯುಷ್ಯದಪೇಕ್ಷೆ ತನಗೆ ಕೈಗೂಡುವೊಡಾ ।
ಮಾಯೆಗೊಳಗಾಗದಿರ್ದೊಡೆ
ಜೀಯೆನೆ ಜಪವೋಂ ನಮಶ್ಶಿವಾಯೆಂಬ ಪದಂ ॥ —ಕೇಶಿರಾಜ

ಅಷ್ಟೈಶ್ವರ್ಯಗಳನ್ನು ಮತ್ತು ಶಾಶ್ವತವಾದ ಸುಖನೀಡುವ ಮುಕ್ತಿಯನ್ನು
ಪಡೆಯುವುದಕ್ಕೆ ಮತ್ತು ಅಜ್ಞಾನವು ನಮ್ಮನ್ನು ಆವರಿಸದಿರುವುದಕ್ಕೆ "ಓಂ ನಮಃ
ವಾಯ" ಎಂಬ ಮಂತ್ರವನ್ನು ನಿರಂತರವೂ ಜಪಿಸುತ್ತಿರಬೇಕು.

ತತಃ ಪಂಚಾಕ್ಷರೀ ವಿದ್ಯಾ ಸಾಹಿತ್ಯಮಧುನೋಚ್ಯತೇ । (ಅ.ಸೂ. 6-43)
ಅಧ್ಯಾತ್ಮಸಾಧನೆಯಲ್ಲಿ ಪಂಚಾಕ್ಷರೀ ವಿದ್ಯೆ ಮಧು ಎಂದು ಹೇಳಲ್ಪಟ್ಟಿದೆ.
ಪಂಚಾಕ್ಷರೀ ಪರಾ ವಿದ್ಯಾ ಸತಾರಾತು ಷಡಕ್ಷರೀ । (ಅ.ಸೂ. 7-44)

ಇದನ್ನೇ ಮುಂಡಕೋಪನಿಷತ್ತು "ಪರಾವಿದ್ಯಾ" ಎಂದು ಕರೆದಿರುವುದು.
ಇಂಥ ಮಹತ್ವಪೂರ್ಣವಾದ ಮಹಾಮಂತ್ರವನ್ನು ಗುರುಮುಖದಿಂದ ಪಡೆದು ವಿ
ಪೂರ್ವಕವಾಗಿ ಜಪಿಸಿದಲ್ಲಿ ಇಹ–ಪರ ಸುಖಗಳೆರಡೂ ಪ್ರತ್ಯಕ್ಷಜೀವನದಲ್ಲಿಯೇ ಕ
ಗತವಾಗುವುದರಲ್ಲಿ ಸಂದೇಹವಿಲ್ಲ.

ತಮ್ಮ ಬಿನ್ನವತ್ತಳೆಯಲ್ಲಿ ನಮ್ಮ ವಿಷಯದಲ್ಲಿ ತಾವು ಅನೇಕ ವಿಷಯಗಳನ್ನು
ಪ್ರಸ್ತಾಪಿಸಿರುತ್ತೀರಿ. ಆದರೆ ನಮ್ಮ ಪೀಠದಿಂದ ಸಮಾಜಕ್ಕಾಗಿ ಸಲ್ಲುತ್ತಿರುವ ಅಳಿ
ಸೇವೆಯು ನಮ್ಮ ಕರ್ತವ್ಯವೆಂದು ಭಾವಿಸಿದ್ದೇವೆ.

## ಲೇಖನ ಜಪದ ಹಿರಿಮೆ

ಜಪವು ವಾಚಿಕ ಉಪಾಂಶು ಮತ್ತು ಮಾನಸಿಕವೆಂದು ಮೂರುವಿಧ. ಇ

ಳಲ್ಲಿ ಉತ್ತರೋತ್ತರವು ಹೆಚ್ಚು ಫಲಪ್ರದ. ಮಾನಸಿಕ ಜಪವು ಲೇಖನದಿಂದ ಚೆನ್ನಾಗಿ ಸಿದ್ಧಿಸುತ್ತದೆ. ನಿರ್ಮಲವಾದ ಸ್ಥಳದಲ್ಲಿ ಕುಳಿತು ಶುಚಿರ್ಭೂತರಾಗಿ ಪ್ರತಿನಿತ್ಯವೂ ನಿಯಮಿತ ಸಂಖ್ಯೆ ಮಂತ್ರವನ್ನು ನಿಷ್ಠೆಯಿಂದ ಬರೆಯಬೇಕು. ಅಕ್ಷರಗಳು ಎಷ್ಟು ಶುದ್ಧವೂ, ಸ್ಫುಟವೂ, ಸುಂದರವೂ ಆಗಿರುತ್ತವೆಯೋ ಅವಷ್ಟೇ ಮಾನಸಿಕ ಏಕಾಗ್ರತೆಯು ಸಿದ್ಧಿಸುತ್ತದೆ. ಅಕ್ಷರ ಲಕ್ಷ, ಅಕ್ಷರ ಕೋಟಿಯವರಿಗೂ ಬರೆಯಬಹುದು. ಇದರಿಂದ ತಾನಾಗಿಯೇ ಶ್ವಾಸನಿಯಂತ್ರಿವಾಗುತ್ತದೆ. ಪ್ರಾಣಾಯಾಮದ ಕಟ್ಟಕಡೆಯ ಗುರಿಯಾದ ಕುಂಭಕವು ಸುಲಭವಾಗಿ ಕೈವಶವಾಗುತ್ತದೆ. ನಮಗೆ ಎಷ್ಟೋ ವರ್ಷಗಳಿಂದ ಇದ್ದ ಶ್ವಾಸರೋಗವು ನಾವು ಮಂತ್ರಲೇಖನವನ್ನು ಆರಂಭಿಸಿದ ಮೇಲೆ ಸಂಪೂರ್ಣ ನಿಂತಿದೆಯೆಂಬುದು ನಮ್ಮ ಸ್ವಾನುಭವಸಿದ್ಧವಾಗಿದೆ. ಪರಮೇಶ್ವರನ ಕೃಪೆಯಿಂದ ನಾವು ನಾಲ್ಕೂವರೆ ವರ್ಷಗಳಲ್ಲಿ ತೊಂಭತ್ತುನಾಲ್ಕು ಲಕ್ಷ ಸಂಖ್ಯೆ ಮಂತ್ರವನ್ನು ಬರೆದಿರುತ್ತೇವೆ. ಈ ಲೇಖನದ ಫಲವನ್ನು ಲೋಕಕ್ಷೇಮಕ್ಕಾಗಿ ಮುಡುಪುಮಾಡಿರುತ್ತೇವೆ. ಸಮಸ್ತ ಭಕ್ತವೃಂದವೂ ಗುರುಮುಖದಿಂದ ಈ ಪವಿತ್ರ ಮಂತ್ರಜಪ ಮತ್ತು ಲೇಖನ ವಿಧಾನಗಳನ್ನು ಅರಿತು ಶಿವಾನುಭವ ಮಾಡಿಕೊಳ್ಳಲೆಂದು ಆಶಿಸುತ್ತೇವೆ. ಇದೇ ಶಿವಾನುಭವಯೋಗದ ರಹಸ್ಯ. ನಮ್ಮ ನಿತ್ಯಜೀವನವನ್ನು ಹಸನುಮಾಡಿಕೊಂಡು, "ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ" ಎಂಬ ಬಸವಣ್ಣನವರ ನುಡಿಯಂತೆ ಇಹದಲ್ಲಿನ ಈ ಜೀವಮಾನದಲ್ಲಿಯೇ ಶಿವಾನುಭವ ಪಡೆದು ಅಮೃತರಾಗಬೇಕು. ಈ ಶಿವಾನುಭವ ಸಮ್ಮೇಳನದಿಂದ ಅಂಥ ಅಮೃತಸನ್ನಿವೇಶವು ಭಕ್ತವೃಂದಕ್ಕೆ ಲಭಿಸಲೆಂದು ಪ್ರಾರ್ಥಿಸುತ್ತೇವೆ.

## ನಮ್ಮ ಸಂಸ್ಕೃತಿ ಸಂರಕ್ಷಣೆಯ ಬಗ್ಗೆ ಒಂದು ಮಾತು

ಜಗತ್ತು ದಿನೇ ದಿನೇ ಮುಂದುವರಿಯುತ್ತಿದೆ. ರಾಜಕೀಯ ಆಂದೋಲನಗಳ ಫಲವಾಗಿ ನಾಡು ನುಡಿಗಳ ಪುನರ್ಘಟನೆ ಅಲ್ಲೋಲಕಲ್ಲೋಲವಾಗುತ್ತಿದೆ. ಸುಮಾರು ಅರ್ಧಶತಮಾನದಿಂದ ಹಂಬಲಿಸುತ್ತಿದ್ದ ಭಾಷಾವಾರು ಪ್ರಾಂತ ವಿಭಜನೆ ದಿನದಿನಕ್ಕೆ ಕಗ್ಗಂಟಾಗುತ್ತಿದೆ. ಒಂದೊಂದು ಭಾಷೆಯ ಸಾಹಿತ್ಯದಲ್ಲಿಯೂ ಒಂದೊಂದು ವಿಶಿಷ್ಟ ಗುಣವಿದೆ. ಎಲ್ಲ ಭಾಷೆಗಳೂ ಭಾರತ ಸಂಸ್ಕೃತಿಯನ್ನೇ ಹೊತ್ತು ಸಾಗುತ್ತಿದ್ದರೂ ಭಾಷೆಯದೇ ಆದ ಒಂದು ಪ್ರಭಾವ ಆಯಾ ಜನಾಂಗದಲ್ಲಿ ಹಾಸುಹೊಕ್ಕಾಗಿ ಹರಿದಾಡುತ್ತಿದೆ. ನರನಾಡಿಗಳಲ್ಲಿ ಪ್ರತಿಯೊಂದು ರಕ್ತಕಣಗಳಲ್ಲಿ ಸ್ಫೂರ್ತಿಯನ್ನು ಕೊಡುವುದಾಗಿದೆ. ನಾಡು ಸ್ವತಂತ್ರವಾದ ಮೇಲೆ ಸುಲಭವಾಗುವುದೆಂದು ಎಣಿಸಿದ್ದ ಸಮಸ್ಯೆಗಳು ಬೃಹದಾಕಾರ ತಾಳುತ್ತಿವೆ. ದ್ವಿಭಾಷಾ ತ್ರಿಭಾಷಾ ಪ್ರಾಂತರಚನೆಯ ಕನಸು ಬೇರೆ ಇತ್ತೀಚಿಗೆ ಕಾಣತೊಡಗಿದೆ.

ಎಷ್ಟೇ ರಾಜಕೀಯ ಪರಿವರ್ತನೆಗಳಾದರೂ ಜನತೆಯ ಆತ್ಮವೇನೂ ಪರಿವರ್ತ

ನೆಯಾಗಲಾರದು. ಭಾರತೀಯತೆ ಅಳಿಯಲಾರದು. ಸಂಕುಚಿತವಾದ ಅಭಿಮಾನ ಗಳಿಗೆ ವಶರಾಗಿ ಉದ್ವೇಗ, ಕೋಪತಾಪಗಳಿಗೆ ಅಧೀನರಾಗಬಾರದು. ಇದರಿಂದ ರಾಷ್ಟ್ರದ ಶಕ್ತಿ ಸಡಿಲವಾಗುತ್ತದೆ. ಭಾರತ ಸ್ವಪ್ರಭುತ್ವದ ಏಳ್ಗೆಯ ಬಗ್ಗೆ ವಿಶ್ವರೆಪ್ಪೆ ಹೊಡೆಯದೆ ನೋಡುತ್ತಿದೆ. ಆ ನೋಟದಲ್ಲಿ ಅನೇಕ ದೃಷ್ಟಿಗಳೂ ಇವೆ. ಬೆಗರಿಯ ಚಕಿತ ದೃಷ್ಟಿಯೊಂದು ಕಡೆ, ಗೃಧ್ರದೃಷ್ಟಿ ಮತ್ತೊಂದು ಕಡೆ. ಕುತೂಹಲ ಇನ್ನೊಂದು ಕಡೆ. ಮಹಾತ್ಮರ ತಪಶ್ಶಕ್ತಿಯ ಫಲವಾಗಿ ಅನೇಕ ಶತಮಾನಗಳ ತರುವಾಯ ಲಭಿಸಿ ರುವ ಸ್ವಾತಂತ್ರ್ಯದ ಅಮೃತ ಫಲವನ್ನು ಹದವಾಗಿ ಪರಿಪಕ್ವವಾಗುವವರೆಗೆ ಸಂರಕ್ಷಿಸ ಬೇಕು. ಅವಸರಪಟ್ಟಲ್ಲಿ ಕಾಯಿ ಹಣ್ಣಾಗದೆ ಹುಳಿಯಾದೀತೆಂಬ ಹೆದರಿಕೆ ಎಲ್ಲರಿಗೂ ಇರಬೇಕು. ಆ ಫಲವು ಪರರಿಂದ ಅಪಹೃತವಾಗದಂತೆ ಸಂರಕ್ಷಿಸಿಕೊಳ್ಳಬೇಕು. ಈ ಎರಡು ಹೊಣೆಗಾರಿಕೆಯೂ ಭಾರತೀಯರಿಗೆ ಅವಶ್ಯವಿರಬೇಕು.

ನಮ್ಮ ನಾಡಿನ ಸ್ವಾತಂತ್ರ್ಯ ಉಳಿದರೆ ನಮ್ಮ ಸಂಸ್ಕೃತಿ ಉಳಿದೀತು! ಭಾರ ತೀಯ ಸಂಸ್ಕೃತಿ ವಿಶ್ವದ ಎಲ್ಲ ಸಂಸ್ಕೃತಿಗಳಿಗಿಂತ ಪುರಾತನ ಮತ್ತು ಪವಿತ್ರ. ಇಂಥ ಉದಾತ್ತ ಸಂಸ್ಕೃತಿಯ ಸಂರಕ್ಷಣೆಯ ಬಗ್ಗೆ ವಿಶ್ವವೇ ಕಾತರವಾಗಿದೆ. ಭಾರತೀಯರು ಆ ಬಗ್ಗೆ ತುಂಬ ಎಚ್ಚರಗೊಂಡಿರಬೇಕು.

ವೀರಶೈವ ಸಂಸ್ಕೃತಿ ಭಾರತ ಸಂಸ್ಕೃತಿಯಿಂದ ಬೇರ್ಪಟ್ಟಿದ್ದಲ್ಲ. ಮೇಲಾಗಿ ಅದರ ಒಂದು ಭಾಗವೂ ಅಲ್ಲ. ಭಾರತೀಯ ಸಂಸ್ಕೃತಿಯ ಸಾರ ಸರ್ವಸ್ವವೇ ವೀರ ಶೈವ ಸಂಸ್ಕೃತಿ. ಮೂಲವೇದ ಆಗಮಗಳ ದಿವ್ಯ ಸಂಸ್ಕೃತಿಯ ಪುನರ್ಘಟನೆಯೇ ವೀರಶೈವ ಸಂಸ್ಕೃತಿ. ಕಾಲ ಕರ್ಮಗಳ ಯೋಗದಿಂದ ಭಾರತೀಯ ಸಂಸ್ಕೃತಿಯ ಆದರ್ಶದಲ್ಲಿ ತಲೆದೋರಿದ್ದ ಮಾಲಿನ್ಯವನ್ನು ನಿರ್ಮೂಲಗೊಳಿಸಲು ಅವತರಿಸಿದುದೇ ವೀರಶೈವ ಸಂಸ್ಕೃತಿ. ಆದ್ದರಿಂದಲೇ ಇಂದು ಸಮಾಜ ಸುಧಾರಕರು ಸುಧಾರಣೆ ಮಾಡಬೇಕೆಂದು ಬಯಸುವ, ಸ್ತ್ರೀ ಸುಧಾರಣೆ, ಅಸ್ಪೃಶ್ಯತಾ ನಿವಾರಣೆ, ಸ್ವದೇಶೀ ಪ್ರಚಾರ, ಸರ್ವಸಮಾನತೆ, ಪ್ರಾಚೀನ ಸಾಹಿತ್ಯ ಸಂರಕ್ಷಣೆ, ಕರ್ಮಜ್ಞಾನಗಳ ಸಮ ನ್ವಯ ಮತ್ತು ದ್ವೈತಾದ್ವೈತಗಳ ಸಮನ್ವಯ ಮುಂತಾದ ಲೌಕಿಕ ಪಾರಮಾರ್ಥಿಕ ವಾದ ಎಲ್ಲ ವಿಷಯಗಳಲ್ಲಿಯೂ ಸಮನ್ವಯವನ್ನೇ ವೀರಶೈವ ಸಂಸ್ಕೃತಿ ಸಾರಿದೆ. ಆದ್ದರಿಂದ ವೀರಶೈವರು ತಾವು ಭಾರತೀಯರನ್ನು ಬಿಟ್ಟು ಬೇರೆ ಎಂದು ಭಾವಿಸುವಂತಿಲ್ಲ. ವೀರಶೈವರು ಭಾರತೀಯರೇ! ಭಾರತೀಯರೆಲ್ಲರೂ ವೀರಶೈವ ಸಂಸ್ಕೃತಿಯ ಪರಮ ಧ್ಯೇಯಗಳನ್ನು ಸಾಧಿಸಿದಾಗಲೇ ಇಹ ಪರ ಸಾಧನೆ ಸುಲಭವಾದೀತು! ಎಲ್ಲ ಮತ ಗಳೂ ಇದಕ್ಕಾಗಿಯೇ ಅವತರಿಸಿದುದು. ಎಲ್ಲ ಮತೀಯರೂ ಈ ಧ್ಯೇಯ ಸಾಧನೆಯ ಕಡೆ ಅಭಿಮುಖರಾಗುವಂತೆ ವೀರಶೈವರು ಪ್ರಯತ್ನಿಸಬೇಕು. ಬಸವಾದಿ ಪ್ರಮಥರು ಭೌತಿಕ ರಾಜ್ಯ ಕಟ್ಟುವುದರ ಜೊತೆಗೆ ಸಾಂಸ್ಕೃತಿಕ ಸಾಮ್ರಾಜ್ಯಕ್ಕೂ ಬುನಾದಿ

ಾಕಿದರು. ಅವರು ಮಾಡಿಬಿಟ್ಟಿರುವುದನ್ನು ನಾವಿಂದು ಮಾಡಬೇಕಾಗಿದೆ. ನಾವು ರಂಭಿಸಿರುವ ಶಿಕ್ಷಣ ಪ್ರಸಾರ ಕೇಂದ್ರಗಳಾದ ಪ್ರಸಾದ ನಿಲಯಗಳಲ್ಲಿ ಇದೇ ತತ್ತ್ವ ನ್ನು ಅನುಸರಿಸುತ್ತಿದ್ದೇವೆ.

ಸುಮಾರು 10-12 ಪ್ರಸಾದನಿಲಯಗಳಲ್ಲಿ ಒಟ್ಟು ಒಂದೂವರೆ ಸಾವಿರಮಂದಿ ಲ್ಲ ಜಾತಿ ಕೋಮುಗಳ ವಿದ್ಯಾರ್ಥಿಗಳೂ ಇದ್ದಾರೆ. ಅವರಲ್ಲಿ ಪರಸ್ಪರ ಸೌಹಾರ್ದ, ಾಷ್ಟ್ರಪ್ರೇಮ ಮತ್ತು ಸಂಸ್ಕೃತಿಯಲ್ಲಿ ನಿಷ್ಠೆಗಳನ್ನು ನೆಲೆಗೊಳಿಸುವುದೇ ಪ್ರತಿಯೊಂದು ಮಾಜಗಳ ದೃಷ್ಟಿಯಾಗಬೇಕು. ರಾಷ್ಟ್ರ ಪುನರ್ಘಟನೆಯಲ್ಲಿ ಯಾವ ಸಮಾಜವೂ ಾನೇ ಪ್ರತ್ಯೇಕವಾಗಿರಲು ಸಾಧ್ಯವಿಲ್ಲ. ಸಮಾಜದ ಸರ್ವತೋಮುಖವಾದ ಏಳ್ಗೆಯೇ ಾಷ್ಟ್ರದ ಏಳ್ಗೆ. ವೀರಶೈವಸಮಾಜದ ಎಲ್ಲಾ ಮಠಾಧಿಪತಿಗಳೂ ಈ ನಿಟ್ಟಿನಲ್ಲಿ ಮ್ಮುಖವಾಗಿ ದುಡಿದಲ್ಲಿ ಕರ್ನಾಟಕವನ್ನು ಇಡೀ ಭಾರತಕ್ಕೆ ಮಾದರಿಯಾಗಿ ಮಾಡ ಹುದು. ಸಕಲ ಜೀವಾವಳಿಗೆ ಲೇಸನ್ನೇ ಬಯಸಬೇಕೆಂಬುವ ಬಸವಣ್ಣನವರ ದಿವ್ಯ ಾಣಿಯನ್ನು ಅಮರವಾಗಿ ಮಾಡುವ ಹೊಣೆಗಾರಿಕೆ ಇಂದು ವೀರಶೈವರ ಪಾಲಿಗೆ ಬಂದಿದೆ. ಈ ಶಿವಾನುಭವ ಸಮ್ಮೇಳನವು ಆ ದೃಷ್ಟಿಯಲ್ಲಿ ದುಡಿಯಲಿ। ಈ ಸಮ್ಮೇ ಳನವು ಈ ಪ್ರಾಂತದ, ನಾಡಿನ ಸರ್ವಜನಾಂಗಗಳ ಧರ್ಮಸಮ್ಮೇಳನವಾಗಿ ಮೆರೆಯಲಿ! ಜಗತ್ತು ಶಿವನಿಂದಾದುದು, ಸಕಲ ಜೀವರಾಶಿಗಳೂ ಅವನ ಮಕ್ಕಳು, ಅವನ ಧರ್ಮ ಸರ್ವರ ಸ್ವತ್ತು

ಮಾತಾ ಚ ಪಾರ್ವತೀ ದೇವೀ ಪಿತಾ ದೇವೋ ಮಹೇಶ್ವರಃ ।
ಬಾಂಧವಾಃ ಶಿವಭಕ್ತಾಶ್ಚ ಸ್ವದೇಶೋ ಭುವನತ್ರಯಂ ॥

ಎಂಬ ಅಮೃತೋಕ್ತಿ ಎಲ್ಲ ಜನತೆಯ ಅನುಷ್ಠಾನದಲ್ಲಿ ಬರುವಂತೆ ಭಗವಂತನು ಅನುಗ್ರಹಿಸಲಿ !

॥ ಶಿವಂ ಭೂಯಾತ್ ॥

---

# ಅನುಭವ ಮಂಟಪದ ಅಗತ್ಯ

—೦೦—

**ಬೆಂಗಳೂರು ನಗರದಲ್ಲಿ ತಾ|| ೧೭-೮-೫೮ನೇ ಭಾನುವಾರ ನಡೆದ ಅನು ಭವ ಮಂಟಪದ ಉದ್ಘಾಟನಾ ಮಹೋತ್ಸವದ ಸಂದರ್ಭದಲ್ಲಿ ಸುತ್ತೂರು ವೀರಸಿಂಹಾಸನಾಧೀಶ್ವರರಾದ ಜಗದ್ಗುರು ಶ್ರೀ ಶ್ರೀ ಶಿವರಾತ್ರಿಮಹಾಸ್ವಾಮಿ ಗಳವರು ದಯಪಾಲಿಸಿದ ದಿವ್ಯ ಸಂದೇಶ—**

ಇಂದಿನ ಈ ಪವಿತ್ರ ಸನ್ನಿವೇಶದಲ್ಲಿ ಮಾತನಾಡಬೇಕೆಂಬ ಉತ್ಸಾಹಕ್ಕಿಂತಲೂ ಮಿಗಿಲಾಗಿ ಯಾವುದೋ ಒಂದು ವಿಧವಾದ ಅನಿರ್ವಚನೀಯ ಆನಂದವು ನಮ್ಮ ಹೃದಯದಿಂದ ತುಂಬಿ ಉಕ್ಕುತ್ತಿದೆ. ಶತಮಾನಗಳ ಹಿಂದೆ ಕಳೆದುಕೊಂಡ ಅಮೂಲ್ಯ ರತ್ನವು, ಗಾಢಾಂಧಕಾರದಲ್ಲಿ ಕಾನನದ ಮಧ್ಯೆ ಪರಿತಪಿಸುತ್ತಿರುವವರ ದೃಷ್ಟಿಗೆ ಸಿಲುಕಿದರೆ ಅವರಿಗಾದ ಆನಂದವನ್ನು ಪದಪುಂಜದಿಂದ ವರ್ಣಿಸಲು ಹೇಗೆ ಸಾಧ್ಯ?

ಬೆಂಗಳೂರು ನಗರ ಆ ಕಾಲದಲ್ಲಿ ಮಹಾಶರಣರೂ, ತಪೋಧನರೂ, ದಿವ್ಯ ಜ್ಞಾನಿಗಳೂ, ಸಂಚರಿಸಿದ ಪುಣ್ಯ ನಗರವಾಗಿ ಕಲ್ಯಾಣನಗರವೆಂಬ ಹೆಸರನ್ನು ತಾಳಿದೆ. ಈ ನಗರದ ಬಹುಭಾಗದ ನೆಲ-ಮಠಗಳ ಭೂಮಿಯಾಗಿರುವುದು ನಮ್ಮ ಮಾತಿಗೆ ಸತ್ಯ ಸಾಕ್ಷಿಯಾಗಿದೆ. ಆದರೆ ಆಧುನಿಕ ನಾಗರಿಕತೆಯ ಜಾಲದಲ್ಲಿ ಸಿಕ್ಕಿ ಓತ ಪ್ರೋತವಾಗಿ ಬಳೆಯುತ್ತಿರುವ ನಗರದಲ್ಲಿ ಶಿವಶರಣ ಸಂಸ್ಕೃತಿಯ ಸೂರ್ಯನು ಅಸ್ತಮಿ ಸಿದನೇ ಎಂಬ ಸಂಶಯ ನಮ್ಮ ಮನಸ್ಸಿನಲ್ಲಿ ಮೂಡುತ್ತಿರುವಾಗಲೇ ಈ ಅನುಭವ ಮಂಟಪದ ಸ್ಥಾಪನೆಯ ಸಂಗತಿಯನ್ನು ಕೇಳಿ ಅಮಿತಾನಂದವಾಯಿತು.

ಈ ಸಮಾರಂಭದ ಅಧ್ಯಕ್ಷತೆ ವಹಿಸಿರುವ ಶ್ರೀ ಶಿವಕುಮಾರಸ್ವಾಮಿಗಳವರು ತತ್ವಜ್ಞಾನಿಗಳು ಹಾಗೂ ಸುಪ್ರಸಿದ್ಧವಾಗ್ಮಿಗಳು ಮತ್ತು ತಪೋನಿಷ್ಠರು. ಅವರ ಜ್ಞಾನ ಪ್ರತಿಭೆಯು ಬೆಳಗಿ ನಮಗೆ ಕಲ್ಯಾಣದಲ್ಲಿ ಪ್ರಭುದೇವರು ಶೂನ್ಯಸಿಂಹಾಸನಾ ರೋಹಣಮಾಡಿದ ಮಂಗಳ ಸನ್ನಿವೇಶವನ್ನು ಸ್ಮರಣೆಗೆ ತರುತ್ತವೆ. ಅಲ್ಲದೆ ಈ ಅನು ಭವಮಂಟಪ ಸ್ಥಾಪನೆಯ ಯೋಜನಾ ಕರ್ತೃಗಳಾದ ಅಭಿನವಾಲ್ಲಮರೆಂದು ಖ್ಯಾತ ರಾದ ಶ್ರೀ ಮಹದೇವಸ್ವಾಮಿಗಳವರು ಯೋಗೀಂದ್ರರಾದ ಸರ್ಪಭೂಷಣ ಶಿವಯೋಗಿ ಗಳ ಪರಂಪರೆಗೆ ಸೇರಿದವರು. ಉಜ್ವಲತತ್ವಾಭಿಮಾನಿಗಳು. ಅವರ ನೇತೃತ್ವದಲ್ಲಿ ಉದಯಿಸಿದ ಈ ಸಂಸ್ಥೆ ಕಲ್ಯಾಣದ ಜ್ಯೋತಿಯನ್ನು ಮತ್ತೊಮ್ಮೆ ಬೆಳಗಿಸುವುದೆಂಬ ಭರವಸೆ ನಮಗೆ ಪೂರ್ಣವಾಗಿದೆ. ಅಲ್ಲದೆ ಆತ್ಮಜ್ಞಾನಿಗಳೂ ಮತ್ತು ತತ್ವಾರ್ಥವಿದರೂ ಆದ ಅನೇಕ ಲೌಕಿಕರೂ ಸಮಾವೇಶಗೊಂಡು ಕಲ್ಯಾಣದ ಪ್ರತಿಶಕ್ತಿಯನ್ನು ಪುನರ

ಕ್ಷೀಣನಗೊಳಿಸುವ ಸಾಹಸಕ್ಕೆ ತೊಡಗಿರುವುದು ಜನತೆಯ ಭಾಗ್ಯೋದಯವಲ್ಲವೆ.? ಎಂದೋ ಆಗಬೇಕಾದ ಕೃತಿ ಇಂದಾದರೂ ಸಾಗುತ್ತಿರುವುದು ನಮ್ಮ ಸುದೈವ. ಶಿವಶರಣರ ಅನುಗ್ರಹ.

ಅತೀವ ಆವಶ್ಯಕತೆಯು ನವಸೃಷ್ಟಿಗೆ ಮಂತ್ರ. ಇಂದು ನಮ್ಮಮೇಲೆ ಸಮಸ್ಯೆ ಸಂಶಯಗಳ ಕಾವಳ ಕವಿದಿದೆ. ಕಾರ್ಗತ್ತಲ ಮಂದಿರದಲ್ಲಿ ದೀವಿಗೆಯನ್ನು ಹುಡುಕು ತ್ತಿದ್ದೇವೆ. ಕಲ್ಯಾಣದ ಚಿಂತಾಮಣಿಯಾದ ಬಸವಣ್ಣನವರು ಎಂಟು ಶತಮಾನಗಳ ಹಿಂದೆಯೇ ಇವನ್ನು ವಿಚಾರಮಾಡಿದ್ದಾರೆ.

"ಮನೆಯೊಳಗೆ ಮನೆಯೊಡೆಯನಿದ್ದಾನೋ ? ಇಲ್ಲವೋ ? ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಅಂಗಳದಲ್ಲಿ ರಜತುಂಬಿ ಮನೆಯೊಳಗೆ ಮನೆಯೊಡಯನಿದ್ದಾನೋ ಇಲ್ಲವೋ? ತನುವಿನಲ್ಲಿ ಹುಸಿತುಂಬಿ, ಮನದೊಳಗೆ ವಿಷಯ ತುಂಬಿ, ಮನೆಯೊಳಗೆ ಮನೆಯೊ ಡೆಯ ನಿಲ್ಲ ಕಾಣಾ ಕೂಡಲ ಸಂಗಮದೇವಾ"

ಬಸವಣ್ಣನವರು ಈ ಅಮೃತವಾಣಿಯಿಂದ ಮಾನವನ ಎಲ್ಲ ಸಂಶಯಗಳಿಗೆ ಸಂಕಷ್ಟಗಳಿಗೆ ಮನದೊಳಗೆ ಮನೆಯೊಡೆಯನಿಲ್ಲದಿರುವುದೇ ಕಾರಣವೆಂದು ನಿಶ್ಚಯಿಸಿ ದ್ದಾರೆ. ವಿಶ್ವದ ಇತಿಹಾಸದಲ್ಲಿ ಕಂಡುಬರುವ ಎಲ್ಲ ಆಗುಹೋಗುಗಳಿಗೂ ಇದೇ ಪ್ರಮುಖ ಕಾರಣವಾಗಿರಬೇಕು. ವಿಚಾರಮಾಡಿ ನೋಡೋಣ. ಇತಿಹಾಸವನ್ನು ಎರಡುಸಂಪುಟಗಳಾಗಿ ವಿಂಗಡಿಸಬೇಕಾಗುತ್ತದೆ. ಜ್ಞಾನಯುಗ, ಅಜ್ಞಾನಯುಗ, ಅಜ್ಞಾನಯುಗದಲ್ಲಿ ದೈಹಿಕಬಲದಲ್ಲಿ ಅಚಲ ವಿಶ್ವಾಸವಿದ್ದವರು ಅಂಧಶ್ರದ್ಧೆಗೆ ಒಳಗಾಗಿ ಲೋಕಕ್ಕಾ ಕಂಟಕರಾಗಿ ಕೊನೆಗೆ ತಾವೂ ಸಂಕಟಕ್ಕೆ ತುತ್ತಾಗಿದ್ದಾರೆ. ಅಂತಹ ಸಂದಿಗ್ಧ ಸಮಯದಲ್ಲಿ ಆತ್ಮಜ್ಞಾನಿಗಳು ಉದಯವಾಗಿ ಲೋಕಕಲ್ಯಾಣ ಮಾಡಲೇ ಬೇಕಾಯ್ತು. ಇತರ ದೇಶಗಳಲ್ಲಿಯೂ ಕೂಡ ತತ್ವ ಜಿಜ್ಞಾಸೆಗಾಗಿ ಆಗಿಂದಾಗ್ಗೆ ಚಳುವಳಿಗಳು ನಡೆದ ವಿಚಾರವು ಏಸುಕ್ರಿಸ್ತ, ಸಾಕ್ರಟೀಸ್, ಕನ್‌ಪೂಷಿಯಸ್, ಟಾಲ್‌ಸ್ಟಾಯ್ ಮುಂತಾದವರ ಚರಿತ್ರೆಗಳಿಂದ ತಿಳಿದು ಬರುತ್ತದೆ.

ಭರತಖಂಡದಲ್ಲಿಯೂ ಇಂತಹ ಪ್ರಸಂಗಗಳು ತಲೆದೋರದೆ ಇಲ್ಲ. ವೇದಗಳು ಮತ್ತು ಆರಣ್ಯಕಗಳ ಕಾಲದಲ್ಲಿ ವೇದಗಳಲ್ಲಿರುವ ಅಪಾರಜ್ಞಾನರಾಶಿಯನ್ನು ವಿಚಾರ ಮಾಡಲು ಜನತೆಗೆ ಸ್ವಾತಂತ್ರ್ಯವಿಲ್ಲದಾಗ ವಿಚಾಶೀಲರಾದ ಜಿಜ್ಞಾಸುಗಳು ತಮ್ಮ ಗುರುಗಳನ್ನು ದಿಟ್ಟತನದಿಂದ ಪ್ರಶ್ನಿಸಿದರು.

ಕಿಂ ಕಾರಣಂ ಬ್ರಹ್ಮಕುತಃಸ್ಮ ಜಾತಾ-ಜೀವಾಮಕೇನ—
ಕ್ವಚ ಸಂಪ್ರತಿಷ್ಠಾ ॥ಅಧಿಷ್ಠಿತಾಃ ಕೇನ ಸುಖೇತರೇ
ಪ್ರವರ್ತಾಮಹೇ—ಬ್ರಹ್ಮವಿದೋ ವ್ಯವಸ್ಥಾ॥ (ಶ್ವೇತಾಶ್ವತರ)

ಬ್ರಹ್ಮನಿಂದ ಹಿಡಿದು ಭೂಮಿಯವರೆಗೆ ಎಲ್ಲ ವಿಷಯಗಳನ್ನೂ ಚರ್ಚಿಸಿದರು. ಜನಕ ಮಹಾರಾಜನಂತಹ ತತ್ವವೇತರು ಪ್ರೋತ್ಸಾಹ ಕೊಡಲಾಗಿ ಬ್ರಹ್ಮಜ್ಞಾನಿ ಯಾದ ಯಾಜ್ಞವಲ್ಕ್ಯನನ್ನು ಗಾರ್ಗಿಯಂತಹ ಹೆಣ್ಣುಮಗಳು ತುಂಬಿದ ಸಭೆಯಲ್ಲಿ ಪ್ರಶ್ನಿಸಿದಳು. ಆ ವಿಚಾರಶಕ್ತಿ ಪ್ರಚೋದನೆಯ ಫಲವೇ ನಮಗೆ ಇಂದು ದೊರೆಯುತ್ತಿರುವ ಉಪನಿಷತ್ತಿನ ಅಪಾರ ರಾಶಿ–ಸಂಶಯದಲ್ಲಿ ಸಿಲುಕಿದವರಿಗೆ ಮಹರ್ಷಿಗಳು ಸಮಾಧಾನ ನೀಡುತ್ತಾ,

ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾ ಭೂದ್ವಿಜಾನತಃ।
ತತ್ರಕೋ ಮೋಹಃ-ಕಃ ಶೋಕಃ॥ ಏಕತ್ವ ಮನುಪಶ್ಯತಃ॥ (ಈಶಾವಾಸ್ಯ)

ಆತ್ಮನೇ ಸರ್ವವ್ಯಾಪಿಯಾಗಿ ಆವಿರ್ಭವಿಸಿರುವನೆಂಬುದನ್ನು ಅರಿತ ಜ್ಞಾನಿಗೆ ಶೋಕ–ಮೋಹಗಳ ಗೊಡವೆಯಿಲ್ಲವೆಂದು ಉತ್ತರಿಸಿದರು.

ವಿಚಾರ ಶೀಲರಾದ ಆತ್ಮಜ್ಞಾನ ಜಿಜ್ಞಾಸುಗಳ ಸಂಘಟನೆಯ ಫಲವಾಗಿ ಭಾರತದಲ್ಲಿ ಅಮೂಲ್ಯ ಆತ್ಮಜ್ಞಾನ ಸಾಹಿತ್ಯ ಬೆಳೆಯಿತು.

ಉಪನಿಷತ್ಕಾಲದ ಹಲವಾರು ಶತಮಾನಗಳ ಅನಂತರ ಭಾರತೀಯರು ಮತ್ತೊಮ್ಮೆ ವಿಚಾರ ದಾಸ್ಯದಲ್ಲಿ ಬಿದ್ದು ಅಂಧಾನುಕರಣೆಯ ಬಂಧನದಲ್ಲಿ ಬಳಲುತ್ತಿದ್ದರು. ಆ ಸಮಯದಲ್ಲಿ ಬುದ್ಧದೇವನ ಉದಯವಾಗಿ ವಿಚಾರಕ್ರಾಂತಿಯೇ ಸಂಭವಿಸಿತು. ಕರ್ಮಬಂಧನವನ್ನು ಬಿಡಿಸಲು "ಸಂಘಂ ಶರಣಂ ಗಚ್ಛಾಮಿ" ಆದಾದ ನಂತರ ಸಾಮೂಹಿಕ ವಿಚಾರ ಕ್ರಾಂತಿಯಾದುದು ಪ್ರಾಯಶಃ ಹನ್ನೆರಡನೆಯ ಶತಮಾನದಲ್ಲಿ ನಡೆದ ಕಲ್ಯಾಣದ ಸ್ವರ್ಣಯುಗದಲ್ಲಿಯೇ ಎನ್ನಬಹುದು.

"ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ" ಎಂಬ ಗೀತಾ ಸಂದೇಶವನ್ನು ಅಪಕಲ್ಪನೆ ಮಾಡಿಕೊಂಡು ವೃತ್ತಿಯಿಂದ ಮಾನವನ ಮೇಲುಕೀಳು ಗಳನ್ನು ಅಳತೆಮಾಡುತ್ತಾ ಜನತೆಯನ್ನು ಅವಿಚಾರ ಮತ್ತು ಅವ್ಯವಹಾರ ದಾಸ್ಯದಲ್ಲಿ ರಿಸಿರುವುದನ್ನು ಸಹಿಸದಾದ ಬಸವಣ್ಣನವರು "ಕಾಯಕದಿಂದ ಕೈಲಾಸವನ್ನು" ಕಾಣುವ ಮಾರ್ಗದರ್ಶನ ಮಾಡಿಸಲು "ಅನುಭವ ಮಂಟಪ"ವೆಂಬ ಪವಿತ್ರ ಸಂಸ್ಥೆ ಯನ್ನು, ಆತ್ಮಜ್ಞಾನ ಸಾರ್ವಭೌಮರೆನಿಸಿದ ಅಲ್ಲಮಪ್ರಭುದೇವರ ನೇತೃತ್ವದಲ್ಲಿ ಸಂಸ್ಥಾಪಿಸಿ ಲೋಕೋಪಕಾರ ಮಾಡಿದರು. ಮಾನವೀಯತೆಯ ಪರಿಪೂರ್ಣತೆ ಯನ್ನು ಸಾಧಿಸಲು, ಕ್ರಿಯೆಯೋ–ಜ್ಞಾನವೋ ? ಎಂಬ ಕೂಗಾಟದಲ್ಲಿ ತೊಡಗಿದ ಜನತೆಗೆ ಕ್ರಿಯೆ ಮತ್ತು ಜ್ಞಾನಗಳೆರಡರ ಸಾಮರಸ್ಯವನ್ನೆಸಗಿ ತೋರಿಸಿದರು. ಈ ಸಾಮರಸ್ಯದಿಂದ ಇಹಪರಗಳೆರಡಕ್ಕೂ ಏಕಪಥವನ್ನು ರಚಿಸಿದರು. ಒಂದಡಿ ಮುಂದಿಟ್ಟು "ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು" ಎಂದು ಶರಣರು ಕ್ರಿಯೆಗೆ ಭೇದರಹಿತ ಪ್ರಧಾನತೆಯನ್ನು ತಂದುಕೊಟ್ಟರೆನ್ನಬಹುದು.

ಅನುಭವ ಮಂಟಪದಲ್ಲಿ ನಡೆದ ಎಲ್ಲ ವಿಷಯಗಳನ್ನೂ ವಿಮರ್ಶಿಸುವುದು ಇಲ್ಲಿ
ಸಾಧ್ಯವಿಲ್ಲ. ಲೋಕದಲ್ಲಿ ಸಂಭವಿಸಬಹುದಾದ ಎಲ್ಲ ಸಮಸ್ಯೆಗಳನ್ನೂ ಪರಿಹರಿಸಲು
ಅನುಭವ ಮಂಟಪದ ಶರಣರು ಪ್ರಯತ್ನ ಮಾಡಿದ್ದಾರೆ. ಅಲ್ಲಿ ಎಲ್ಲ ವೃತ್ತಿಯ
ಸುಮಾರು 300 ಮಂದಿ ಶಿವಶರಣ ಶರಣೆಯರು ಕೂಡಿದ್ದಾರೆ. ಜೀವನದ ಸಹಸ್ರಾರು
ವಿಷಯಗಳನ್ನು ಚರ್ಚಿಸಿದ್ದಾರೆ. ಆ ಐತಿಹಾಸಿಕ ವಿಷಯವನ್ನಾಗಲಿ, ಜಿಜ್ಞಾಸೆ
ಯನ್ನಾಗಲಿ ನಾವು ಇಲ್ಲಿ ವಿವರಿಸಲು ಯತ್ನಿಸುತ್ತಿಲ್ಲ. "ಎರಡೆಂಬತ್ತು ಕೋಟಿ" ವಚನ
ಗಳಲ್ಲಿ ಕಲ್ಯಾಣದ ಪ್ರತಿಭೆಯನ್ನು ನಾವು ಕಾಣುತ್ತೇವೆ. ಆದರೆ ಅಂದಿನ ವಿಷಯ
ವಾಗಿ ಒಂದಂಶವನ್ನು ಮಾತ್ರ ಗಮನದಲ್ಲಿಡಬೇಕು. ಅದು ಕೇವಲ ವಿಚಾರವಾದಿಗಳ
ಹಿಂಡವಲ್ಲ. ನುಡಿದಂತೆ ನಡೆದು, ನಡೆದಂತೆ ನುಡಿದ "ಅನುಭಾವಿಗಳ ಅಮರಲೋಕ"
ಈ ವಿಷಯವನ್ನು ಮನನಮಾಡಿಕೊಂಡು ನಾವು ಇಂದಿನ ಮಹತ್ಕಾರ್ಯವನ್ನು
ನಡೆಸಬೇಕು.

ಇಂದು "ಅನುಭವ ಮಂಟಪದ" ಸ್ಥಾಪನೆಯ ಅವಶ್ಯಕತೆಯೇನು ? ಎಂಬುದು
ನಮ್ಮ ಮುಂದಿನ ಪ್ರಶ್ನೆ. ಅಜ್ಞಾನಯುಗದಲ್ಲಿ ಆತ್ಮಜ್ಞಾನಿಗಳು ಅವತರಿಸಿ ಎಸಗಿದ
ಕಾರ್ಯಗಳನ್ನು ಈಗಾಗಲೇ ವಿಚಾರಮಾಡಿದ್ದೇವೆ. ಇದು ವಿಜ್ಞಾನಯುಗ-ಮಾನ
ವನ ಬುದ್ಧಿಶಕ್ತಿ ಬೆಳೆದು ಅಣುಶಕ್ತಿ ಕಿರಣ ಶಕ್ತಿಗಳನ್ನು ಕರಗತಮಾಡಿಕೊಂಡು
ಚಂದ್ರಲೋಕವನ್ನು ಸೂರೆಗೊಳ್ಳಲು ಕಾತುರಪಡುತ್ತಿರುವ ಕ್ಷಿಪಣಿಗಳ ಕಾಲ. ಬುದ್ಧಿ
ಬಲ ಎಷ್ಟೇ ವೃದ್ಧಿಗೊಂಡರೂ ಭೂಮಂಡಲದಲ್ಲಿ ಮಾನವನಿಗೆ ಸುಖಶಾಂತಿಗಳು
ಸಿಕ್ಕಲಿಲ್ಲ. ಸಿಕ್ಕುವ ನಿರೀಕ್ಷಣೆಯೂ ಇಲ್ಲ. ಆದುದರಿಂದ ಚಂದ್ರಮಂಡಲದತ್ತ ಕೈ
ಚಾಚಿ ಅನಸು ಪರಿತಪಿಸುತ್ತಿದ್ದಾನೆ. ಏಕೆಂದರೆ ನಮ್ಮ ಬುದ್ಧಿ ಬೆಳೆದಂತೆಲ್ಲಾ
ಭಸ್ಮಾಸುರ ಪಡೆದವರವಂತಾಗುತ್ತಿದೆ. ಉದ್ಧಾರಕ್ಕಾಗಿ ವಿನಿಯೋಗವಾಗಬೇಕಾದ ಬುದ್ಧಿ
ಶಕ್ತಿ ಸರ್ವನಾಶಕ್ಕೆ ವಿನಿಯೋಗವಾಗುತ್ತಿದೆ. ಆದುದರಿಂದ ಇಂದು ಭೂಮಂಡಲದಲ್ಲೇ
ಸುಖಶಾಂತಿಗಳನ್ನು ಕೊಡಬಲ್ಲ ಆತ್ಮಜ್ಞಾನಿಗಳು ಬೇಕು. ಕಲ್ಯಾಣದ ಶರಣರು ಕಂಡ
ಸಮಸ್ಯೆಗಳಿಗಿಂತಲೂ ಇಂದಿನ ಸಮಸ್ಯೆಗಳು ಬೃಹದಾಕಾರ ತಾಳಿವೆ. ಜಗತ್ತು
ಅಶಾಂತಿಯ ವಾತಾವರಣದಲ್ಲಿ ತಲ್ಲಣಿಸುತ್ತಿದೆ. ಅದಕ್ಕೆ ರಕ್ಷಣೆ ನೀಡಬಲ್ಲ ಆತ್ಮ
ಶಕ್ತಿಯು ವಿಶ್ವಸಂಸ್ಥೆಯಾಗಿ ಕೆಲಸಮಾಡಬಲ್ಲ 'ಅನುಭವ ಮಂಟಪ' ಇಂದು ನಮಗೆ
ಬೇಕಾಗಿದೆ. ವಾದದಲ್ಲಿ ಗೆಲ್ಲಬಲ್ಲ ಸಮರ್ಥರು ಬೇಕು. ನಡೆ ನುಡಿ ಒಂದಾಗಿ ಪರುಷ
ಜೀವಿಗಳಾಗಿ ಲೋಕವನ್ನು ಉದ್ಧರಿಸಬಲ್ಲ ದಿವ್ಯಾತ್ಮರನ್ನು ಸೃಷ್ಟಿಸುವ ಸಂಸ್ಥೆ ನಮಗೆ
ಬೇಕು. ಇಂದು ಬೆಂಗಳೂರು ನಗರದಲ್ಲಿ ಸಂಸ್ಥಾಪಿಸಲ್ಪಡುತ್ತಿರುವ 'ಅನುಭವ
ಮಂಟಪ' ಸಕಲ ಜೀವಾವಳಿಯ ಲೇಸನ್ನೇ ಬಯಸುವ ಮಾತೃಹೃದಯವಾಗಬೇಕು.
ಕಲ್ಯಾಣದ ಅನುಭವ ಮಂಟಪದಲ್ಲಿ ಹೊರಹೊಮ್ಮಿದ ತತ್ವದ ಅಮರಜ್ಯೋತಿಯ
ಬೆಳಕಿನಲ್ಲಿ ಈ ಸಂಸ್ಥೆಯನ್ನು ನಿರ್ಮಿಸಿದರೆ ಲೋಕಕಲ್ಯಾಣವನ್ನುಂಟುಮಾಡಲು

ಸಾಧ್ಯವೆಂದು ನಾವು ನಂಬಿದ್ದೇವೆ. ಈ ಸಂಸ್ಥೆಯಲ್ಲಿ ಜಗತ್ತಿನ ಕ್ಷೇಮಕ್ಕೆ ದುಡಿಯ
ಬಲ್ಲ ನೂತನ ಶರಣರು ಉದಯವಾಗಲೆಂದು ನಾವು ಹಾರೈಸುತ್ತೇವೆ.

ಹಿಂದಿನಂತೆ ಒಬ್ಬಾನೊಬ್ಬ ವ್ಯಕ್ತಿ ತನ್ನ ಆತ್ಮಶಕ್ತಿಯನ್ನು ಬೆಳಸಿಕೊಂಡು
ಪರಮ ಸುಖಿಯಾಗುವ ವಾತಾವರಣ ಇಂದಿಲ್ಲ. ಇದು ಸಾಂಘಿಕಯುಗ. ಒಬ್ಬ
ಸುಖ ಇಡೀ ರಾಷ್ಟ್ರದ ಕ್ಷೇಮವನ್ನೇ ಅವಲಂಬಿಸಿದೆ. ಒಂದು ರಾಷ್ಟ್ರದ ಕ್ಷೇಮ ಇಡೀ
ವಿಶ್ವದ ಕ್ಷೇಮವನ್ನೇ ಅವಲಂಬಿಸಿದೆ. ಪರಸ್ಪರ ಕ್ಷೇಮವನ್ನು ಬಯಸುವುದರಲ್ಲಿ
ವೈಯ್ಯಕ್ತಿಕ ಕ್ಷೇಮವೂ ಅಡಗಿರುವುದು ಪ್ರಕೃತಿ ನಿಯಮ. ಅದನ್ನರಿತ ಶಿವಶರಣ
ಮಹಾದೇವಿ ಅಕ್ಕನವರು.

"ಸಂಗದಿಂದಲ್ಲದೆ ಅಗ್ನಿ ಹುಟ್ಟದು. ಸಂಗದಿಂದಲ್ಲದೆ ಸರ್ವಸುಖ ತೋರದು
ನಿಮ್ಮ ಶರಣರ ಅನುಭಾವದ ಸಂಗದಿಂದಾನು ಚೆನ್ನಮಲ್ಲಿಕಾರ್ಜುನಯ್ಯ ಪರಮ
ಸುಖಿಯಾಗಿ ಬದುಕಿದೆನಯ್ಯಾ" ಎಂಬ ಅನುಭಾವದ ದಿವ್ಯಸಂದೇಶವನ್ನುನಮಗೆ ನೀಡಿ
ದ್ದಾರೆ. ಆದುದರಿಂದ ನಾವು ಪರಸ್ಪರ ಕಲೆತು ಜಗತ್ತಿನ ಸುಖಕ್ಕೆ ನಮ್ಮ ನಮ
ಕಾಣಿಕೆಗಳನ್ನು ಸಮರ್ಪಿಸಲು ಒಂದು ಸಂಸ್ಥೆ ಅಗತ್ಯವಾಗಿತ್ತು. ಅದನ್ನು ನೆರವೇ
ಸುವ ಯೋಜನೆಯನ್ನುಕೈಗೊಂಡ ಈ ಬೆಂಗಳೂರು ನಾಗರೀಕರು ಅಭಿನಂದನೀಯರು
ಈ ಸಂಸ್ಥೆಯಲ್ಲಿ ಯಾವ ಭೇದಭಾವನೆಗಳಿಗೂ ಅವಕಾಶವಿರದಂತೆ ಸರ್ವರೂ ಸಮತೆ
ಯಿಂದ ಕೂಡಿ ಮಾನವಕಲ್ಯಾಣದ ಮಾರ್ಗವನ್ನು ಹುಡುಕಲು ಪ್ರಯತ್ನಿಸಬೇಕು
ಸಮತೆಯ ಮಾತು ಇಂದು ಎಲ್ಲಾ ರಾಷ್ಟ್ರಗಳಲ್ಲೂ ನಡೆಯುತ್ತಿದೆ. ಆದರೆ ಸಮತೆ
ಎಂಬುದು ಉಪದೇಶದ ಮಾತಾಗದೆ ಆಚರಣೆಯಲ್ಲಿ ನಮ್ಮೆಲ್ಲರ ಅನುಭವದಲ್ಲಿ
ಕಾಣಬೇಕು.

ತಮತಮಗೆ ಸಮತೆಯ ಹೇಳಬಹುದಲ್ಲದೆ ಕನಲಿಕೆಯ ಕಳೆದಿಪ್ಪವರಾರು
ಹೇಳಾ ? ಕಾಮದಿಂದ ಧೃತಿಗೆಟ್ಟು ಹಂಬಲಿಸದಿಪ್ಪವರಾರು ಹೇಳಾ ? ಮುನಿಸ
ಮುಂದಿಟ್ಟು ಇದಿರ ಹಳಿಯದಿಪ್ಪವರಾರು ಹೇಳಾ ? ಇದು ಮಹಾಯೋಗಿಗಳಿಗರಿದ
ಪ್ಪುದು. ಸಕಲೇಶ್ವರದೇವಾ ನೀನು ಕರುಣಿಸಿದವರಿಗಲ್ಲದೆ ಸಾಧ್ಯವಪ್ಪುದೆ ?

ಎಂದು ಅರುಹಿದ್ದಾರೆ–ಸಮತೆಯು ನಮ್ಮ ಅನುಭವದಲ್ಲಿ ಬರುವವರೆಗೆ ಸುಖ
ದೊರೆಯುವುದಿಲ್ಲ. ಶಿವನ ಕರುಣೆಯಿಲ್ಲದೆ ಸಮತೆಯೂ ಬರುವುದಿಲ್ಲ. ಆದುದರಿಂದ
ಶಿವನಕರುಣೆ ನಮಗೆ ದೊರೆಯಲು ಅನುಭಾವಿಗಳು ಆಡಿತೋರಿದ ಮಾರ್ಗದಲ್ಲಿ ನಾವ
ನಡೆಯಲು ನೆರವಾಗುವುದಕ್ಕಾಗಿ ಈ ಸಂಸ್ಥೆ ಬೆಳೆಯಬೇಕು. ಸಂಸ್ಥೆಯನ್ನು ಬೆಳೆಸಲ
ಸರ್ವರೂ ಪ್ರಯತ್ನಿಸಬೇಕು. ಸಂಸ್ಥೆಯು ಸತ್ಕಾರ್ಯಗಳಿಂದ ಬೆಂಗಳೂರು ನಗರಕ್ಕೆ
ಕಲ್ಯಾಣವೇ ಆಗಬೇಕೆಂಬುದು ನಮ್ಮ ಹಾರೈಕೆ. ಈ ದಿನ ಸಲ್ಲಿ ಸಮಾವೇಶಗೊಂಡಿರು

ಹನೀಯರೆಲ್ಲರೂ ಶಿವಾನುಭಾವಿಗಳೆಂದೇ ನನ್ನ ನಂಬುಗೆ. ಆದುದರಿಂದ ನಮ್ಮ ೀಕ್ಷಣೆಗಳಿಗಿಂತಲೂ ಉನ್ನತವಾಗಿ ಅನುಭವಮಂಟಪದ ರೂಪುರೇಷೆಗಳನ್ನು ನಿರೂ ಸುವರೆಂಬ ಭರವಸೆ ನನಗಿದೆ. ಶಿವಾನುಭವ ಮಂಟಪದ ಅರ್ಥ ವಿತರಣೆಯನ್ನು ಂದು ಶ್ಲೋಕದಲ್ಲಿಯೇ ಕೊಡಬಹುದು. ಈಶೋಪನಿಷತ್ತಿನಲ್ಲಿ

ಓಂ ಈಶಾವಾಸ್ಯಮಿದಂ ಸರ್ವಂ–ಯತ್ಕಿಂಚ ಜಗತ್ಯಾಂ ಜಗತ್ ।
ತೇನತ್ಯಕ್ತೇನ ಭುಂಜೀಥಾ-ಮಾಗೃಧಃ ಕಸ್ಯಸ್ವಿದ್ಧನಮ್ ॥

ಎಂದಿವೆ. ನಾವು ಈಶಚಿಂತನೆ ಮಾಡುತ್ತೇವೆಂದರೆ ಈಶನಲ್ಲಿಯೇ ನೆಲಸಿರುವ ಡೀ ವಿಶ್ವಕ್ಷೇಮದ ಚಿಂತನೆಯನ್ನೇ ಮಾಡಿದಂತಾಗುತ್ತದೆ. ವಿಶ್ವಕ್ಷೇಮ ಅವನ ರುಣ ಪ್ರಸಾದವನ್ನು ಮಾತ್ರವೇ ನಾವು ಅನುಭವಿಸುವುದರಲ್ಲಿ ಅಡಗಿದೆಯಷ್ಟೆ. ದುದರಿಂದ ನಾವೆಲ್ಲರೂ ಈಶ್ವರಾನುಗ್ರಹಕ್ಕೆ ಪಾತ್ರರಾಗಬೇಕೆಂದು ಆಶಿಸಿ ಈ ಸಂಸ್ಥೆ ಯನ್ನು ಇಂದು ಪ್ರಾರಂಭಿಸುತ್ತೇವೆ.

ನನಗೆ ಈ ಅವಕಾಶವನ್ನು ತಂದುಕೊಟ್ಟ ತಮ್ಮೆಲ್ಲರಿಗೂ ಶಿವಕೃಪೆಯು ಲಭಿಸ ೆಂದೂ ಈ ಅನುಭವ ಮಂಟಪವು ಕಲ್ಯಾಣದ ಅನುಭವ ಮಂಟಪದಂತೆ ಜಗತ್ತಿನ ಕಲ್ಯಾಣವನ್ನು ಸಾಧಿಸಲೆಂದೂ ನಾವು ಮನಸಾರ ಹಾರೈಸುತ್ತೇವೆ.

॥ ಸರ್ವೇಜನಾಃ ಸುಖಿನೋಭವಂತು ॥

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

———

# ಬಸವಣ್ಣನವರ ಸಂದೇಶ

—ೲೲ—

**ಶ್ರೀ ಜಗದ್ಗುರು ಶಿವರಾತ್ರೀಶ್ವರಸ್ವಾಮಿಗಳವರು ಭಕ್ತಿಭಂಡಾರಿ ಬಸವಣ್ಣನವ**
**ಜಯಂತಿ ಮಹೋತ್ಸವವು ಶ್ರೀ ರಂಗನಾಥ ರಾಮಚಂದ್ರ ದಿವಾಕರರ**
**ಅಧ್ಯಕ್ಷತೆಯಲ್ಲಿ ಮೈಸೂರಿನ ಹಂಗಾಮಿ ರಾಜ್ಯಪಾಲರಾದ ಶ್ರೀ ಮಂಗಳ**
**ದಾಸ್‌ಪಕ್ವಾಸ್‌ರವರ ಸಮ್ಮುಖದಲ್ಲಿ ಶ್ರೀ ಶಿವರಾತ್ರೀಶ್ವರ ವಿದ್ಯಾ**
**ಪೀಠದಲ್ಲಿ ನಡೆದ ಸಂದರ್ಭದಲ್ಲಿ ಅಪ್ಪಣೆಕೊಡಿಸಿದ ಸಂದೇಶ**

ತಾ|| 19-4-61

**ಮಾನ್ಯ ಅತಿಥಿಗಳೇ, ಭಕ್ತಾಭಿಮಾನಿಗಳೇ,**

ಮಾನವಜೀವನದ ಇತಿಹಾಸದಲ್ಲಿ ಜಗತ್ತಿನ ಕಲ್ಯಾಣಕ್ಕಾಗಿ ಅವತರಿಸಿ ಮಹಾಮಹಿಮರ ಪುಣ್ಯ ಜನ್ಮ ದಿನಾಚರಣೆಯನ್ನು ಆಚರಿಸುವುದು ಶ್ರೆಯೋಮಾಗಾ ವಲಂಬಿಗಳ ಸತ್ಸಂಪ್ರದಾಯವಾಗಿದೆ. ಹೀಗೆ ಮಾನವೀಯತೆಯ ಕಲ್ಯಾಣಕ್ಕಾ ಕನ್ನಡ ಪುಣ್ಯಭೂಮಿಯಲ್ಲಿ ಆವಿರ್ಭವಿಸಿದ ಮಹಿಮಾಗ್ರಣಿ ಶ್ರೀ ಬಸವಣ್ಣನವ ಜಯಂತಿ ಮಹೋತ್ಸವವನ್ನು ಶರಣ ತತ್ವ ಪ್ರಚಾರ ಸಮಿತಿಯು ಆಚರಿಸುತ್ತಿರುವ ದನ್ನು ಕಂಡು ನಮಗೆ ಆತ್ಮಾನಂದವಾಗಿದೆ. ಮಾನವ, ಪರಮಾತ್ಮನೆಂಬ ಸತ್ಯ ಚಿದಂಶವೆಂದು ಶ್ರುತಿಸ್ಮೃತಿಗಳು ಸಾರುತ್ತಿವೆ. ಪರಮಾತ್ಮನೆಂಬ ಪರತತ್ವದ ಜೀವಾತ್ಮನು ಸಾಯುಜ್ಯ ಪಡೆಯುವುದಕ್ಕಾಗಿ ನಡೆಸುವ ಹೋರಾಟವೇ ಮಾನ ಜೀವನ. ಈ ಜೀವನವೆಂಬ ಸಮರದಲ್ಲಿ ಜಯಗಳಿಸಲು ಜೀವಾತ್ಮರಿಗೆ ಸತ್‌ಪಥ ದರ್ಶನ ಅನಿವಾರ್ಯವಾಗಿದೆ. ಹೀಗೆ ಸತ್ಯದಲ್ಲಿ ನಿತ್ಯ ಜೀವನವನ್ನು ನಡೆಸಿದ ಮಹ ನುಭಾವರ ಪುಣ್ಯ ಜಯಂತಿಗಳನ್ನು ಆಚರಿಸಿ ಆತ್ಮೋದ್ಧಾರಮಾಡಿಕೊಳ್ಳುವ ಹೆದ್ದಾ ಯನ್ನು ಕಂಡುಕೊಂಡ ವಿಜ್ಞಾನಿಗಳು ಭಾರತೀಯರು. ಅಂತೆಯೇ ಇಂದು ಮಾನ ಕೋಟಿಯ ಅಭ್ಯುದಯಕ್ಕೆ ಸುಲಭವಾದ ಸುಂದರವಾದ ಹಾದಿ ತೋರಿಸಿದ ಭಗವಾ ಬಸವಣ್ಣನವರ ಪುಣ್ಯ ಜಯಂತಿಯನ್ನು ಕನ್ನಡಿಗರು ಅಭಿಮಾನದಿಂದ ಆಚರಿಸು ದ್ದಾರೆ. ಬಸವಣ್ಣನವರು ಮತ್ತು ಅವರ ಅಮರ ಸಂದೇಶಗಳು ಒಂದು ಕಾಲ ಒಂದು ದೇಶಕ್ಕೆ ಒಂದು ಜನಾಂಗಕ್ಕೆ ಮೀಸಲಾದ ದರ್ಶನಗಳಲ್ಲ.

ದಯವಿಲ್ಲದ ಧರ್ಮವಾವುದಯ್ಯ,
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲಿ
ದಯವೇ ಧರ್ಮದ ಮೂಲವಯ್ಯ,
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯ ||

ಎಂಬುದಾಗಿ ದಯಾಮಯ ಜೀವನವೇ ನಿಜವಾದ ಧರ್ಮವೆಂದು ಬಸವಣ್ಣನವರು ಸಾರಿದರು. "ಸಕಲ ಜೀವಾವಳಿಯ ಲೇಸಬಯಸುವ ಭಾವನೆ ಮತ್ತು ದಯೆಯುಳ್ಳ ಧರ್ಮಕ್ಕೆ ಕಾಲ ದೇಶ ಜಾತಿಮತಗಳ ಮಿತಿಯಿಲ್ಲ. ಇದೇ ಅವರು ಸಾರಿದ ವಿಶ್ವಧರ್ಮ ಸಂದೇಶ. ಹೀಗೆ ವಿಶ್ವದರ್ಶನದ ಸ್ವರೂಪದರ್ಶನ ಮಾಡಿಸಿದ ಬಸವಣ್ಣನವರು ಆಧ್ಯಾತ್ಮ ಜಗತ್ತಿಗೆ, ವ್ಯವಹಾರ ಸಿದ್ಧಿಯ ಶುದ್ಧ ಜೀವನಕ್ಕೆ ಅಪಾರವಾದ ಕಾಣಿಕೆಯನ್ನಿತ್ತಿದ್ದಾರೆ. ಅನುಭವಮಂಟಪವೆಂಬ ವಿಶ್ವಧರ್ಮ ಸಂಸತ್ತನ್ನು ಸ್ಥಾಪಿಸಿ ಸ್ತ್ರೀ ಪುರುಷ ಭೇದವಿಲ್ಲವೆ ಜಾತಿಮತ ಭೇದವಿಲ್ಲದೆ ಸರ್ವರೂ ಆತ್ಮ ಸಾಕ್ಷಾತ್ಕಾರದ ಸಾಧನೆಯಲ್ಲಿ ಭಾಗವಹಿಸಲು ಅವಕಾಶಮಾಡಿಕೊಟ್ಟವರು ಬಸವಣ್ಣನವರು. ಎಲ್ಲಕ್ಕಿಂತಲೂ ಮಿಗಿಲಾಗಿ ಸಂಸಾರಿಯಾದ ಮಾನವರು ಸ್ತ್ರೀಯರಾಗಲೀ ಪುರುಷರಾಗಲಿ ತಮ್ಮ ನಿತ್ಯ ಜೀವನದಲ್ಲಿಯೇ ಸತ್ಯ ಶುದ್ಧಾತ್ಮರಾದರೆ ಮುಕ್ತಿಯನ್ನು ಹೊಂದಬಹುದೆಂಬ ಸಿದ್ಧಾಂತವನ್ನು ನಿರೂಪಿಸಿದರು. ಸಿದ್ಧಾಂತದಿಂದ ಮುಕ್ತಿಗೆ ಒಂದೇ ಮಾರ್ಗವೆಂದು ಸಾಂಪ್ರದಾಯಿಕವಾಗಿ ಪ್ರಾಚೀನಕಾಲದಿಂದ ಬಂದ ವರ್ಣಾಶ್ರಮ ಧರ್ಮದ ಎಲ್ಲೆಯನ್ನು ನಿಮ್ಮಿಂದ ದಾಟಿಸಿದರು.

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರು ಹಳಿಯಲುಬೇಡ, ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ, ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ." ಎಂದು ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸುಲಭವಾದ ಸೂತ್ರವನ್ನು ಕೊಟ್ಟವರು ಬಸವಣ್ಣನವರು.

ಬಸವಣ್ಣನವರು ಜಗತ್ತಿಗೆ ನೀಡಿದ ಅಮೂಲ್ಯ ಸಂದೇಶಗಳಲ್ಲಿ "ಕಾಯಕವೇ ಕೈಲಾಸವೆಂಬ" ನುಡಿ ಮತ್ತು ಅದರಂತೆ ನಡೆ ಅತ್ಯಂತ ವಿಶಿಷ್ಟಪೂರ್ಣವಾದುದು. ಭಾರತೀಯ ಧರ್ಮದಲ್ಲಿ ಹಾಗೂ ವಿಶ್ವದ ಸಮಾಜ ಜೀವನದಲ್ಲಿ ವೃತ್ತಿಭೇದ ಮಾನವರಲ್ಲಿ ಭಿನ್ನತೆಯನ್ನು ಎತ್ತಿತೋರುವ ಮಾನ ದಂಡವಾಗಿತ್ತು. ಬಸವಣ್ಣನವರು ವೃತ್ತಿ ಕೇವಲ ಉದರ ನಿಮಿತ್ತವಾದ ಉಪಾಯವಲ್ಲ. ನಿತ್ಯ ಸತ್ಯವನ್ನು ಕಾಣಲು ಅದು ಒಂದು ಮಾರ್ಗವೂ ಅಲ್ಲ. ಆದರೆ ಅದೇ ನಿತ್ಯ ಸತ್ಯವೆಂದು ಅರುಹಿದರು. "ಕಾಯಕವೇ ಕೈಲಾಸ" ಎಂದರೆ "ಸತ್ಯವೇ ದೇವರೆನ್ನುವಂತೆ" ವೃತ್ತಿಯೇ ನಿತ್ಯ ತತ್ವವೆಂಬ ದಿವ್ಯ ದರ್ಶನವನ್ನು ನಮಗಿತ್ತರು. ಹೀಗೆ ಅವರ ದರ್ಶನದಲ್ಲಿ ಅವರ ಕ್ರಿಯೆಯಲ್ಲಿ ನಿತ್ಯ ನೂತನವಾದ ಸತ್ಯಶುದ್ಧವಾದ ವಿಶಿಷ್ಟತೆಯನ್ನು ನಾವು ಕಾಣುತ್ತೇವೆ. ಇಂತಹ ಮಹಾನುಭಾವರ ಪುಣ್ಯಜಯಂತಿಯನ್ನು ಆಚರಿಸಿ ಅವರ ತತ್ವಾನುಸಂಧಾನದ ರೀತಿನೀತಿಗಳನ್ನು ಅರಿತುಕೊಂಡು ನಾವು ಧನ್ಯರಾಗಲು ಪ್ರಯತ್ನಿಸಬೇಕು. ಇದೇ ಪುಣ್ಯಜಯಂತಿಗಳನ್ನು ಆಚರಿಸುವುದರ ಫಲ.

ಇಂದು ಶರಣ ತತ್ವ ಪ್ರಚಾರ ಸಮಿತಿಯು ಅತ್ಯಂತ ವಿಜೃಂಭಣೆಯಿಂದ ಈ ಜಯಂತಿಯನ್ನು ಆಚರಿಸುವುದನ್ನು ಕಂಡು ನಮಗೆ ಆನಂದವಾಗಿದೆ. ಈ ಸಮಾರಂಭವು ದಿವ್ಯ ಜೀವನಾಭಿಮಾನಿಗಳಾದ ಮೈಸೂರಿನ ರಾಜ್ಯಪಾಲರಾದ ಶ್ರೀ ಮಂಗಳದಾಸ್ ಪಕ್ವಾಸಾರವರಿಂದ ಉದ್ಘಾಟಿಸಲ್ಪಡುತ್ತಿರುವುದು ಮತ್ತು ಶರಣತತ್ವ ಜ್ಞಾನದಲ್ಲಿ ಅಪಾರ ಪರಿಶ್ರಮವುಳ್ಳ "ವಚನಶಾಸ್ತ್ರ ರಹಸ್ಯ" ಕರ್ತೃಗಳಾದ ಶ್ರೀರಂಗನಾಥ ರಾಮಚಂದ್ರ ದಿವಾಕರ್‌ರವರು ಅಧ್ಯಕ್ಷತೆ ವಹಿಸುತ್ತಿರುವುದು ಈ ಸಮಾರಂಭಕ್ಕೆ ಮತ್ತಷ್ಟು ವೈಭವವನ್ನು ತಂದುಕೊಟ್ಟಿದೆ. ಶ್ರೀ ದಿವಾಕರ್‌ರವರು ಬಸವಣ್ಣನವರ ಅರ್ಥಾತ್ ಶರಣರ ತತ್ವವನ್ನು ಆಳವಾಗಿ ಅಭ್ಯಾಸಮಾಡಿದವರಾದುದರಿಂದ ಅವರ ಆಗಮನದಿಂದ ಈ ಸಭಿಕರಿಗೆ ಅಪಾರವಾದ ತತ್ವ ಸಂಪತ್ತಿನ ಜ್ಞಾನ ಲಾಭವಾಗಲು ಅವಕಾಶವಾಗಿದೆ. ಈ ಜಯಂತೀ ಮಹೋತ್ಸವದಲ್ಲಿ ನಾವು ಭಾಗವಹಿಸುವುದು ಜಯಂತಿಯನ್ನು ಆಚರಿಸುವುದು ಎಲ್ಲವೂ ಒಂದು ರೀತಿಯಿಂದ ಕಾಯಕವೇ. ಈ ಕಾಯಕಕ್ಕೆ ನಾವು ನೀವೆಲ್ಲರೂ ಸತ್ಯ ಶುದ್ಧ ಭಾವನೆಯಿಂದ ಕೂಡಿದರೆ ಇದೇ ಕೈಲಾಸವಾಗುತ್ತದೆಂದು ನಮ್ಮ ಅಭಿಮತ. ಆದುದರಿಂದ ಮಾನವನ ಅಂತರಂಗ ಬಹಿರಂಗಗಳು ನಡೆನುಡಿಯಿಂದ ಪರಿಶುದ್ಧವಾಗಿ ಮಾನವೀತೆಯ ಗುರಿಯನ್ನು ಮುಟ್ಟಲು ಈ ಜಯಂತೀ ಸಮಾರಂಭ ಸಾಧನವಾಗಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇವೆ. ಈ ಸಮಾರಂಭದಲ್ಲಿ ಭಾಗವಹಿಸಲು ಅವಕಾಶವಿತ್ತ ಶರಣತತ್ವ ಪ್ರಚಾರ ಸಮಿತಿಗೆ ಶ್ರೀ ಗುರುವು ಸತ್ಯ ಶಕ್ತಿಯನ್ನು ದಯಪಾಲಿಸಿ ಶರಣತತ್ವ ವಿಶ್ವವ್ಯಾಪಿಯಾಗಲು ಅವರು ಶ್ರಮಿಸುವಂತಾಗಲೆಂದು ಹಾರೈಸಿ ವಿರಮಿಸುತ್ತೇವೆ.

# ಮಠಗಳು ಲೋಕ ಕಲ್ಯಾಣ ಕೇಂದ್ರಗಳು

—ᐟᐟ—

**ಮೈಸೂರು ಜಿಲ್ಲಾ ಸುತ್ತೂರು ವೀರಸಿಂಹಾಸನಾಧೀಶ್ವರರಾದ ಜಗದ್ಗುರು ಪಟ್ಟದ ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು ಧಾರವಾಡ ನವಕಲ್ಯಾಣ ಮಠದ ಶ್ರೀಮನ್ನಿರಂಜನ ಜಗದ್ಗುರು ಶ್ರೀ ಗುರುಸಿದ್ಧ ಪ್ರಭುದೇವರ ೭೫ನೇ ವರ್ಷದ ಮಹೋತ್ಸವದ ಸಂದರ್ಭದಲ್ಲಿ ಅಧ್ಯಕ್ಷಪೀಠದಿಂದ ಅಪ್ಪಣೆ ಕೊಡಿಸಿದ ಸಂದೇಶ**

15-11-61

ಕನ್ನಡನಾಡಿನ ಆದರ್ಶ ಪ್ರಭುಗಳೆನಿಸಿದ ಶ್ರೀಮನ್ಮಹಾರಾಜೇಂದ್ರರೆ,
ಶ್ರೀ ಕುಮಾರಸ್ವಾಮಿಗಳವರೇ, ತತ್ವಾಭಿಮಾನಿಗಳೇ !

ಕಾಲಗುಣಕ್ಕೆ ಪರಿವರ್ತನಗೊಳ್ಳುವ ಕಾಯಧರ್ಮದಿಂದ ನಾವು ಇಷ್ಟು ದೂರ ಪ್ರವಾಸ ಮಾಡಿ ಈ ಮಹೋತ್ಸವದಲ್ಲಿ ಭಾಗವಹಿಸುವುದು ಅಸಾಧ್ಯವೆಂದು ಭಾವಿಸಿದ್ದ ನಮಗೆ ಯಾವುದೋ ಒಂದು ಅದ್ಭುತ ಶಕ್ತಿ ನಮ್ಮನ್ನು ಆಕರ್ಷಿಸಿ ಅರಸಿತಂದಿದೆ. ನಾವಾಗಿಯೇ ಬರುವ ಶಕ್ತಿ ನಮ್ಮ ದೇಹಕ್ಕೆ ಇಲ್ಲದಿದ್ದರೂ ಆ ಮಹಾಶಕ್ತಿ ತಾನಾಗಿ, ತಾನೇ ಶಕ್ತಿಯಾಗಿ ನಮ್ಮನ್ನು ಕರೆತಂದು ಈ ಆನಂದದಲ್ಲಿ ಭಾಗಿಗಳಾಗುವ ಭಾಗ್ಯವನ್ನು ಕರುಣಿಸಿದೆ. ಆದಿವ್ಯ ಶಕ್ತಿಯಾವುದು ? ಈ ಯುಗದಲ್ಲಿ ಮಾನವೀಯತೆಯನ್ನ ತಲ್ಲಣಗೊಳಿಸುವ ವಿವಿಧ ಶಕ್ತಿಗಳ ಹೆಸರನ್ನು ಕೇಳುತ್ತಿದ್ದೇವೆ. ಅಣುಶಕ್ತಿ, ಕಿರಣಶಕ್ತಿ, ಜಲಶಕ್ತಿ, ವಾಯುಶಕ್ತಿ, ಇತ್ಯಾದಿ ಎಷ್ಟೋ ಶಕ್ತಿಗಳನ್ನು ಕೇಳುತ್ತಿದ್ದೇವೆ. ಆ ಶಕ್ತಿಗಳ ಪರಿಣಾಮದ ಅನುಭವವನ್ನೂ ಪಡೆಯುತ್ತಿದ್ದೇವೆ. ಈ ಶಕ್ತಿ ವಿಕಾಸದ ಪರಿಣಾಮವಾದರೂ ಏನು ? ಮಾನವೀಯತೆಯ ವಿನಾಶ. ಈ ಶಕ್ತಿಗಳೆಲ್ಲ ಮಾನವನ ಬುದ್ಧಿ ಗಮ್ಯವಾದ ಮನೋಜನ್ಯವಾದ ಶಕ್ತಿಗಳು. ಇವುಗಳ ಉದಯದಿಂದ ವಿಶ್ವವೇ ಕಂಪಿಸುತ್ತಿದೆ. ಇಂದಿಗೆಂತು ! ನಾಳೆಗೆಂತು ? ಎಂಬ ಪ್ರಶ್ನೆ ಎಲ್ಲರ ಮುಂದೆ ನಿಲ್ಲುತ್ತಿದೆ. ಆದರೆ ಮಾನವೀಯತೆಯ ವಿಕಾಸಕ್ಕೆ ಕಾರಣವಾಗಿ ಇಂದಿಗಿಂತ ನಾಳೆ ಲೇಸು ಎಂಬ ವಿಶ್ವಾಸವನ್ನು ಮನದಲ್ಲಿ ಮೂಡಿಸುವ ಮಹಾಶಕ್ತಿಯ ಅನ್ವೇಷಣೆಗೆ ನಾವು ತೊಡಗಿದ್ದೇವೆ. ಆ ನಮ್ಮಿಂದ ದೂರವಿಲ್ಲ. ಎಪ್ಪತ್ತೈದು ಸಂವತ್ಸರಗಳ ಹಿಂದೆಯೇ ಇಂದಿನ ಜಗದ ಆಗುಹೋಗುಗಳನ್ನರಿತು ಪರಿತಪ್ತರಿಗೆ ಪರಿಹಾರಮಾರ್ಗವನ್ನು ಅರುಹಿದ ಶ್ರೀ ಮನ್ನಿರಂಜನ ಜಗದ್ಗುರು ಶ್ರೀ ಗುರುಸಿದ್ಧ ಪ್ರಭುದೇವರ ಆತ್ಮಶಕ್ತಿ ನಮ್ಮೆಲ್ಲರ ಸುಮಧುರ ಸಮ್ಮಿಲನಕ್ಕೆ ಕಾರಣವಾಗಿದೆ. ಜನತೆಯಲ್ಲಿ ಆತ್ಮೀಯತೆಯನ್ನು ಬೆಳೆಸಿ ಬಾಳು ಬೆಳಗುವಂತೆ ಮಾಡುವ ಅಂತಃಶಕ್ತಿಯೇ ಮಹಾಮಹಿಮರ ಆತ್ಮಶಕ್ತಿ. ಮಾನವ

ಮಾರ್ಗದಲ್ಲಿ ಕಾಣಬರುವ ವ್ಯರ್ಥ ಕೋಲಾಹಲವನ್ನು ತಪ್ಪಿಸಿ ಸಂತೃಪ್ತಿಯನ್ನು ದೊರಕಿಸುವ ಸಲುವಾಗಿ ತಮ್ಮ ಚೈಂದ್ರಾತ್ಮಕ ಶರೀರದಿಂದಲೇ ಸಂದೇಶವನ್ನೀಯುತ್ತಾ ನಮ್ಮನ್ನು ಮುನ್ನಡೆಸುತ್ತಿರುವ ಮಹಾಶಕ್ತಿ ಸ್ವರೂಪರಾದ ಶ್ರೀ ಗುರುಸಿದ್ಧ ಪ್ರಭುದೇವರನ್ನು ಅತ್ಯಂತ ಸಂತೋಷದಿಂದ ಸ್ಮರಿಸುತ್ತೇವೆ. ಆತ್ಮಸಾಕ್ಷಾತ್ಕಾರಿಗಳ ಸ್ಮರಣೆ ಮಾಡುವ ಸದವಕಾಶವೇ ನಮ್ಮ ಜೀವನದ ಸುಯೋಗವೆಂದರಿತು ನಾವು ಈ ಉತ್ಸವದಲ್ಲಿ ಸಮಾವೇಶಗೊಂಡಿದ್ದೇವೆ. ಈ ಸುಯೋಗವನ್ನು ಕಲ್ಪಿಸಿಕೊಟ್ಟ ಅಭಿಮಾನಿಗಳೆಲ್ಲರನ್ನು ಆತ್ಮಾನಂದದಿಂದ ಹರಸುತ್ತೇವೆ.

ತತ್ವಾಭಿಮಾನಿಗಳೇ ! ಈ ಮಹೋತ್ಸವದ ಮಹದಾನಂದವನ್ನು ಮನದಣಿಯ ಉಂಡು ಸಂತುಷ್ಟರಾಗುವುದಕ್ಕಿಂತ ಮಿಗಿಲಾದ ಹೊಣೆ ನಮಗೆ ತೋರುತ್ತಿಲ್ಲವೆಂದೇ ನಮ್ಮ ಭಾವನೆ. ಮಹಿಮಾ ಪುರುಷರಾದ ಶ್ರೀ ಮನ್ನಿರಂಜನ ಜಗದ್ಗುರು ಗುರುಸಿದ್ಧ ಪ್ರಭುದೇವರ ಆತ್ಮಪ್ರಭೆ ನಮ್ಮ ಕುಮಾರಸ್ವಾಮಿಗಳವರ ಸಾಧನಾ ಪ್ರತಿಭೆಯಾಗಿ ಆವಿರ್ಭವಿಸಿ ನವಕಲ್ಯಾಣಮಠದಿಂದ ಲೋಕ ಕಲ್ಯಾಣದ ಹೊಂಗಿರಣಗಳಾಗಿ ಹೊರಹೊಮ್ಮಿ ಕೃತಿ ರೂಪದಲ್ಲಿ ಸಂದೇಶ ರೂಪದಲ್ಲಿ ಬೆಳಗುತ್ತಿವೆ. ಆ ಮಹಾಬೆಳಗಿನಲ್ಲಿ ನೀವು ನಲಿಯುತ್ತಿರುವರಲ್ಲವೆ ! ಆದುದರಿಂದ ಈ ದೆಶೆಯಲ್ಲಿ ನಮ್ಮಿಂದ ನೀವು ಹೆಚ್ಚೇನು ನಿರೀಕ್ಷಿಸುವುದಿಲ್ಲವಷ್ಟೆ ! ಅಲ್ಲದೆ ಇದೊಂದು ಅಪೂರ್ವ ಯೋಗ. ಅರಮನೆ ಗುರುಮನೆಗಳು ಸಮರಸಗೊಂಡು ಮಾನವತೆಯ ಪೂರ್ಣತೆಗೆ ದಾರಿ ತೋರುವ ಸುಸಂದರ್ಭ. ರಾಷ್ಟ್ರದ ಬಾಹ್ಯ ಜೀವನವನ್ನು ಭವ್ಯಗೊಳಿಸುವ ಆಡಳಿತ ಸೂತ್ರ ಹಿಡಿದು ಅದಕ್ಕಾಗಿಯೇ ಜನಿಸಿ ಅದಕ್ಕಾಗಿಯೇ ಬೆಳೆಯಲ್ಪಟ್ಟ ಮೈಸೂರು ಯದುವಂಶಜರು ರಾಷ್ಟ್ರದ ಜೀವನದಲ್ಲಿ ಅಂತರಂಗ ಬಹಿರಂಗ ಜೀವಿತವನ್ನೂ ಸಮರಸಗೊಳಿಸುವ ಸಾಧನೆಯಲ್ಲಿ ನಿರತರಾಗಿದ್ದಾರೆಂದು ಅಭಿಮಾನದಿಂದ ತಿಳಿಸಬಯಸುತ್ತೇವೆ. ನಮ್ಮ ಇಂದಿನ ಕರ್ನಾಟಕ ರತ್ನ ಸಿಂಹಾಸನಾಧೀಶ್ವರರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ. ಜಿ. ಸಿ. ಬಿ. ಎಲ್ ಎಲ್. ಡಿ. ಇವರು ಅರಮನೆಯು ಅರಾಮಧಾಮವೆಂದರಿಯದೆ ಮಾನವತಾ ಕಲ್ಯಾಣಕ್ಕಾಗಿ ಆತ್ಮಾನುಸಂಧಾನದಲ್ಲಿ ನಿರತರಾಗಿ ತಾವು ಕಂಡ ಅನುಭವದ ಅಮರ ಸಂದೇಶವನ್ನು ವಿಶ್ವಕ್ಕೆ ನೀಡುತ್ತಿದ್ದಾರೆ. ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಸಮಾಜ ಶಾಸ್ತ್ರಗಳಲ್ಲಿ ಪಾಂಡಿತ್ಯಗಳಿಸಿದಂತೆ ಧರ್ಮಶಾಸ್ತ್ರ, ನೀತಿಶಾಸ್ತ್ರ, ತತ್ವಶಾಸ್ತ್ರಗಳಲ್ಲಿ ಅನುಭಾವದ ಅಮೃತತ್ವವನ್ನು ಬೆಳೆಸಿಕೊಂಡವರಾಗಿದ್ದಾರೆ. ಅಂತೆಯೇ ಮಹಾನುಭಾವರ ಅವತಾರದಿಂದ ವಿಶ್ವಕ್ಕೆ ದೊರೆಯುವ ಸತ್ಫಲವನ್ನೂ ಅದನ್ನು ಜನತೆ ಸ್ವೀಕರಿಸಿ ಅನುಸರಿಸುವ ಬಗೆಯನ್ನೂ ಅನುಭವ ಪೂರ್ಣವಾದ ವಾದ ಸರಣಿಯಿಂದ ನಮ್ಮ ಮುಂದಿಟ್ಟು ಈ ಸಮಾರಂಭವನ್ನು ಉದ್ಘಾಟಿಸಿದ್ದಾರೆ. ಅಂದಮೇಲೆ ಇಂದಿನ ನಮ್ಮ ಕರ್ತವ್ಯ ಸರಳವೂ ಸುಲಭವೂ ಆಯಿತು.

ಆವರೆ ತಾವು ನಮ್ಮನ್ನು ಅಭೂತಪೂರ್ವ ಸಂಭ್ರಮದೊಡನೆ ಸ್ವಾಗತಿಸಿ
ಶಂಸನೀಯವಾದ ಹಲಕೆಲವು ಸುಗುಣಗಳ ಹೊಣೆಯನ್ನು ಹೊರಿಸಿರುವಿರಿ.
ಮ್ಮನ್ನು ಅರಸಿ ಆತಿಥ್ಯ [illegible] ನಿಮ್ಮ ಪ್ರಶಂಸೆಯ ಫಲ ನಮ್ಮ ಹಿರಿಯರಿಗೆ ಮತ್ತು
ನಾ ನಮಗೆ ದಾರಿ ತೋರುತ್ತಿರುವ ಶ್ರೀ ಗುರುಸಿದ್ಧ ಪ್ರಭುದೇವರಂತಹ ಅನುಭವಿ
ಳಿಗೆ ಸೇರಿರುತ್ತದೆ. ನಾವು ಪುಣ್ಯ[illegible]ಗಳಾದ ಮಹಾಮಹಿಮರ ಕರುಣೆಯ ಹಸುಳೆ
ವಾಗಿ ಅವರಾಡಿಸಿದಂತೆ ನಾವಾಡಿದ್ದೇವೆ. ಇದರಲ್ಲಿ ನಮ್ಮ ವೈಯಕ್ತಿಕವೇನಿರುವುದಿಲ್ಲ.
ತೃಣಮಪಿ [illegible] ಚಲತಿ [illegible] ಎನ್ನುವ [illegible]! ಆ ಮಹಾಕರುಣೆಯಿಲ್ಲವೆ ನಾವು
ನು ತಾನೇ ಮಾಡಲು ಸಾಧ್ಯ. ದೇಹ ಶಕ್ತಿ ಬುದ್ಧಿ ಶಕ್ತಿಗಳ ಪ್ರಾಬಲ್ಯವಳಿದು
ಂಕಟಕ್ಕೆ ಸಿಕ್ಕಿದಾಗ "ಮಾಂ ಏಕಂ ಶರಣಂ ವ್ರಜ" ಎಂದು ಕೂಗಿ ಕರೆದಂತಾಗಿ
ಮಂತ್ರಯಜ್ಞ ತಪಸ್ಸನ್ನು ಅಪ್ಪಿದೆವು ಅವಲಂಬಿಸಿದೆವು. ಹತ್ತು ವರ್ಷಗಳಿಂದ
ರಂತರವಾಗಿ ನಿರಾತಂಕವಾಗಿ ನಮ್ಮ ಮಹಾಮಂತ್ರದ ಮಹಾಯಜ್ಞ ನಡೆಯುತ್ತಿದೆ.
ತಪಸ್ಸು ನಮ್ಮನ್ನು ನಡೆಸುತ್ತಿದೆ ಎಂದರೂ ತಪ್ಪಲ್ಲ. ಭಗವಾನ್ ಬಸವಣ್ಣನವರು
ುಂದರವಾದ ವಚನದಲ್ಲಿ ಈ ಚಿತ್ರವನ್ನು ನಮ್ಮ ಮುಂದಿಡುತ್ತಾರೆ.

> ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನ್ನಿಕ್ಕಿ ಹರದಕುಳ್ಳಿರ್ದ
> ನಮ್ಮ ಮಹದೇವಶೆಟ್ಟಿ. ಒಮ್ಮನವಾದರೆ ಒಡನೆ ನುಡಿವನು ;
> ಇಮ್ಮನವಾದರೆ ನುಡಿಯನು. ಕಾಣಿಯ ಸೋಲ, ಕಾಣಿಯ ಗೆಲ.
> ಜಾಣ ನೋಡವ್ವ ನಮ್ಮ ಕೂಡಲ ಸಂಗಮದೇವ.

ಇದು ಸೃಷ್ಟಿಯ ವ್ಯಾಪಾರದ ಚಿತ್ರ. ಈ ಚಿತ್ರದ ಅರಿವು ನಮಗಾಗಬೇಕು.
ಎಪ್ಪತ್ತೈದು ವರ್ಷದ ಹಿಂದೆ ಅವತರಿಸಿದ ಮಹಾ ಯೋಗಿಗಳ ಆದರ್ಶದಲ್ಲಿ ಕೆಲವೇ
ಮಂದಿ ಅನುಭಾವಿಗಳು ಒಮ್ಮನವಾಗಿ ನುಡಿದು ನಡೆದು ಈ ಸಂಸ್ಥೆಯನ್ನು ಬೆಳಗಿಸಿ
ದ್ದಾರೆ. ಅವರಂತೆ ಅನುಭಾವಿಗಳ ಅರಿವಿನಲ್ಲಿ ನಾವೆಲ್ಲರೂ ಒಮ್ಮನವಾಗಿ ನಡೆದರೆ,
ನುಡಿದರೆ ನಮ್ಮ ಆತ್ಮವನ್ನು ಬೆಳಗಿಸಿಕೊಳ್ಳಲು ಸಾಧ್ಯವಾಗುತ್ತದೆ.

ಸೃಷ್ಟಿಯ ಈ ವೈಚಿತ್ರ್ಯದಲ್ಲಿ ಒಮ್ಮನದಿಂದ ನಡೆಯುವಾಗ ಸನ್ಮಾರ್ಗದಲ್ಲಿ ನಡೆವಾಗ
ಎಷ್ಟೋ ಆಘಾತ ವಿಘಾತಗಳು ಬರುತ್ತವೆ. ಅಂತಯೇ ಈ ಸಂಸ್ಥೆ [illegible]ನಾಗಲೂ
ಬಂದಿರಬಹುದು. ಅವು ಬರುವುದಾದರೂ ನಮ್ಮಲ್ಲಿರುವ ಶಕ್ತಿಯನ್ನು ಘನಗೊಳಿಸುವು
ದಕ್ಕಾಗಿಯೇ ಎಂಬ ಭಾವನೆ ನಮ್ಮಲ್ಲಿರಬೇಕು. ಅಂತಃಶಕ್ತಿ ವಿಕಾಸದಲ್ಲಿ ನಿರತನಾದ
ಸಾಧಕ ಸಿಕ್ಕುವಷ್ಟು ಸಂಕಟಕ್ಕೆ ಬಹಿರಂಗ ವ್ಯಾಪಾರಿ ಸಿಕ್ಕುವುದಿಲ್ಲ, ಎಂಬಂತೆ ನಮಗೆ
ಕಾಣುವುದುಂಟು ಆದರೆ ಆತ್ಮಶಕ್ತಿ ಸಾಧಕ ಶ್ರದ್ಧೆಯಿಂದ ನಡೆದರೆ ನಿಶ್ಶ್ರೇಯಸವನ್ನು
ಪಡೆಯುವನು! ಬಹಿರಂಗ ವ್ಯಾಪಾರದಲ್ಲಿ ಮುಳುಗಿದವನು ಏಳಿಗೆಯ [illegible]ಲಾರ.
ಅಂತೆಯೇ ಶ್ರೀ ಗುರುಸಿದ್ಧ ಪ್ರಭುದೇವರ ಆಶಯದಂತೆ ಈ ನವ ಕಲ್ಯಾಣ ಮಹಾಂಬ

ಸಂಸ್ಥೆ ಸ್ಥಾಪಿತವಾಗಿ ಶರಣ ತತ್ವದ ಸಾಧಕರ ಸಿದ್ಧಿಮಂದಿರವಾಗಿ ಬೆಳೆಯುತ್ತಿ
ಯೆಂದು ತಿಳಿದು ಸಂತೋಷಪಟ್ಟಿದ್ದೇವೆ. ಸಂಸ್ಥೆ ಹೊಸತೆಂದರೆ ಸಂಪ್ರದಾಯ ಶರಣ
ಮನ್ನಿಸರು. ಹಳೆತೆಂದರೆ ಪ್ರಗತಿಶೀಲರು ಮಣಿಯರು. ಹೊಸತು ಹಳತೆಂಬ ಭಾವನೆಯ
ಭ್ರಮಾತ್ಮಕವೇ ಹೊರತು ಪ್ರಯೋಜಕವಲ್ಲ. ಮಠಗಳು ಲೋಕಕಲ್ಯಾಣ ಕೇಂದ್ರಗಳ
ಮಠಾಧಿಪತಿಗಳು ಮಾನವೀಯತೆಯನ್ನು ಪೂರ್ಣತೆಗೆ ಕೊಂಡೊಯ್ಯುವ ರಥದ ಸಾ
ಥಿಗಳು. ಇಂದಿನ ಮಠಗಳು ಮಠಾಧಿಪತಿಗಳ ಹಿರಿಮೆಯನ್ನು ನಾವು ಯಾವ ಮಾಪ
ದಿಂದ ಅಳೆಯಬೇಕು. ಎಂದೋ ಒಂದು ದಿನ ಯಾರೋ ಒಬ್ಬರು ಸಾಧಿಸಿದ ಸಾ
ನೆಯ ನೆರಳಿನಲ್ಲಿ ಉಳಿದವರೆಲ್ಲರೂ ಹಿರಿಯರೇ! ಶಿವಶರಣರ ವಾಣಿ ನಮಗೇ
ಇನ್ನೂ ಅರಿವಾಗಿಲ್ಲ.

"ಅಜಕಲ್ಪ ಕೋಟಿವರ್ಷದವರೆಲ್ಲ ಹಿರಿಯರೆ? ಹುತ್ತೇರಿಬೆತ್ತ ಬೆಳೆದ ತಪಸ್ವಿ
ಳೆಲ್ಲ ಹಿರಿಯರೆ! ನಡುಮುರಿದು ಗುಡುಗೂರಿ ತಲೆ ನಡುಗಿದವರೆಲ್ಲ ಹಿರಿಯರೆ? ನರೆತ
ಹೆಚ್ಚಿ ಮತಿಗೆಟ್ಟು ಒಂದನಾಡಹೋಗಿ ಒಂಭತ್ತನಾಡುವ ಅಜ್ಞಾನಿಗಳೆಲ್ಲ ಹಿರಿಯರೆ
ಅನುವರಿದು ಘನವ ಬೆರಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚನ್ನಸಂ
ಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹದೇವಿಯಕ್ಕಂಗಾಯಿತ್ತು.

ಈ ಧೀರವಾಣಿಯ ಅರಿವು ನಮಗೆ ಬೇಕು. ಹಿಂದನ ಹಿರಿಯ ಮಹಿಮ
ಆಶೀರ್ವಾದದ ಆಶ್ರಯದಲ್ಲಿ ಅಂದಂದಿನ ಮಠಾಧಿಪತಿಗಳು ಸಾಧಿಸಿದ ಸಾಧನೆಯಿಂ
ಸಂಸ್ಥೆಗಳ ಹಿರಿಮೆಗಳನ್ನು ಜನತೆ ಮಾನಿಸುತ್ತದೆ. ಮಠಾಧಿಪತಿಗಳು ಈ ಬಗ್ಗೆ ಎಚ್ಚ
ರದಿಂದಿರುವುದು ಒಳಿತಲ್ಲವೆ? ಮಠಪತಿಗಳು ತಮ್ಮ ಕೃತಿಯಿಂದ ತಮ್ಮ ಆತ್ಮಾನ
ಸಂಧಾನದ ಸಾಧನೆಯಿಂದ ಮಾನವ ಕಲ್ಯಾಣಕ್ಕಾಗಿ ಹೆಣಗಿದರೆ ಅಂದು ಮಾತ್ರವೆ
ಮಠಕ್ಕೂ ಮಠಾಧಿಪತಿಗೂ ಮಾನ್ಯತೆ ಮತ್ತು ಅವುಗಳಿಗೆ ಉಳಿವು. ನಮ
ಶ್ರೀ ಕುಮಾರಸ್ವಾಮಿಗಳವರು ಸರ್ವದರ್ಶನ ಶಾಸ್ತ್ರದಲ್ಲಿ ಪರಿಣತೆಯನ್ನು ಪಡೆದ
ಆಧುನಿಕ ಯುಗದ ಅವಶ್ಯಕತೆಯನ್ನು ಅರಿತು ನವ ಕಲ್ಯಾಣಮಠವನ್ನು ರೂಪಗೊ
ಸುತ್ತಿದ್ದಾರೆ. ಶ್ರೀ ಗುರುಸಿದ್ಧಪ್ರಭುದೇವರ ಆಶೀರ್ವಾದ, ಆದೇಶವನ್ನು, ಶರಣ
ಸಂದೇಶವನ್ನು ಆತ್ಮಾನುಸಂಧಾನದಿಂದ ವಿಶ್ವದಲ್ಲಿ ಬೆಳಗಿಸುತಿದ್ದಾರೆ. ಆದುದರಿಂ
ಈ ಸಂಸ್ಥೆಯು ವಿಶ್ವಜ್ಞಾನದ ಕೇಂದ್ರವಾಗಲೆಂದು, ಈ ಸಂಸ್ಥೆಯಿಂದ ಮಾನವ ಜೀ
ನದಲ್ಲಿ ನವೋದಯಉಂಟಾಗಲೆಂದೂ ಹೃತ್ಪೂರ್ವಕವಾಗಿ ಹಾರೈಸುತ್ತೇವೆ. ಇಪ್ಪ
ತ್ತೈದು ವರ್ಷಗಳಕಾಲ ಈ ಸಂಸ್ಥೆಯನ್ನು ಭವ್ಯವಾಗಿ ಬೆಳೆಸಿದ ಭಕ್ತವೃಂದಕೂ
ಇಂದಿನ ಸಮಾರಂಭದಲ್ಲಿ ಭಾಗವಹಿಸಲು ನಮಗೆ ಅವಕಾಶವಿತ್ತ ಕಾರ್ಯಕರ್ತರಿಗು
ಪರಮಾತ್ಮನು ಸರ್ವಸನ್ಮಂಗಳವನ್ನುಂಟು ಮಾಡಲೆಂದು ಆಶಿಸುತ್ತೇವೆ.

"ಸರ್ವೇಜನಾಃ ಸುಖಿನೋಭವಂತು"

# ಪ್ರಾರ್ಥನಾ ಸಂಸ್ಕೃತಿ

—౿౿—

**ಸುತ್ತೂರು ವೀರಸಿಂಹಾಸನಾಧೀಶ್ವರರಾದ ಶ್ರೀ ಜಗದ್ಗುರು ಪಟ್ಟದ ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು ಧಾರವಾಡದಲ್ಲಿ ನಡೆದ ಅಖಿಲ ಭಾರತ ಪ್ರಾರ್ಥನಾಯೋಗಮಂಡಳಿಗಳ ತೃತೀಯ ಸಮ್ಮೇಳನದ ಅಧ್ಯಕ್ಷ ಪೀಠದಿಂದ ಅಪ್ಪಣೆ ಕೊಡಿಸಿದ ಸಂದೇಶ**

16-11-61

ಕರ್ನಾಟಕದ ರತ್ನಸಿಂಹಾಸನಾಧೀಶ್ವರರೇ, ಶ್ರೀ ಕುಮಾರಸ್ವಾಮಿಗಳವರೇ, ಸ್ವಾಗತ ಸಮಿತಿಯ ಕಾರ್ಯಕರ್ತರೇ ಮತ್ತು ಅಭಿಮಾನಿಗಳೇ,

ಯೋಗೀಂದ್ರರಾದ ಶ್ರೀಮನ್ನಿರಂಜನ ಜಗದ್ಗುರು ಶ್ರೀ ಗುರುಸಿದ್ಧ ಪ್ರಭುದೇವರ ಸಂದೇಶದಂತೆ ಸಂಸ್ಥಾಪಿತವಾದ ಶ್ರೀ ನವಕಲ್ಯಾಣ ಮಠದಿಂದ ಲೋಕ ಕಲ್ಯಾಣಕರವಾದ ಅನೇಕ ಮಹತ್ಕಾರ್ಯಗಳು ನಡೆಯುತ್ತಿರುವುದು ಅತ್ಯಂತ ಪ್ರಶಂಸನೀಯವಾಗಿದೆ. ಗುರುಗಳ ಅನುಗ್ರಹದಂತೆ ತಮ್ಮ ಆತ್ಮಶಕ್ತಿಯನ್ನು ಬೆಳಸಿಕೊಂಡ ನಮ್ಮ ಶ್ರೀ ಕುಮಾರಸ್ವಾಮಿಗಳವರು ಪ್ರಾರ್ಥನಾಯೋಗದ ಮೂಲಕ ಸುಲಭವಾದ ಸಾಧನಾ ಮಾರ್ಗವನ್ನು ಮಾನವಕೋಟಿಗೆ ತೋರಿಸಲು ಯತ್ನಿಸಿದ್ದಾರೆ. ಅದರ ಫಲವಾಗಿ ಈ ಮೂರನೇ ಮಹಾಸಮ್ಮೇಳನವು ನೆರವೇರುತ್ತಿದೆ. ಈ ಸಮಾರಂಭದಲ್ಲಿ ಭಾಗವಹಿಸುವ ಅವಕಾಶ ನಮಗೆ ದೊರೆತಿರುವುದಕ್ಕಾಗಿ ಆನಂದಿತರಾಗಿದ್ದೇವೆ.

ಈ ಸಮ್ಮೇಳನವನ್ನು ಉದ್ಘಾಟಿಸಿದ ಕರ್ನಾಟಕದ ರತ್ನಸಿಂಹಾಸನಾಧೀಶ್ವರರಾದ ಶ್ರೀಮನ್ಮಹಾರಾಜಾ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಅವರು ರಾಜಯೋಗಿಗಳು, ತತ್ವಜ್ಞಾನಿಗಳು ಮತ್ತು ತತ್ವದ ಅನುಸಂಧಾನದಲ್ಲಿ ಅಚಲ ಶ್ರದ್ಧೆಯುಳ್ಳವರು, ಶ್ರದ್ಧೆ ನಿಷ್ಠೆಗಳ ಫಲವಾಗಿ ಅವರ ಅಂತರಂಗದಲ್ಲಿ ಪಲ್ಲವಿಸಿದ ಆತ್ಮಾನುಭವದ ತತ್ವ ಕುಸುಮಗಳ ಪರಿಮಳವನ್ನು ವಿಶ್ವದ ನಾನಾ ಕ್ಷೇತ್ರಗಳಲ್ಲಿ ಪಸರಿಸಿದ್ದಾರೆ ಕೃತಿಯಾಗಿ ಹೆಣೆದು ಲೋಕಮಾತೆಯ ಮುಡಿಗೆ ಮುಡಿಸಿ ಧನ್ಯರಾಗಿದ್ದಾರೆ. ಬುದ್ಧಿಯನ್ನರಸುತ್ತ ಶುದ್ಧಾತ್ಮರಾಗಿದ್ದಾರೆ. ಅವರು ಪ್ರಾರ್ಥನಾಯೋಗದ ಹಿರಿಮೆಯನ್ನು ಸಮ್ಮೆಲ್ಲರ ಮನಮುಟ್ಟುವಂತೆ ಅರುಹಿದ್ದಾರೆ. ಅಲ್ಲದೆ ಪ್ರಾರ್ಥನಾಯೋಗವೆಂಬ ಸಾಧನಾಮಾರ್ಗದ ನಿಯೋಜಕರಾದ ಶ್ರೀ ಕುಮಾರಸ್ವಾಮಿಗಳವರು ಈ ವಿಷಯದಲ್ಲಿ ಕೆಲವು ಅಮೂಲ್ಯ ಗ್ರಂಥಗಳನ್ನು ರಚಿಸಿ ನಮ್ಮಗಳ ಮೇಲೆ ಅಪೂರ್ವವಾದ ಪರಿಣಾಮವನ್ನುಂಟುಮಾಡಿದ್ದಾರೆ. ಆದುದರಿಂದ ಈ ವಿಷಯದಲ್ಲಿ ನಾವು ಹೆಚ್ಚು ವಿವರಿಸುವ

ಅಗತ್ಯವಿಲ್ಲ. ಅಲ್ಲದೆ ಈ ಮಾರ್ಗ ಅವಲಂಬನಾತ್ಮಕವೇ ಹೊರತು ವಿವರಣಾತ್ಮಕವು ಅಲ್ಲ.

ಯೋಗವೆಂದರೆ ನಾನಾ ಬಗೆಯ ಅರ್ಥಗಳುಂಟು. ಕುಶಲತೆಯಿಂದ ಮಾಡುವ ಕಾಯಕವೂ ಯೋಗವೇ, ಸಮತ್ವಭಾವವೂ ಯೋಗವೇ. ಚಿತ್ತ ಚಾಂಚಲ್ಯವನ್ನು ಸ್ಥಗಿತಗೊಳಿಸುವುದೂ ಯೋಗವೇ ಹೀಗೆ ಯೋಗದ ವಿಷಯದಲ್ಲಿ ವಿಪುಲವಾದ ಶಾಸ್ತ್ರ ರಾಶಿ ಬೆಳೆದಿದೆ. ಭಗವದ್ಗೀತೆಯ ಪ್ರತಿಯೊಂದು ಅಧ್ಯಾಯವೂ ಯೋಗಮಾರ್ಗವೆಂದೇ ಗೀತಾಕಾರರ ಅಭಿಮತ. ಯೋಗವೆಂದರೆ ಕೂಡುವುದು. ಅಂದರೆ ಜೀವಾತ್ಮ ಪರ ಮಾತ್ಮನಲ್ಲಿ ಬೆರೆಯುವ ಸಾಧನಾಮಾರ್ಗವನ್ನೇ ನಾವು ಯೋಗವೆನ್ನುತ್ತೇವೆ. ಮಾರ್ಗ ವನ್ನರಸಿ ಮುನ್ನಡೆಯುವುದಕ್ಕಿಂತ ಮಾರ್ಗದ ವಿಚಾರದಲ್ಲಿ ವಿಮರ್ಶೆ ಹೆಚ್ಚು ಬೆಳೆ ಯುತ್ತಿದೆ. ಶಾಸ್ತ್ರ ಬೆಳೆದಂತೆ ವಿಯೋಗವೇ ಬಲಿಯುತ್ತಾ ಬಂದಿದೆ. ಇಂದಿನ ಯುಗದ ದಾರುಣ ಪರಿಸ್ಥಿತಿಯಲ್ಲಿ ವಿಚಾರ ಅತಿರೇಕವಾಗಿ ಆಚಾರವು ಅಳಿಯುತ್ತಿದೆ. ಆದುದರಿಂದಲೇ ಜನ ಜೀವನದಲ್ಲಿ ಅಶಾಂತಿ, ಕಳವಳ, ನಿರಾಶೆಗಳು ತಾಂಡವವಾಡು ತ್ತಿವೆ. ಈ ಸಂದಿಗ್ಧ ಸಮಯದಲ್ಲಿ ತತ್ವಜಿಜ್ಞಾಸೆಗಿಂತಲೂ ತತ್ವದ ಅನುಸಂಧಾನ ವಾಗಬೇಕು. ಅನುಸಂಧಾನದ ಸಿದ್ಧಿಗೆ ಬೇಸತ್ತ ಮಾನವ ಸುಲಭದ ಹಾದಿಯನ್ನು ಅರುಸುತ್ತಿದ್ದಾನೆ. ಅವನಿಗೆ ಈ ಪ್ರಾರ್ಥನಾಮಾರ್ಗವನ್ನು ಬಿಟ್ಟು "ಅನ್ಯಥಾ ಶರಣಂ ನಾಸ್ತಿ". ಆದುದರಿಂದ ಪ್ರಾರ್ಥನಾ ಯೋಗದಲ್ಲಿ ನಾವು ಜಿನಿಯುವುದನ್ನು ಕಲಿಯ ಬೇಕು. ಯಾವ ಉಪಾಧಿಯೂ ಇಲ್ಲದ ಸುಲಭವಾದ. ಸಿದ್ಧಿಮಾರ್ಗವೆಂದರೆ ಪ್ರಾರ್ಥನೆ ಒಂದೇ. ಸರ್ವಕಾಲದಲ್ಲಿ ಸರ್ವಸ್ಥಾನದಲ್ಲಿ ಪ್ರಾರ್ಥನಾಯೋಗನಿರತರಾದ ನಾವು ಅಂತರಂಗ ಸುಖಿಗಳೂ ಬಹಿರಂಗ ಸುಖಿಗಳೂ ಆಗುತ್ತೇವೆ. ಈ ಪ್ರಾರ್ಥನಾ ಯೋಗ ಮಾರ್ಗದಿಂದಲೇ ಮಹಾತ್ಮಗಾಂಧಿಯವರು ಧನ್ಯರಾದರು.

ಶ್ರೀ ಕುಮಾರಸ್ವಾಮಿಗಳು ನಿಯೋಜಿಸಿದ ಪ್ರಾರ್ಥನಾಮಂಡಲಗಳು ಪ್ರತಿ ಯೊಂದು ಹಳ್ಳಿಯಲ್ಲಿ ಮನೆಯಲ್ಲಿ ಬೆಳೆಯಬೇಕು. ಪ್ರಾರ್ಥನಾಯೋಗ ಮಾನವತೆಯ ನಿತ್ಯ ಜೀವನದ ಜೀವಂತ ಸಂಸ್ಕೃತಿಯಾಗಬೇಕು. ಅಂದೇ ಲೋಕದ ಕಲ್ಯಾಣ ಅದಕ್ಕಾಗಿ ಸಾಧಕರು ಶ್ರಮಿಸಲಿ. ಅದರಿಂದ ಮಾನವತೆಯು ಪುನೀತವಾಗಲೆಂದು ಹರಸುತ್ತೇವೆ.

ಈ ಸಮ್ಮೇಳನದಲ್ಲಿ ಭಾಗವಹಿಸುವ ಸುಯೋಗವನ್ನು ನಮಗೆ ಒದಗಿಸಿದ ಸರ್ವರಿಗೂ ಸರ್ವತೋಮುಖಕ್ಷೇಮವನ್ನು ಹಾರೈಸಿ ವಿರಮಿಸುತ್ತೇವೆ.

|| ಓಂ ಶಾಂತಿಃ ಶಾಂತಿಃ ಶಾಂತಿಃ ||

————

# ಜಗದ್ಗುರು ಶ್ರೀ ಶಿವರಾತ್ರೀಶ್ವರ ಜಯಂತೀ ಮಹೋತ್ಸವದಲ್ಲಿ ಅರ್ಪಿಸಿದ ಕವನ ಕಾಣಿಕೆ

ದಿನಾಂಕ 1-12-1959

—෴—

## ಶ್ರೀ ಶಿವರಾತ್ರೀಶ್ವರ ಆಶ್ರಮದಲ್ಲಿ

ಸುತ್ತಲೂ ಹಸಿರಿನಲ್ಲಿ ಉಸಿರಾಡುತಿರೆ ಭೂಮಿ
ಮೌನವೇ ಮಗುವಾಗಿ ನಿದ್ರಿಸುತಿದೆ
ಸುತ್ತ ಶಾಲೀವನದ ಹಾಸುಗದ್ದಿಗೆಯಲ್ಲಿ
ದಿವ್ಯಸ್ವಪ್ನದ ಪುಳಕ ಹೊರಹೊಮ್ಮಿದೆ
ನಿಂತ ಶಿಲೆಶಿಲೆಗೊಂದು ಮಂತ್ರಮುಗ್ಧತೆ ಬಂದು
ಸಹಸ್ರವರ್ಷದ ತಪಕೆ ಕಾಪಾಗಿವೆ
ಟೊಂಗೆ ಟೊಂಗೆಗಳಲ್ಲಿ ಮಂಗಳವ ಹಾಡುತಿಹ
ವಿಹಗ ಗುರು ಪದಕಿಟ್ಟ ಹೂವಾಗಿವೆ
ಸಡಗರದ ನಡಗೆಯಲಿ ಪುಣ್ಯಸಲೆಯನ್ನರಸಿ
ಬಂದ ಕಪಿಲೆಯ ಹೃದಯವ ಥವಥವಿಸಿದೆ
ತನ್ನ ಹೃದಯದ ಭಕ್ತಿಉಲಿಯಾ ಹರಿಯುತಿರೆ
ತೆರೆತೆರೆಯು ಪಲ್ಲವಿಯ ಗುಣಗಣಿಸಿದೆ
ಮುಂದೆ ಮುಕ್ಕೂಡಲಲಿ ತಾಯಕರೆ ಕೇಳುತಿರೆ
ತೊರೆಯಲಾರದ ತವಕ ತೆರೆಚಿಮ್ಮಿದೆ
ತಿರುಪಾದದಲಿ ನೊಸಲನಿಕ್ಕಿ ಧನ್ಯತೆಯಾಂತ
ಸಂಭ್ರಮದಸುಳಿಮಿಂಚು ಹರಿದಾಡಿದೆ
ಹಸಿರ ಸತ್ತಿಗೆಯನ್ನು ಬಿಚ್ಚಿನಿಂತಿರೆ ತೆಂಗು
ಸುತ್ತಲೂ ತರತರದ ತರುಲತೆಯಿದೆ
ಬೀಸಲಾರದೆ ಬೀಸಿ ಬರುವ ಮೆದುಗಾಳಿಯಲಿ
ಓಂಕಾರದಲೆಯಲೆಯು ದನಿಯಾಡಿದೆ
ಗುರುಕರುಣೆ ನೆರಳಾಗಿ ಹರಕೆ ಸುಳಿವೆಲರಾಗಿ
ದೀರ್ಘತಪ ಹಸಿರಾಗಿ ಹರಡಿರುವುದೋ !
ಸ್ತಬ್ಧತಮವ್ರಾತದಲಿ ಅವ್ಯಕ್ತರೂಪಿನಲಿ

ಅಭಯಹಸ್ತದ ಮೂರ್ತಿ ಮೂಡುತಿಹುದೊ !
ಶಾಂತಿಮಂತ್ರದ ಮೋಡಿ ತೇಲುತಿಹುದೊ !
ನಿತ್ಯ ಸಂದೇಶವನು ಸಾರುತಿಹುದೊ

**ಕಪಿಲೆಯ ತೀರದಿ**

ಅಲ್ಲಿ ಕಪಿಲೆಯ ತೋಳ ಹುಲ್ಲುಹಾಸಿನ ಮೇಲೆ
ಹೂವನೆರಚಿದರಾರೊ, ಬೆರಗಾದೆನು !
ಮೆಲ್ಲನಡಿಯಿಟ್ಟಲ್ಲಿನೋಡಿದೆನು ನಾಕವನೆ
ಬೆಳ್ಳಕ್ಕಿಗಳ ಬೆಡಗು–ಬೆಳದಿಂಗಳು !
ಎನ್ನ ಸುಳಿವನ್ನರಿತು ಬೆಚ್ಚಿದವು ಹಕ್ಕಿಗಳು
ಬುವಿಯ ನಲ್ಮೆ ಗೀತೆಯನು ಉಲಿಯುವಂತೆ ;
ಮುಗಿಲ ಎದೆಯೊಳಗಿಟ್ಟ ನದಿಲಲಾಟದ ಮೇಲೆ
ಏರಿದವು, ನೀರಬೆಳ್ಗೂದಲಂತೆ !
ಗಾನಗಂಭೀರದಲಿ ಹರಿವ ಕಪಿಲೆಯಕಣ್ಣ
ಮುಗುಳೆ ಅರಳಿದುದೇನೊ ಹೂವಿನಂತೆ
ಈ ಪ್ರಶಾಂತತೆಗಿಲ್ಲಿ ನವಚೆಲುವ ಸೂಸುತ್ತ
ನವರಂಗವಲ್ಲಿಯನೆ ಬರೆದಂತಿರೆ,
ಇರುಳ ತಾರಗೆಯೆಲ್ಲ ಹಗಲಿನೊಳಗೀನೆಲದ
ಚೆಲುವನೀಂಟುವುವೇನೊ ಈ ಪರಿಯಲಿ
ಬಾನ ಹೆಗ್ಗೊಡದಿಂದ ಮೊಸರ ಚೆಲ್ಲಿದರಾರೊ
ಆಚೆ ಮರಳಿನಮೇಲೆ ಮರೆಯಾದವು !
ನಾ ಬಂದರೋಡುವುವು ಮತ್ತಲ್ಲಿ ಕೂಡುವುವು
ಮನುಜರನು ಕಂಡರಿವಕೇಕೆ ಬೆದರು
ಮಾನವರ ಬಗೆಯೊಂದು ಶತ್ರುಸ್ವಪ್ನವತಂದು
ನಾಚಿಸಿದುವೆನ್ನನ್ನೆ ಖಗಗಳೆದುರು

**ಜಿ. ಶಂ. ಪರಮಶಿವಯ್ಯ**

———



ಸುತ್ತೂರು ಮಠಕ್ಕೆ ರಾಜ್ಯಪಾಲರು ಸರ್ ಸಿ. ಪಿ. ರಾಮಸ್ವಾಮಿ ಅಯ್ಯರ್‌ರೊಡನೆ ಆಗಮಿಸಿದುದು.



ಸುತ್ತೂರು ಮಠದಲ್ಲಿ ರಾಜ್ಯಪಾಲರು ಮುಖ್ಯಮಂತ್ರಿ ಜತ್ತಿಯವರು ಮತ್ತು ಸಚಿವ ವೀರೇಂದ್ರ ಪಾಟೀಲ್‌ರವರೊಡನೆ

## ಆಶೀರ್ವಾದ ಪ್ರಕಾಶ

ಸುತ್ತೂರು ವೀರಸಿಂಹಾಸನದ ಸಂಸ್ಥಾಪನಾಚಾರ್ಯರಾದ ಜಗದ್ಗುರು ಶ್ರೀ
ರಾತ್ರೀಶ್ವರ ಕೃಪಾಬಲದಿಂದ ಸಂಸ್ಥೆಯು ವಿಪುಲಗೊಂಡು ಬೆಳೆಯಿತು. ಸಹಸ್ರ
ರ್ಷಗಳ ಅವಧಿಯಲ್ಲಿ ಸಂಸ್ಥೆಯು ಕಾರ್ಯಕ್ಷೇತ್ರ ಸಹಸ್ರ ಬಾಹುಗಳಾಗಿ ಬೆಳೆಯ
ಡಗಿತು. ಪವಿತ್ರ ಕಪಿಲಾತೀರದಲ್ಲಿ ನಲೆಸಿದ ಮಹಾನುಭಾವರು ಲಕ್ಷಾವಧಿ
ಕೋಟಿಯ ನಿತ್ಯಾಭ್ಯುದಯಕ್ಕೆ ಕಾರಣರಾಗಿದ್ದಾರೆ. ಪೂಜ್ಯರ ನಂತರ ಶ್ರೀ
ಠದ ಧರ್ಮಸಿಂಹಾಸನವನ್ನು ಪ್ರಖ್ಯಾತರಾದ ಈಶಾನೇಶ್ವರ ಒಡೆಯರೂ ಶ್ರೀ
ಲಿಂಗಶಿವಾಚಾರ್ಯರೂ, ಶ್ರೀ ಸಿದ್ಧನಂಜದೇಶಿಕೇಂದ್ರರೂ, ಶ್ರೀ ಕಪಿನೀ ನಂಜುಂ
ದೇಶಿಕೇಂದ್ರರೂ, ಶ್ರೀ ಚನ್ನವೀರದೇಶಿಕೇಂದ್ರರೂ, ಶ್ರೀ ಸಿದ್ಧಮಲ್ಲ ಶಿವಾಚಾರ್ಯರೂ
ಪರ್ವತೇಂದ್ರಶಿವಾಚಾರ್ಯರು, ಶ್ರೀ ಬಂಡಾರಿಬಸವಪ್ಪ ಒಡೆಯರು, ಕೂಗಲೂರು
ಜುಂಡದೇಶಿಕೇಂದ್ರರು, ಶ್ರೀ ಘನಲಿಂಗದೇವರು, ಶ್ರೀ ಇಮ್ಮಡಿ ಶಿವರಾತ್ರೀಶ್ವರ
ವಾಮಿಗಳು ಶ್ರೀ ಚನ್ನಬಸವದೇಶಿಕೇಂದ್ರರೂ, ಶ್ರೀ ಗುರುನಂಜದೇಶಿಕೇಂದ್ರರು,
ಗುರುಚನ್ನಬಸವಶಿವಾಚಾರ್ಯರು, ಶ್ರೀ ಗುರುಪಂಚಾಕ್ಷರದೇಶಿಕೇಂದ್ರರು, ಶ್ರೀ
ದ್ಬುನಶಿವಾಚಾರ್ಯರು. ಶ್ರೀ ಚನ್ನವೀರದೇಶಿಕೇಂದ್ರರು ಶ್ರೀ ಮಹಂತದೇಶಿ
ಕೇಂದ್ರರು, ಶ್ರೀ ಸಿದ್ಧಲಿಂಗಶಿವಾಚಾರ್ಯರು, ಶ್ರೀ ಶಿವರಾತ್ರಿದೇಶಿಕೇಂದ್ರರು ಅಲಂಕ
ಸಿ, ಶ್ರೀ ಮಠದ ವೈಭವವನ್ನು ಬೆಳಗಿಸಿ ಅಂತರ್ಮುಖಿಗಳಾಗಿದ್ದಾರೆ.

ಈ ಮಹಾನುಭಾವರ ಆಶೀರ್ವಾದವನ್ನು ಪೂರ್ಣವಿಕಾಸರೂಪಕ್ಕೆ ತಂದವರು
ಗದ್ಗುರು ಶ್ರೀ ಶಿವರಾತ್ರಿಮಹಾಸ್ವಾಮಿಗಳು ಮತ್ತು ಅವರ ಕರಕಮಲ ಸಂಜಾತ
ದ ಜಗದ್ಗುರು ಶ್ರೀ ಶಿವರಾತ್ರಿರಾಜೇಂದ್ರಮಹಾಸ್ವಾಮಿಗಳು ಈ ಪುಣ್ಯಶೀಲರ
ರ್ಯಕ್ಷೇತ್ರವಾದ ಶ್ರೀ ಸುತ್ತೂರು ಗ್ರಾಮವು ಇತಿಹಾಸಪ್ರಸಿದ್ಧವಾದ ಸ್ಥಳವಾಗಿದೆ.

ಶ್ರೀ ಸುತ್ತೂರಿನಐತಿಹ್ಯವನ್ನು ಇಲ್ಲಿನ ಮಠದ ಭವ್ಯತೆಯನ್ನು ಮೈಸೂರು
ರ್ಕಾರ ಪ್ರಾಚ್ಯ ಸಂಶೋಧನ ಶಾಖೆಯವರು 1944ನೇ ಸಂವತ್ಸರದ ವರದಿಯಲ್ಲಿ
ಕ್ಷ್ಮವಾಗಿ ವಿವರಿಸಿರುತ್ತಾರೆ. ವರದಿಯ ಭಾಷಾಂತರವು ಶ್ರೀ ಮಠದ ಇತಿಹಾಸ
ಜ್ಞಾನಾಭಿಲಾಷಿಗಳ ಸಹಾಯಾರ್ಥವಾಗಿ ಇಲ್ಲಿ ಕೊಡಲಾಗಿದೆ.

**ಮೈಸೂರು ಸೀಮೆಯ ಆರ್ಕಿಯಾಲಾಜಿಕಲ್ ಇಲಾಖೆಯು ೧೯೪೪ ನೆಯ ವರದಿ**
**ಯಲ್ಲಿ ಬರೆದಿರುವ ಇಂಗ್ಲೀಷ್ ಬರವಣಿಗೆಯು ಕನ್ನಡ ಭಾಷಾಂತರ**

ಮೈಸೂರು ಜಿಲ್ಲೆ. ಸುತ್ತೂರು (ನಂಜನಗೂಡು ತಾಲ್ಲೂಕು)

ಸುತ್ತೂರು ನಂಜನಗೂಡಿನ ಪೂರ್ವಕ್ಕೆ ಒಂಬತ್ತು ಮೈಲಿ ದೂರದಲ್ಲಿ ಕಪಿನಿ

ನದಿಯ ದಡದಲ್ಲಿರುವ ಒಂದು ಹಳ್ಳಿ. ಇದು ತಗ್ಗಾಗಿರುವ ವಿಶಾಲವಾದ ಛತ್ರ
ಪ್ರದೇಶಗಳ ಮಧ್ಯದಲ್ಲಿದೆ. ಆರ್ಥಿಕಾಭಿವೃದ್ಧಿಗೆ ಅನುಕೂಲವಾದ ಸ್ಥಳ. ನಾರಾಯಣ
ಸ್ವಾಮಿ ದೇವಸ್ಥಾನವು ಈ ಸ್ಥಳದ ಅತ್ಯಂತ ಪ್ರಾಚೀನ ದೇವಸ್ಥಾನ. ಇದು ಚೋಳ
ಕಾಲದಿಂದಲೂ ಹಳೇ ಅಗ್ರಹಾರದ ಒಂದು ಭಾಗವಾಗಿತ್ತೆಂದು ತೋರುತ್ತದೆ.
ಸುತ್ತೂರಮ್ಮ, ಸೋಮೇಶ್ವರ, ವೀರಭದ್ರ, ಜಿನ ದೇವಸ್ಥಾನಗಳು ಈ ಸ್ಥಳದ ಇತರ
ದೇವಸ್ಥಾನಗಳು.

## ನಾರಾಯಣಸ್ವಾಮಿ ದೇವಸ್ಥಾನ

ವರದರಾಜ—ನಾರಾಯಣಸ್ವಾಮಿ ದೇವಸ್ಥಾನದಲ್ಲಿ ವರದರಾಜಸ್ವಾಮಿಯ
ಮೂರ್ತಿ ಇದೆ. ಇದು ಗಂಗರ ಕಾಲಕ್ಕೆ ಸೇರಿದ್ದು ಎಂದು ಕಾಣುತ್ತದೆ. ಹಾಸಿಗ
ಕಲ್ಲಿನಿಂದ ಮಾಡಲ್ಪಟ್ಟ ಈ ಮೂರ್ತಿಯು ನಾಲ್ಕು ಅಡಿ ಎತ್ತರವಾಗಿದೆ. ಮೂರ್ತಿಯು
ಪಂಚಪಾತ್ರೆಯ ಆಕಾರವುಳ್ಳ, ತುದಿಯಲ್ಲಿ ಚಪ್ಪಟೆಯಾಗಿ ಒಮ್ಮುಖವಾಗಿ ಮಾಡ
ಲ್ಪಟ್ಟ ಪಕ್ಕಗಳುಳ್ಳ ಕಿರೀಟವನ್ನು ಧರಿಸಿದೆ. ಅಭಯ, ಚರಕ, ಶಂಖ ಮತ್ತು ದಾನ
ಗಳುಳ್ಳ ಕೈಗಳನ್ನು ಹೊಂದಿದೆ. ದಂಡವು ಬಲಗೈಯ ಹಿಂಭಾಗದಲ್ಲಿದೆ. ಒಂದು
ಕಂಠಾಭರಣವನ್ನೂ ಯಜ್ಞೋಪವೀತವನ್ನೂ ನಡುಪಟ್ಟಿಯನ್ನೂ, ಕಂಕಣಗಳನ್ನೂ
ಧರಿಸಿದೆ. ಒಟ್ಟಿನಲ್ಲಿ ಮೂರ್ತಿಯು ನಿರಾಡಂಬರವಾಗಿದೆ. ಮೂರ್ತಿಯು ವರದರಾಜ
ದೇವರ ಮೂರ್ತಿಯಂತೆ ಕಾಣುತ್ತದೆ. ಮತ್ತು ಹಿನ್ನೆಲೆಯ ಹಾಸುಗಲ್ಲಿದ್ದರೂ
ತೋರಣವಿಲ್ಲದೆ ಇರುವುದರಿಂದ ತಲಕಾಡಿನ ಶ್ರೀನಿವಾಸವಿಗ್ರಹಗಳ ನೆನಪನ್ನು
ತರುತ್ತದೆ.

## ದೇವಸ್ಥಾನದ ವಿವರ

ಶಾಸನದಲ್ಲಿ ನಾಗಕೇಶವವೆಂದು ಕರೆಯಲ್ಪಟ್ಟಿದೆ. ಮತ್ತು ದೇವಸ್ಥಾನವು
ಹೊಯಿಸಳ ನರಸಿಂಹನಿಂದ (ಕ್ರಿ.ಶ. 1169) ಕಟ್ಟಲ್ಪಟ್ಟಿತೆಂದು ಹೇಳಲಾಗಿದೆ. ಈಗ
ಇರುವ ದೇವಸ್ಥಾನವು ಸುಂದರವಾದ ಕಮಲಗಳಿಂದ, ಕತ್ತರಿ ಆಕಾರದ ಮೂಲೆಗಳಿಂದ
ಸೋಪುಕಲ್ಲಿನ ದ್ವಾರ ಮತ್ತು ಗೋಡೆಗಳಿಂದ ಹೊಯಿಸಳರ ಕಾಲದ ಮಾದರಿಯನ್ನು
ಹೊಂದಿದೆ. ನವರಂಗವು ಉಮ್ಮತ್ತೂರು ಕಾಲದಲ್ಲಿ ಪುನರ್ರಚನೆಯಾಗಿರುವಂತೆ
ಕಾಣುತ್ತದೆ. ಮುಂಭಾಗದ ಒಂಬತ್ತು ಕಲ್ಲಿನ ಬಿಲ್ಲೆಗಳಲ್ಲಿ ರಾಜವೈಭವದಿಂದ ಕೂಡಿ
ರುವ ಆನೆಗಳು ಮತ್ತು ನರ್ತಕಿಯರ ಚಿತ್ರಗಳಿವೆ. ಈ ಆಕಾರವು ಸಾಂಪ್ರದಾಯಿಕ
ವಾಗಿ ದಿಕ್ಪಾಲಕರನ್ನು ಕೂಡಿಸಿರುವ ಆಕಾರಕ್ಕೆ ವ್ಯತಿರಿಕ್ತವಾಗಿದ್ದು, ಕುತೂಹಲ
ಜನಕವಾಗಿದೆ. ಬಳಪದ ಕಲ್ಲಿನಿಂದ ರಚಿತವಾದ ಎರಡು ಆವರಣಗಳುಳ್ಳ ಗೋಡೆಯ
ಹೊರಮುಖವು ಸೊಗಸಾಗಿ ಕೆತ್ತಲ್ಪಟ್ಟಿರುವ ಮೇಲ್ಕಟ್ಟುಗಳುಳ್ಳ ಗೂಡುಗಳಿಂದ
ಅಲಂಕೃತವಾಗಿದೆ.

## ಸುತ್ತೂರಮ್ಮನ ದೇವಸ್ಥಾನ ಗಂಗರಕಾಲದ ರಚನೆ

ಸುಮಾರು ಒಂದು ಫರ್ಲಾಂಗು ದೂರದಲ್ಲಿ ಈ ಹಳ್ಳಿಯ ಪೂರ್ವಭಾಗದಲ್ಲಿ ತ್ತದ ಗದ್ದೆಗಳಿಗೂ ಮತ್ತು ಕಾಲುವೆಗೂ ಮಧ್ಯದಲ್ಲಿ ಗಂಗರ ಕಾಲದ ಶಾಸನಸ್ತಂಭ ಳುಳ್ಳ ಒಂದು ಸಣ್ಣ ದೇವಸ್ಥಾನವಿದೆ. ಇದರಲ್ಲಿ ಒಂಭತ್ತು ಸಪ್ತಮಾತೃಕೆ ಮೂರ್ತಿ ಳಿವೆ. ಪ್ರತಿಯೊಂದೂ ಎರಡೂವರೆ ಅಡಿ ಎತ್ತರವಾಗಿದ್ದು ಪ್ರತ್ಯೇಕವಾಗಿವೆ. ಅಷ್ಟ ೋಣದ ಸ್ತಂಭಗಳ ನವರಂಗದಲ್ಲಿ ಒಂದು ಗಣೇಶ ವಿಗ್ರಹವಿದೆ. ಇದನ್ನು ಗರ್ಭ ೃಹದ ಉತ್ತರದಿಕ್ಕಿನ ಕೊನೆಯಲ್ಲಿ ಎರಡನೆಯ ಸಣ್ಣವಿಗ್ರಹದ ಪ್ರತಿಯಾಗಿ ಸ್ಥಾಪಿ ಬೇಕಾಗಿತ್ತು. ದೇವಸ್ಥಾನದ ಅತಿ ಸಮೀಪದಲ್ಲಿ ಅನೇಕ ವೀರಗಲ್ಲುಗಳಿವೆ.

ದೇವಸ್ಥಾನದ ಸಮೀಪದಲ್ಲಿ ಆಸಕ್ತಿಕೆರಳಿಸುವ ಭೈರವ ವಿಗ್ರಹವಿದೆ. ಇದರ ಲಪಾರ್ಶ್ವದಲ್ಲಿ ಒಂದು ನಾಯಿಯೋ ಅಥವಾ ಸಿಂಹವೊ ಇದೆ. ಎಡಪಾರ್ಶ್ವದಲ್ಲಿ ವರಂತೆಯೇ ಇರುವ ಮೊಟಕಾದ ಕತ್ತುಳ್ಳ ಪ್ರಾಣಿಯೊಂದಿದೆ.

## ಸೋಮೇಶ್ವರ ದೇವಸ್ಥಾನ ಸಾಮಾನ್ಯ ವಿವರಣೆ

ಮ|| ರಾ|| ಶ್ರೀ ಆರ್. ನರಸಿಂಹಾಚಾರ್ಯರ 1918ನೇ ಇಸವಿಯ 'ಪುರಾತನ ಂಶೋಧನೆ ವರದಿಯಲ್ಲಿ ಸೋಮೇಶ್ವರ ದೇವಸ್ಥಾನವು ಸೂಕ್ಷ್ಮವಾಗಿ ವರ್ಣಿಸಲ್ಪ ್ಟಿದೆ. ಇದು ಪೂರ್ವಾಭಿಮುಖವುಳ್ಳ ಹೊಯ್ಸಳ ತ್ರಿಕೂಟಾಚಲವಾಗಿದೆ. ಕಟ್ಟಡದ ುಖ್ಯ ಭಾಗವು ಕಲ್ಲಿನಿಂದ ಮಾಡಲ್ಪಟ್ಟು ಬಳಪದ ಕಲ್ಲಿನ ಚಿತ್ರಗಳನ್ನೂ ವಿಗ್ರಹ ಗಳನ್ನೂ ಒಳಗೊಂಡಿದೆ. ಹದಿನೈದು ವರ್ಷಗಳ ಹಿಂದೆ ದೇವಸ್ಥಾನವು ಪುನಃ ಕಟ ್ಪಟ್ಟಿತು. ಹಿಂದಣ ಗುರುತುಗಳು ಅಲ್ಲಿ ಇಲ್ಲಿ ಹಾಗೆಯೇ ಉಳಿಸಲ್ಪಟ್ಟಿವೆ.

## ಚೋಳಲಿಂಗ

ಪಶ್ಚಿಮದ ಕೋಣೆಯಲ್ಲಿ ಮಧ್ಯಮಗಾತ್ರದ ಸೋಮೇಶ್ವರ ಲಿಂಗವಿದೆ. ಲಿಂಗವು ಚೋಳರ ಕಾಲಕ್ಕೆ ಸೇರಿದ್ದು. ಆದರೆ ಹೊಯ್ಸಳರಿಂದ ಹೊಸದಾಗಿ ಕಟ್ಟಲ್ಪಟ್ಟ ದೇವ ್ಥಾನಗಳಲ್ಲಿ ಸ್ಥಾಪಿಸಲ್ಪಟ್ಟಿದ್ದು ಗರ್ಭಗೃಹ ಮತ್ತು ಸುಖನಾಸಿಯಲ್ಲಿ ಸುಂದರವಾದ ಕಮಲಗಳು ಕೆತ್ತಲ್ಪಟ್ಟಿವೆ.

## ಶಂಕರನಾರಾಯಣ

ದಕ್ಷಿಣದ ಕೋಣೆಯಲ್ಲಿ ಸುಂದರವಾದ ಶಂಕರನಾರಾಯಣ ವಿಗ್ರಹವಿದೆ. ಇದು ಹೊಯ್ಸಳರ ಕಾಲದ ಶಿಲ್ಪಕಲೆಯಾಗಿದೆ. ಇದು ಐದು ಅಡಿ ಎತ್ತರವಾಗಿದೆ. ಅದೇ ಕಲ್ಲಿನಲ್ಲಿ ಕೆತ್ತಲ್ಪಟ್ಟಿರುವ ಒಂದು ತೋರಣವನ್ನು ಒಳಗೊಂಡಿದೆ. ಇದು ಬಲಭಾಗದಲ್ಲಿ

ಶಿವನಾಕೃತಿಯಾಗಿ ಜಟಾಮುಕುಟವನ್ನೂ, ತ್ರಿಶೂಲವನ್ನೂ, ಅಕ್ಷಮಾಲೆಯನ್ನೂ ಮತ್ತು ಎಡಭಾಗದಲ್ಲಿ ವಿಷ್ಣು ಆಕೃತಿಯಾಗಿ ಕಿರೀಟಮುಕುಟವನ್ನೂ ಚಕ್ರ ಮತ್ತು ಶಂಖವನ್ನೂ ಉಳ್ಳದ್ದಾಗಿದೆ. ವೃಷಭ ಮತ್ತು ಗರುಡ ಎರಡೂ ಇರುವ ಗದ್ದಿಗೆಯ ಒಂದು ಕಲ್ಲು ಇದರ ಕೆಳಭಾಗದಲ್ಲಿದೆ.

ಉತ್ತರಭಾಗದ ಕೋಣೆಯಲ್ಲಿ ವೀರಭದ್ರ ಮತ್ತು ಗಣಪತಿ ಇಲ್ಲದೆ ಇರುವ ಸುಂದರವಾದ ಸಪ್ತಮಾತೃಕೆಗಳಿವೆ. ಅವುಗಳ ಪಶ್ಚಿಮದಲ್ಲಿ ಹೊಯ್ಸಳರ ಶಿಲ್ಪಕಲೆಯ ಚಾಮುಂಡಿ ವಿಗ್ರಹವಿದೆ.

ನವರಂಗ ಸ್ತಂಭಗಳು ಗ್ರೇನೈಟಿನಿಂದ ಮಾಡಲ್ಪಟ್ಟ ಮತ್ತು ನಯವಿಲ್ಲ ದುಂಡಾದ ಘಂಟಾಕೃತಿಯುಳ್ಳವುಗಳಾಗಿವೆ.

## ನವರಂಗಮಂಟಪ

ಸೋಮೇಶ್ವರಸ್ವಾಮಿಯ ನವರಂಗದ ದ್ವಾರದಲ್ಲಿ ಒಂದೇ ಕಲ್ಲಿನಲ್ಲಿ ಮಧ್ಯ ಶಿವನಿರುವ ತ್ರಿಮೂರ್ತಿಗಳಿವೆ. ದೇವಸ್ಥಾನದ ಮುಂಭಾಗದಲ್ಲಿ ಕಲಶಾಕೃತಿಯ ಸ್ತಂಭಗಳಿಂದ ಕೂಡಿದ ಒಂದು ಸಣ್ಣ ಮಂಟಪವಿದೆ. ಇದು ಹೊಯ್ಸಳರ ಕಾಲದ್ದು ಇದರ ನಂದಿಯು ಉಮ್ಮತ್ತೂರು ಕಾಲದಲ್ಲಿ ಒಂದು ಸಣ್ಣ ಗದ್ದುಗೆಗೆ ಸಾಗಿಸಲ್ಪಟ್ಟಿತು ಈ ಗದ್ದುಗೆಯ ಸ್ತಂಭಗಳ ಮೇಲೆ ಧರ್ಮಸೂಚಕ ಉಡುಪನ್ನು ಧರಿಸಿರುವ ಪೂಜಾ ಸಕ್ತಿಯುಳ್ಳ ಒಬ್ಬ ತಂದೆ ಮತ್ತು ಅವನ ಮಗ ಇವರಿಬ್ಬರಿರುವ ಚಿತ್ರಗಳಿವೆ.

## ಗೋಪುರ

ದೇವಸ್ಥಾನದ ಮೂಲಗೋಪುರವನ್ನು ಮಠದಲ್ಲಿರುವ ಪ್ರೋಟೋದಿಂದ ಕಾಣ ಬಹುದಾಗಿದೆ. ಇದರ ಶಿಖರವು ಹೊಯ್ಸಳರ ಕಲೆಯ ಮಾದರಿಯನ್ನು ಹೊಂ ಬಳಪದ ಕಲ್ಲಿನ ಅನೇಕ ಚಿತ್ರಗಳನ್ನು ಹೊಂದಿದೆ. ಅಪರಿಷ್ಕೃತವಾಗಿಯೂ, ಮತ್ತು ಪೂರ್ಣಾವಸ್ಥೆಯನ್ನು ಪಡೆಯದೆಯೂ ಇದ್ದರೂ, ಆ ಚಿತ್ರಗಳು ಯಕ್ಷ ಮತ್ತು ನರ್ತ ಕಿಯರ ಆಕಾರಗಳನ್ನು ಪ್ರಭಾವಳಿಯ ಕೆಳಭಾಗದಲ್ಲಿ ಹೊಂದಿ ಅಂದವಾಗಿವೆ.

ಕಾಂಪೌಂಡು ಗೋಡೆಯ ಮೇಲೆ ಹಳೆಯ ಶಿಲಾಕೃತಿಗಳು ಚಿತ್ರಿಸಲ್ಪಟ್ಟವೆ ಮತ್ತು ರಕ್ಷಿಸಲ್ಪಟ್ಟವೆ. ದಕ್ಷಿಣಭಾಗದಲ್ಲಿ ಎಡದಿಂದ ಬಲಕ್ಕೆ ಇರುವ ಪ್ರತಿಮೆಗಳ ಮುಖ್ಯವಾದವುಗಳು. ಹಳೆಯ ವಿಗ್ರಹಗಳು.

ಮಂಡಿಸಿರುವ ಬ್ರಹ್ಮ, ಜಲಂಧರ ಹರಿಯರೂಪದಲ್ಲಿ ನರ್ತಿಸುತ್ತಿರುವ ಶಿವ ಸುಂದರವಾದ ಯಕ್ಷ ಮತ್ತು ಯಕ್ಷಿಕೆಯರು ಮತ್ತು ಕಿನ್ನರು. ನೈರುತ್ಯಮೂಲೆಯ

ಸೊಗಸಾದ ಬಳಪದಕಲ್ಲಿನ ಗುಡಿಯಲ್ಲಿ ಒಂದು ಸಣ್ಣ ಲಿಂಗವಿದೆ. ಇದನ್ನು ಮೂಲ ಸ್ಥಾನೇಶ್ವರ ಎಂದು ಕರೆಯುತ್ತಾರೆ. ಶಾಸನಗಳಿಂದ ತಿಳಿದುಬರುವಂತೆ ಇದು ಚೋಳರ ಕಾಲದ್ದು.

ವಾಯುವ್ಯಮೂಲೆಯಲ್ಲಿ ನರ್ತನಮಾಡುವ ಕಾಳಿಯ ಪ್ರತಿಮೆಯಿದೆ. ಪದ್ಮ, ಕಲಶ, ಡಮರುಗಳಿಂದ ಕೂಡಿರುವ ನೀಳವಾಗಿ ಚಾಚಿರುವ ನಾಲ್ಕು ಕೈಗಳಿವೆ.

## ಭೈರವ; ನೃತ್ಯಭಂಗಿಯಲ್ಲಿರುವ ಶಿವ

ಅಲಂಕಾರಿಕವಾದ ಹಳೆಯ ಸಾಮಗ್ರಿಗಳಿಂದ ಮಾಡಲ್ಪಟ್ಟ ಮೂಲಸ್ಥಾನೇಶ್ವರ ಲಿಂಗದ ಗುಡಿಯು ಸೋಮೇಶ್ವರ ದೇವಸ್ಥಾನದ ಬಲಪಾರ್ಶ್ವದಲ್ಲಿದೆ.

## ವೀರಭದ್ರ ದೇವಸ್ಥಾನ

ಸೋಮೇಶ್ವರ ದೇವಸ್ಥಾನದ ಬಲಭಾಗಕ್ಕೆ ಕೆಲವು ಗಜಗಳ ದೂರದಲ್ಲಿ ಹೊಯ್ಸಳರ ಕಾಲದ ಕೃತಿಯಾದ ವೀರಭದ್ರಸ್ವಾಮಿಯ ಗುಡಿಯಿದೆ. ಇದರಲ್ಲಿದ್ದ ಸೊಗಸಾದ ವೀರಭದ್ರವಿಗ್ರಹವು ಉತ್ತರ ಭಾಗದಲ್ಲಿರುವ ಸೋಮೇಶ್ವರ ದೇವಸ್ಥಾನದಿಂದ ಪ್ರತ್ಯೇಕಿಸಲ್ಪಟ್ಟಿದೆ. ಗುಡಿಯ ದ್ವಾರವನ್ನು ನೋಡಿದರೆ ಚೋಳರ ಕಾಲದ್ದೆಂದು ಕಾಣುತ್ತದೆ. ಹೊರಭಾಗದಲ್ಲಿರುವ ಸಣ್ಣ ಗುಡಿಯಲ್ಲಿ ಪಾರ್ವತಿಯ ವಿಗ್ರಹವಿದೆ. ಇದು ಮೊದಲು ಕಾಂಪೌಂಡಿನ ಒಳಭಾಗದಲ್ಲಿತ್ತೆಂದು ವ್ಯಕ್ತವಾಗುತ್ತದೆ.

## ಶ್ರೀ ವೀರಸಿಂಹಾಸನ ಮಠ

"ವೀರಸಿಂಹಾಸನ ಮಠ" ಅಥವಾ "ಶಿವರಾತ್ರಿ ಸ್ವಾಮಿಗಳ ಮಠ" ಎಂದು ಪ್ರಸಿದ್ಧವಾಗಿರುವ ವೀರಶೈವರ ಮಠವು ಸುತ್ತೂರಿನಲ್ಲಿ ಬಹು ಪ್ರಾಮುಖ್ಯವಾದದ್ದು. ಇದರ ಹಿಂದಣ ಕಾಲದ ಸಂಪ್ರದಾಯಗಳನ್ನು ವಿವರಿಸುವ ಕಾವ್ಯವನ್ನು ಮಾ॥ರಾ॥ ಶ್ರೀ ಸಂಗಪ್ಪನವರು 1933 ರಲ್ಲಿ ರಚಿಸಿದರು. ದುರದೃಷ್ಟದಿಂದ ಈ ಕಾವ್ಯದಲ್ಲಿ ನಿರೂಪಿಸಿರುವ ವಿವರಗಳನ್ನು ದೃಢಪಡಿಸುವ ದಾಖಲೆಗಳಲ್ಲಿ ಬಹುಭಾಗಗಳು ನಷ್ಟವಾಗಿ, ಮಠದ ಚರಿತ್ರೆಯನ್ನು ಸುಲಭವಾಗಿ ಸಾಧಿಸಲು ಸಾಧ್ಯವಿಲ್ಲದೆ ಹೋಗಿದೆ. ಆದಾಗ್ಯೂ ಈಗ ಇರುವ ಶಾಸನಗಳಿಂದ ಮತ್ತು ಸಾಹಿತ್ಯನಿದರ್ಶನಗಳಿಂದ, ಮಠವು ಸುಮಾರು ಕ್ರಿ.ಶ. 1500ರಲ್ಲಿ ಉನ್ನತಸ್ಥಿತಿಯಲ್ಲಿತ್ತೆಂದು ತಿಳಿದುಬರುತ್ತದೆ. ಆದಕಾರಣ ಈ ಮಠವು ಒಂದು ಪುರಾತನ ಸಂಸ್ಥೆಯಾಗಿದೆ. ಈ ಮಠಕ್ಕೆ ಸುಮಾರು 40 ಅಧೀನ ಮಠಗಳಿವೆ ಎಂದು ಹೇಳಲಾಗಿದೆ. ಸೋಮೇಶ್ವರ, ಮೂಲಸ್ಥಾನೇಶ್ವರ ಮತ್ತು ವೀರಭದ್ರನ ಗುಡಿಗಳನ್ನು ಬಿಟ್ಟರೆ, ಉಳಿದ ಎಲ್ಲಾ ಕಟ್ಟಡಗಳೂ ಆಧುನಿಕವಾಗಿವೆ. ಈ ಮಠದ ಹಿಂದಣ ಸ್ವಾಮಿಗಳು ವಿದ್ಯಾಪ್ರೌಢಿಮೆಯಲ್ಲಿ ಪ್ರಸಿದ್ಧಿಪಡೆದು ವೀರಶೈವ

ಸಾಹಿತ್ಯಕ್ಕೆ ಉಪಯುಕ್ತವಾದ ಸೇವೆಯನ್ನು ಸಲ್ಲಿಸಿದ್ದಾರೆ. ಈಗ ಇರುವ ಹಿರಿಯ ಸ್ವಾಮಿಗಳು ಈ ಮಠದ 22ನೆಯ ಸ್ವಾಮಿಗಳೆಂದು ಹೇಳಲಾಗಿದೆ. ಶ್ರೀ ಶಿವರಾತ್ರಿ ಸ್ವಾಮಿಗಳವರೆಂಬುದು ಇವರ ಹೆಸರು. ಇವರಿಗೆ ಮೈಸೂರು ಜಿಲ್ಲೆ ಮತ್ತು ಇತರ ಕಡೆಗಳಲ್ಲಿ ಬಹು ಸಂಖ್ಯಾತ ವೀರಶೈವ ಶಿಷ್ಯಮಂಡಲಿಯಿದೆ. ಈ ಸ್ವಾಮಿಗಳವರು ತಮ್ಮ ದಾನ ಧರ್ಮ ಪರೋಪಕಾರಗಳಿಂದಲೂ ಮತ್ತು ವಿದ್ಯಾಪ್ರಚಾರಕ್ಕೆ ತೋರುತ್ತಿರುವ ಆಸಕ್ತಿಯಿಂದಲೂ ಮತ್ತು ವಿದ್ಯಾಭ್ಯಾಸದಲ್ಲಿ ನಿರತರಾಗಿರುವವರಿಗೆ ನೀಡುತ್ತಿರುವ ಅಪಾರವಾದ ಸಹಾಯದಿಂದಲೂ, ತುಂಬಾ ಪ್ರಜಾನುರಾಗಿಗಳಾಗಿ ಕೀರ್ತಿವಂತರಾಗಿದ್ದಾರೆ. ಈ ಮಠದ ಆಶ್ರಯದಲ್ಲಿ ನಡೆಯುತ್ತಿರುವ ಸಂಸ್ಕೃತ ಪಾಠಶಾಲೆಗಳು, ವಿದ್ಯಾರ್ಥಿನಿಲಯಗಳು ಮೈಸೂರಿನಲ್ಲಿಯೂ, ನಂಜನಗೂಡಿನಲ್ಲಿಯೂ ಮತ್ತು ಇತರ ಕಡೆಗಳಲ್ಲಿಯೂ ನಡೆದುಬರುತ್ತಿವೆ. ಈ ರೀತಿಯಾಗಿ ಈ ಮಠವು ಪುರಾತನ ಕಾಲದಿಂದಲೂ ಪ್ರಸಿದ್ಧಿಯಾದ ತನ್ನ ಕೀರ್ತಿಯನ್ನು ಯೋಗ್ಯರೀತಿಯಲ್ಲಿ ಹಿಡಿದಿದೆ."

(ಮೈಸೂರು ಶಾಸನ ಇಲಾಖೆಯ ಡೈರೆಕ್ಟರವರಾದ ಶ್ರೀ ಆರ್. ನರಸಿಂಹಾಚಾರ್ಯರವರ 1918ನೆಯ ಇಸವಿಯ ವರದಿಯ ಕನ್ನಡ ಭಾಷಾಂತರ)

## ಸುತ್ತೂರು

ಇದು ನಂಜನಗೂಡು ತಾಲ್ಲೂಕಿನ ಒಂದು ಹಳ್ಳಿ. ಜನಸಂಖ್ಯೆ 1658. ಕ್ರಿ. ಶ. 1032 ಚೋಳರ ಒಂದು ಶಾಸನದಲ್ಲಿ ಈ ಗ್ರಾಮವು ಶ್ರೋತ್ರಿಯೂರು ಎಂಬುದಾಗಿಯೂ ಕ್ರಿ. ಶ. 1169ರಲ್ಲಿ ಹೊಯಿಸಳರ ದೊರೆಯಾದ ಮೊದಲನೆ ನರಸಿಂಹನ ಪ್ರಧಾನಿಯಾದ ಲಕಮಯ್ಯನ ಮುಖ್ಯಸ್ಥಳವಾಗಿತ್ತು. ಹೊಯಿಸಳರ ಕಾಲದಲ್ಲಿ ಪೂರ್ವಮುಖವಾಗಿ ಕಟ್ಟಿದ ಸೋಮೇಶ್ವರ ದೇವಸ್ಥಾನವು ಮೂರು ಗುಡಿಗಳಿಂದ ಕೂಡಿದ್ದಾಗಿದೆಯಲ್ಲದೆ ಮಧ್ಯದಲ್ಲಿ ಒಂದು ಅಂಗಳವೂ ಮುಂದುಗಡೆ ಒಂದು ಅಂಗಳವೂ ಸಹಾ ಇದೆ. ಹೊಸದಾಗಿ ಸೇರಿಸಿದ ಹಾಗೆ ಕಾಣುವ ಕೊನೆಯ ಭಾಗವೂ 1264 ರಲ್ಲಿ ಕಟ್ಟಲ್ಪಟ್ಟಿತು. ಇತರ ಭಾಗಗಳು ಬಹಳ ಹಳೆಯವು. ಈ ಸ್ಥಳದಲ್ಲಿ ಬಳಪದ ಕಲ್ಲಿನಿಂದ ಕೆತ್ತಲ್ಪಟ್ಟ ಗೋಪುರದಿಂದ ಕೂಡಿದ ಸೋಮೇಶ್ವರ ದೇವಸ್ಥಾನವು ಹೊಯಿಸಳರ ದೇವಸ್ಥಾನಗಳಲ್ಲಿ ಅಪರೂಪವಾದದ್ದಾಗಿದೆ. ಗರ್ಭಗುಡಿಯಲ್ಲಿ ಒಂದು ಲಿಂಗವಿದೆ. ದಕ್ಷಿಣದ ಗುಡಿಯಲ್ಲಿ ಒಂದು ಸುಂದರವಾದ ಹರಿಹರ ವಿಗ್ರಹವಿದೆ. ಉತ್ತರದ ಗುಡಿಯು ಖಾಲಿ. ಸುಂದರವಾದ ಹರಿಹರ ವಿಗ್ರಹವು ಐದು ಅಡಿ ಎತ್ತರವಾಗಿಯೂ, ನಾಲ್ಕು ಕೈಗಳಿಂದ ಕೂಡಿದ್ದಾಗಿಯೂ ಇದೆ. ಬಲಗಡೆ ಮೇಲಿನ ಕೈಯಲ್ಲಿ ಒಂದು ತ್ರಿಶೂಲವೂ ಎಡಗಡೆ ಮೇಲಿನ ಕೈಯಲ್ಲಿ ಒಂದು ಚಕ್ರವೂ ಎಡಗಡೆ ಕೆಳ ಕೈಯಲ್ಲಿ ಶಂಖವೂ ಬಲಗಡೆ ಕೆಳಗೈಯ ಅಭಯ ಹಸ್ತದಲ್ಲಿ ಒಂದು ರುದ್ರಾಕ್ಷಿಮಾಲಿಕೆಯೂ ಇವೆ. ಈ ಪ್ರತಿಮೆಯಲ್ಲಿ ಪಾರ್ವತಿ ಮತ್ತು ಲಕ್ಷ್ಮಿ ವಿಗ್ರಹಗಳಿವೆ. ಪೀಠದ ಕಲ್ಲಿ

ನಲ್ಲಿ ನಂದಿ ಮತ್ತು ಗರುಡನೂ ಸಹಾ ಇವೆ. ನವರಂಗದ ಕಂಬಗಳು ಕಲ್ಲಿನಿಂದಮಾಡಲ್ಪಟ್ಟಿದ್ದರೂ ಬಹಳ ಚನ್ನಾಗಿ ಕೆತ್ತಿವೆ, ನವರಂಗದ ಎಡಭಾಗದಲ್ಲಿ ಎರಡು ಮುಂಗುಸಿಯಮೇಲೆ ನಿಂತಿರುವ ಮೂರುವರೆ ಅಡಿ ಎತ್ತರವುಳ್ಳ ದೇವತೆಯ ಮೇಲ್ಗೈಗಳಲ್ಲಿ ಒಂದು ಚಕ್ರ ಮತ್ತು ಒಂದು ಶಂಖವೂ ಎಡಗಡೆ ಕೆಳಗೈಯಲ್ಲಿ ಒಂದು ಹಣ್ಣು ಬಲಗಡೆ ಕೆಳಗೈಯ ಅಭಯ ಹಸ್ತದಲ್ಲಿ ಒಂದು ರುದ್ರಾಕ್ಷಿಮಾಲಿಕೆ ಇದೆ. ಮುಖ್ಯ ಗುಡಿಯ ಹೊರಗಿನ ಗೋಡೆಗಳಲ್ಲಿ ಯಾವ ವಿಗ್ರಹವೂ ಸಹಾ ಇಲ್ಲ. ಆದರೆ ಕಲ್ಲು ಚಪ್ಪಡಿಗಳನ್ನು ಜೋಡಿಸಿದೆ ಈ ದೇವಸ್ಥಾನವು ಶಿಥಿಲವಾಗುತ್ತಿದೆ.

ನಾರಾಯಣ ದೇವಸ್ಥಾನವೂ ಸಹಾ ಇಟ್ಟಿಗೆಯಿಂದ ಮಾಡಿದ ಗೋಪುರವಿದ್ದು ಹೊಯಿಸಳರ ಕಟ್ಟಡವಾಗಿದೆ. ನವರಂಗವು ಕಲ್ಲಿನಿಂದ ಕಟ್ಟಲ್ಪಟ್ಟಿದೆ. ದೇವರು ಮೂರುವರೆ ಅಡಿ ಎತ್ತರವಾಗಿ ಪ್ರಭಾವಳಿಯಿಲ್ಲದ್ದಾಗಿದೆ ವಿಗ್ರಹದ ಮೇಲುಗಡೆ ಕೈಗಳಲ್ಲಿ ಸ್ವಾಭಾವಿಕವಾದ ಚಕ್ರ ಮತ್ತು ಶಂಖವೂ ಕೆಳಗಡೆಗಳಲ್ಲಿ ಅಭಯವೂ ಮತ್ತು ವರದವೂ ಇವೆ. ಗರ್ಭಗೃಹ ಮತ್ತು ಸುಕುನಾಸಿಗಳ ಭುವನೇಶ್ವರಿಯು ಕಮಲದ ಮೊಗ್ಗುಗಳಿಂದಲೂ ಮತ್ತು ದಳಗಳಿಂದಲೂ ಹೊರಗಿನ ಗೋಡಗಳಲ್ಲಿ ಜೋಡಿಸಲ್ಪಟ್ಟಿರುವ ಕಲ್ಲುಗಳಿಂದಲೂ ಕಟ್ಟಿ ಜೋಡಿಸಿರುವ ಕಲ್ಲುಗಳ ಮಧ್ಯದಲ್ಲಿ ಕಮಲದ ಮಣಿಗಳು ಸಹಾ ಇವೆ. ನಂಜನಗೂಡಿನ 175ನೇ ಶಾಸನದ ರೀತಿ ಈ ದೇವಸ್ಥಾನವು 1169ರಲ್ಲಿ ಹೊಯಿಸಳರ ಮೊದಲನೆ ನರಸಿಂಹನ ಪ್ರಧಾನಿ ಲಕಮಯ್ಯನಿಂದ ಕಟ್ಟಲ್ಪಟ್ಟಿತು. ದೇವರಿಗೆ ನಾಗಕೇಶವ ಎಂಬ ಹೆಸರಿದೆ. ಈ ದೇವಸ್ಥಾನವು ಶಿಥಿಲವಾಗುತ್ತಲಿದೆ. ಈ ಗ್ರಾಮದಲ್ಲಿ ಲಿಂಗಾಯಿತ ಮುಖ್ಯ ಮಠವಿದೆ ಶಾಸನದ ಪ್ರಕಾರ 15ನೇ ಶತಮಾನದ ಹಿಂದಿನಿಂದಲೂ ಈ ಮಠವು ಇಲ್ಲಿ ಇದೆ ಎಂಬುದಾಗಿ ತಿಳಿದುಬರುತ್ತದೆ. ಹಿಂದೆ ಈ ಮಠದ ಸ್ವಾಮಿಗಳವರು ವಿದ್ವಾಂಸರಾಗಿಯೂ ಮತ್ತು ಕೆಲವು ಮುಖ್ಯ ಗ್ರಂಥಗಳಿಂದ ಇವರು ಕವಿಗಳಾಗಿಯೂ ಇದ್ದರೆಂದು ತಿಳಿದುಬರುತ್ತದೆ. ಇವರಲ್ಲಿ ಶಿವರಾತ್ರಿ ಒಡೆಯರು ಎಂಬುವರು ಬಹಳ ಪ್ರಸಿದ್ಧರಾಗಿದ್ದರು. ಇವರ ಗದ್ದುಗೆಯು ಕುಪ್ಪರವಳ್ಳಿಯಿಂದ ಬರುವ ರೋಡಿನಲ್ಲಿ ಎಡಭಾಗದಲ್ಲಿರುವ ಒಂದು ಕಟ್ಟಡದಲ್ಲಿ ಇತರ ಸ್ವಾಮಿಗಳ ಗದ್ದಿಗೆಗಳ ಜೊತೆಗೆ ಇದೆ.

———

# ಜಗದ್ಗುರುಗಳ ಜ್ಞಾನದಾನ

—೦೦—

ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು ತಮ್ಮ ಬಾಲ್ಯದಲ್ಲೇ ಆಶ್ರಮಾಧಿಕಾರವನ್ನು ಸ್ವೀಕರಿಸಿ ಸ್ವಯಂಶಕ್ತಿಯಿಂದ ನಿಷ್ಠಾವಂತ ಕರ್ಮಯೋಗಿಗಳಾಗಿ ಶ್ರೀ ಮಠದ ನೂತನ ಅಧ್ಯಾಯವನ್ನೇರ್ಪಡಿಸಿದರು. ಶ್ರೀಗಳವರು ಜ್ಞಾನಾರ್ಜನೆ ಪಡೆಯುವ ಕಾಲದಲ್ಲಿ ವೈದಿಕಾದಿ ಸಂಸ್ಕೃತಾಭ್ಯಾಸದ ಅವಕಾಶದೊರೆಯುವಂತಿರಲಿಲ್ಲ ತಪೋಧನರಾದ ಕಾರ್ಯದ ಶ್ರೀ ಪ್ರಭುಸ್ವಾಮಿಗಳವರಲ್ಲಿ ಅತ್ಯಾಸಕ್ತಿಯಿಂದ ಧಾರ್ಮಿಕ ಶಿಕ್ಷಣವನ್ನು ಪಡೆದರು. ಮಠಾಧಿಪತಿಗಳಾದವರಿಗೆ ವೈದಿಕ ಶಿಕ್ಷಣಕೊಡಬೇಕೆಂಬುದು ಸಂಸ್ಕೃತಜ್ಞಾನವು ಲಭಿಸುವಂತೆ ಮಾಡಬೇಕೆಂದೂ, ಶ್ರೀಗಳವರಿಗೆ ಬಾಲ್ಯದಲ್ಲಿಯೇ ಛಲ ಹುಟ್ಟಿತು. ಅದಕ್ಕೆ ಅಪಾರ ಧನಬಲ ಬೇಕು, ಲಕ್ಷಾಂತರ ಶಿಷ್ಯರುಳ್ಳವರಿಗೆ ಧನದಬಲಕ್ಕಿಂತಲೂ, ಶಿಕ್ಷಕರು ದೊರೆಯುವುದು ಅದನ್ನು ವ್ಯವಸ್ಥೆಗೊಳಿಸುವವರು ಸಿಕ್ಕುವುದು ಕಠಿಣವಾಗಿತ್ತು. ಆ ಸಮಯದಲ್ಲಿ ಅತಿ ಪ್ರಯಾಸಪಟ್ಟು ದನಸಹಾಯ ನೀಡುವ ಶಿಷ್ಯರನ್ನು ಪಡೆದರು.

ಶ್ರೀಗಳವರ ಹಲವಾರುದಿನಗಳ ಬೋಧೆ ಮತ್ತು ಅವರ ಪ್ರಭಾವಕ್ಕೆ ಒಳಗಾಗಿ ಪಾಂಡವಪುರದತಾಲ್ಲೂಕು ಕ್ಯಾತನಹಳ್ಳಿ ಸಾಹುಕಾರ್ ಸಿದ್ದಲಿಂಗಯ್ಯನವರು ಸಂಸ್ಕೃತ ಮತ್ತು ವೇದಪಾಠಶಾಲೆಯ ನೆರವು ನೀಡಲು ಮುಂದೆಬಂದರು ಅದರ ಫಲವಾಗಿ ಶ್ರೀ ಸಿದ್ದಲಿಂಗಯ್ಯನವರಿಂದ ಐವತ್ತುಸಹಸ್ರ ರೂಪಾಯಿಗಳ ಉದಾರ ಕಾಣಿಕೆಯನ್ನು ಸ್ವೀಕರಿಸಿ 1933ರಲ್ಲಿ ಮೈಸೂರಿನಲ್ಲಿ ಸಂಸ್ಕೃತ ಮತ್ತು ವೇದಪಾಠಶಾಲೆಯನ್ನು ಪ್ರಾರಂಭಿಸಿದರು. ಈ ಸಂಸ್ಥೆ ಕೇವಲ 20 ಮಂದಿಗೆ ಅಶನ ವಸತಿ, ವಿದ್ಯಾ ಸೌಕರ್ಯಗಳನ್ನು ಏರ್ಪಡಿಸಲು ಸಂಕಲ್ಪಿಸಿತ್ತು. ಆ ಸಮಯದಲ್ಲಿ ಜಗದ್ಗುರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರ, ಕರಕಮಲ ಸಂಜಾತರಾದ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ತಮ್ಮ ಅಭ್ಯಾಸವನ್ನು ಪ್ರಾರಂಭಿಸಿ, ಈ ಸಂಸ್ಥೆಯು ಬೆಳೆಯಲು ಕಾರಣರಾದರು. ಇಂದು ಈ ಸಂಸ್ಥೆಯಲ್ಲಿ, ಸಂಸ್ಕೃತದಲ್ಲಿ ಸಾಹಿತ್ಯದವರೆಗೂ, ವೇದ, ಜ್ಯೋತಿಷ್ಯ ಮತ್ತು ಯೋಗಾಸನಗಳಲ್ಲಿ ಶಿಕ್ಷಣ ಕೊಡುವ ಮಹಾ ಸಂಸ್ಥೆಯಾಗಿ ಬೆಳೆಯಿತು. ಸುಮಾರು 250 ಮಂದಿ ವಿದ್ಯಾರ್ಥಿಗಳು ಉಚಿತ ಅಶನ ವಸತಿ, ಸೌಕರ್ಯಗಳನ್ನು ಪಡೆದು, ಸಂಸ್ಕೃತಾಭ್ಯಾಸ ಮಾಡುತ್ತಿದ್ದಾರೆ. ಅನೇಕರು ಸಂಸ್ಕೃತದಲ್ಲಿ ಪದವಿಯನ್ನು ಪಡೆದು ಉನ್ನತಸ್ಥಾನಗಳಲ್ಲಿ ಕೆಲಸಮಾಡುತ್ತಿದ್ದಾರೆ ಈ ಸಂಸ್ಥೆ ಜಗದ್ಗುರುಗಳವರಲ್ಲಿರುವ ಧಾರ್ಮಿಕ ಶಿಕ್ಷಣದ ಅಭಿಮಾನಕ್ಕೆ ಸಂಕೇತವೆನಿಸಿದೆ.

————

ಸುತ್ತೂರು ವೀರಸಿಂಹಾಸನ ಮಠಕ್ಕೆ ರಾಜ್ಯಪಾಲರು ಆಗಮಿಸುತ್ತಿರುವುದು

ವಿದೇಶಕ್ಕೆ ತೆರಳುವ ಮುನ್ನ ರಾಜ್ಯಪಾಲರು ಜಗದ್ಗುರುಗಳವರಿಂದ
ಆಶೀರ್ವಾದ ಪಡೆಯುತ್ತಿರುವುದು.

# ಜಗದ್ಗುರು ಶ್ರೀ ಶಿವರಾತ್ರೀಶ್ವರ ವಿದ್ಯಾರ್ಥಿನಿಲಯಗಳು

## ಸುತ್ತೂರು ಶ್ರೀ ಶಿವರಾತ್ರೀಶ್ವರ ವಿದ್ಯಾರ್ಥಿನಿಲಯ ಮೈಸೂರು

ವೈದಿಕ ವಿದ್ಯೆಗೆ ಅವಕಾಶವಿತ್ತ ಶ್ರೀ ಮಠವು ಲೌಕಿಕ ವಿದ್ಯೆಯನ್ನು ಕಡೆಗಣಿಸಲಿಲ್ಲ. ಶ್ರೀಮಠದ ಕರುಣೆ ಲೌಕಿಕ ವಿದ್ಯಾಭ್ಯಾಸದ ಕಡೆಗೂ ಹರಿದು 1940 ರಲ್ಲಿ ಕಾಲೇಜು ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿನಿಲಯವೊಂದು ಸ್ಥಾಪಿತವಾಯಿತು. ಕೇವಲ 15 ಮಂದಿ ವಿದ್ಯಾರ್ಥಿಗಳಿಗಾಗಿ ಪ್ರಾರಂಭವಾದ ಸಂಸ್ಥೆ ಬೃಹದ್ ರೂಪವಾಗಿ ಇಂದು ಬೆಳೆದಿದೆ. ಬಾಡಿಗೆ ಮನೆಯಲ್ಲಿ ಪ್ರಾರಂಭವಾದ ಸಂಸ್ಥೆ ಜಗದ್ಗುರುಗಳವರ ಕೃಪೆಯಿಂದ ಒಂದೂವರೆಲಕ್ಷ ರೂ. ಬೆಲೆಬಾಳುವ ಭವ್ಯವಾದ ಸ್ವಂತ ಭವನವನ್ನು ಪಡೆಯುವಂತಾಯಿತು. ಒಂದು ಲಕ್ಷ ರೂ. ಬೆಲೆಬಾಳುವ ಸ್ವತ್ತನ್ನು 20000/– ಎಂಡೋಮೆಂಟ್ ಫಂಡ್, ಜಗದ್ಗುರುಗಳವರು ಈ ಸಂಸ್ಥೆಯು ಶಾಶ್ವತವಾಗಿ ನಡೆಯಬೇಕೆಂದು ಅಭಿಮಾನದಿಂದ ಕರುಣಿಸಿದ್ದಾರೆ. ಅದರ ಫಲವಾಗಿ ಈ ಸಂಸ್ಥೆಯಲ್ಲಿ ಇಂದು ಯಾವ ಜಾತಿ ಮತ ಭೇದವಿಲ್ಲದೆ ವೈದ್ಯಶಾಸ್ತ್ರ, ತಾಂತ್ರಿಕಶಾಸ್ತ್ರ, ನ್ಯಾಯಶಾಸ್ತ್ರ, ಸಮಾಜಶಾಸ್ತ್ರ ಇತ್ಯಾದಿ ನಾನಾ ಕ್ಷೇತ್ರದಲ್ಲಿ ಅಭ್ಯಾಸಮಾಡುವ ಸುಮಾರು 544 ಜನರು ಉಚಿತ ಅಶನ ವಸತಿ ಸೌಕರ್ಯವನ್ನು ಪಡೆಯುತ್ತಿದ್ದಾರೆ. ಒಂದು ವರ್ಷದಲ್ಲಿ ಈ ಸಂಸ್ಥೆಯ ಖರ್ಚು ಸುಮಾರು 117000 ರೂ. ಗಳಾಗುತ್ತದೆ. ಈ ಸಂಸ್ಥೆ ಇದುವರೆಗೆ ಸುಮಾರು 3 ಸಾವಿರ ಮಂದಿಗೆ ಆಶ್ರಯನೀಡಿದೆ.

## ಪ್ರಸಾದ ನಿಲಯ ಮೈಸೂರು

1957ನೇ ಇಸ್ವಿಯಲ್ಲಿ ಈ ವಿದ್ಯಾರ್ಥಿನಿಲಯವು ತೆರೆಯಲ್ಪಟ್ಟಿತು. ಈ ಸಂಸ್ಥೆಯಲ್ಲಿ ಸುಮಾರು 200 ಮಂದಿ ವಿದ್ಯಾರ್ಥಿಗಳು ತಾಂತ್ರಿಕ ವಿಭಾಗದಲ್ಲಿ ಡಿಪ್ಲಮಾ ತರಗತಿಗಳಲ್ಲಿ ವ್ಯಾಸಂಗಮಾಡುತ್ತಿರುವವರು. ಒಂದನೇ, ಎರಡನೇ, ಬಿ. ಎ. ಮತ್ತು ಬಿ.ಎಸ್.ಸಿ. ತರಗತಿಗಳಲ್ಲಿ ಅಭ್ಯಾಸಿಸುವವರಿದ್ದಾರೆ. ಒಂದು ವರ್ಷಕ್ಕೆ ಈ ವಿದ್ಯಾರ್ಥಿನಿಲಯಕ್ಕೆ ಸುಮಾರು 22500 ರೂಪಾಯಿಗಳು ವೆಚ್ಚತಗಲುತ್ತದೆ.

ಜಗದ್ಗುರು ಶ್ರೀ ಶಿವರಾತ್ರೀಶ್ವರ ಕೃಪಾ ಪೋಷಿತ, ಕ್ಯಾತನಹಳ್ಳಿ ಸಾಹುಕಾರ್ ಸಿದ್ದಲಿಂಗಯ್ಯನವರ ಸಂಸ್ಕೃತ, ವೇದ, ಜೋತಿಷ್ಯ ಉಚಿತ ವಿದ್ಯಾರ್ಥಿ ನಿಲಯ, ಮೈಸೂರು.

ಈ ವಿದ್ಯಾರ್ಥಿ ನಿಲಯವು 1932ನೆ ಇಸ್ವಿಯಲ್ಲಿ ಪ್ರಾರಂಭವಾಯಿತು. ಇಲ್ಲಿ ಸುಮಾರು 300 ಮಂದಿ ವಿದ್ಯಾರ್ಥಿಗಳಿಗೆ ಉಚಿತ ಅಶನ ವಸತಿ ಸೌಕರ್ಯವಿದೆ. ಎಲ್ಲಾ ವಿದ್ಯಾರ್ಥಿಗಳೂ ಸಂಸ್ಕೃತ, ವೇದ, ಜೋತಿಷ್ಯ ಭಾಗಗಳಲ್ಲಿ ಅಭ್ಯಾಸಿಸುವವರು ಈ ನಿಲಯದ ವಾರ್ಷಿಕ ವೆಚ್ಚ ಸುಮಾರು 62500 ರೂಗಳು.

## ಜಗದ್ಗುರು ಶ್ರೀ ಶಿವರಾತ್ರೀಶ್ವರ, ಗುರುಕುಲ ಮೈಸೂರು

ಗುರುಕುಲವು 1950ನೇ ಇಸ್ವಿಯಲ್ಲಿ ಸ್ಥಾಪಿತವಾಯಿತು. ಇಲ್ಲಿ ಹಲವಾರು ಮಠಾಧಿಪತಿಗಳು ಗುರುಕುಲಾಶ್ರಮದ ಜೀವನವನ್ನು ನಡೆಸುತ್ತಾ ಅಭ್ಯಾಸಿಸುತ್ತಿದ್ದಾರೆ. ಇಲ್ಲಿ 30 ಮಂದಿ ಮಠಾಧೀಶ್ವರರಿದ್ದಾರೆ. ಇದಕ್ಕಾಗಿ ಶ್ರೀಗಳವರು ವರ್ಷಕ್ಕೆ 5600 ರೂಗಳನ್ನು ಖರ್ಚುಮಾಡುತ್ತಿದ್ದಾರೆ.

## ಜಗದ್ಗುರು ಶ್ರೀ ಶಿವರಾತ್ರೀಶ್ವರ ಹರಿಜನ ವಿದ್ಯಾರ್ಥಿ ನಿಲಯ

ಹರಿಜನರ ಉದ್ಧಾರಕ್ಕಾಗಿ ಈ ನಿಲಯವು 1956ರಲ್ಲಿ ಪ್ರಾರಂಭಿಸಲ್ಪಟ್ಟಿತು. ಇಲ್ಲಿ ಸುಮಾರು 60 ಮಂದಿ ವಿದ್ಯಾರ್ಥಿಗಳಿಗೆ ಉಚಿತ ಅಶನವಸತಿ ಸೌಕರ್ಯವನ್ನು ಮಾಡಲಾಗಿದೆ. ಇದಕ್ಕಾಗಿ ತಗಲುವ ವಾರ್ಷಿಕ ವೆಚ್ಚ 16000 ರೂಪಾಯಿಗಳು.

## ಗ್ರಾಮಾಂತರದಲ್ಲಿ ವಿದ್ಯಾರ್ಥಿನಿಲಯಗಳು

ಮೈಸೂರು ನಗರದಲ್ಲಿ ಪ್ರೌಢ ಶಿಕ್ಷಣಕ್ಕೆ ಬರುವವರಿಗೆ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿ ಅವಕಾಶನೀಡಲಾಯಿತು. ಆದರೆ ಪ್ರಥಮ ಹಂತದ ಶಿಕ್ಷಣಪಡೆಯಲು ನಗರಕ್ಕೆ ಬರುವ ಚೈತನ್ಯ ಗ್ರಾಮಾಂತರದ ಜನತೆಗೆ ಸಾಧ್ಯವಾಗುತ್ತಿರಲಿಲ್ಲ. ಇದನ್ನು ಮನಗಂಡು ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವ ಕಾರ್ಯಕ್ರಮವು ಪ್ರಾರಂಭವಾಯಿತು.

### ಚಾಮರಾಜನಗರದಲ್ಲಿ

ಚಾಮರಾಜನಗರದಲ್ಲಿ ಸುಮಾರು ಒಂದೂವರೆಲಕ್ಷ ರೂಗಳ ಅಂದಾಜಿನ ವಿದ್ಯಾರ್ಥಿನಿಲಯವು 1945ರಲ್ಲಿ ಪ್ರಾರಂಭವಾಗಿ ಈಗ ತನ್ನದೇ ಆದ ಸುಮಾರು ನಾಲ್ಕು ಲಕ್ಷ ರೂಪಾಯಿ ಬೆಲೆ ಬಾಳುವ ನೂತನ ಭವನವನ್ನು ನಿರ್ಮಾಣಮಾಡಿಕೊಳ್ಳುತ್ತಿದೆ. ಈ ವಿದ್ಯಾರ್ಥಿನಿಲಯದಲ್ಲಿ ಮಿಡ್ಲ್‌ಸ್ಕೂಲ್, ಹೈಸ್ಕೂಲ್ ಮತ್ತು ಕಾಲೇಜುಗಳ ವ್ಯಾಸಂಗಮಾಡುವ ಸುಮಾರು 154 ಮಂದಿ ವಿದ್ಯಾರ್ಥಿಗಳಿಗೆ ಉಚಿತ ಅಶನವಸತಿಗಳ ಸೌಕರ್ಯವಿದೆ. ಇದಕ್ಕಾಗಿ ಒಂದು ವರ್ಷಕ್ಕೆ ಸುಮಾರು 36800 ರೂಗಳ ವೆಚ್ಚ ತಗುಲುತ್ತಿದೆ.

### ನಂಜನಗೂಡಿನಲ್ಲಿ

ನಂಜನಗೂಡಿನಲ್ಲಿ ಶ್ರೀ ಮಠದ ಪರಮಶಿಷ್ಯರಾದ ಶ್ರೀ ಸಿರಿಯಪ್ಪನವರು ತಮ್ಮ ಪೂಜ್ಯ ತಂದೆಯವರ ಹೆಸರಿನಲ್ಲಿ ಸುಮಾರು ಒಂದುಲಕ್ಷ ರೂ ಬೆಲೆ ಬಾಳುವ ವಿದ್ಯಾರ್ಥಿನಿಲಯವನ್ನು ನಿರ್ಮಿಸಿ ಜಗದ್ಗುರು ಪೀಠಕ್ಕೆ ಸಮರ್ಪಿಸಿದ್ದಾರೆ. ಇಲ್ಲಿ ಪ್ರತಿವರ್ಷ

ಸುಮಾರು 110 ಮಂದಿ ವಿದ್ಯಾರ್ಥಿಗಳಿಗೆ ಉಚಿತ ಅಶನ ವಸತಿ ಸೌಕರ್ಯಗಳನ್ನು ಮಾಡಲಾಗಿದೆ. ಇದಕ್ಕಾಗಿ ಸುಮಾರು 24500 ರೂಗಳು ವಾರ್ಷಿಕ ವೆಚ್ಚತಗಲುತ್ತದೆ.

### ಟಿ. ನರಸಿಪುರದಲ್ಲಿ

ತಿರಮಕೂಡಲು ನರಸೀಪುರವು ಪ್ರಸಿದ್ಧ ಕ್ಷೇತ್ರ. ಇಲ್ಲಿಯೂ ಸಹ 1948ರಲ್ಲಿ ಒಂದು ವಿದ್ಯಾರ್ಥಿನಿಲಯವನ್ನು ಸುಮಾರು ಮೂವತ್ತು ಸಹಸ್ರರೂಪಾಯಿಗಳ ಅಂದಾಜಿನ ಬಂಗಲೆಯಲ್ಲಿ ನಡೆಸಲಾಗುತ್ತಿದೆ. ಇಲ್ಲಿ ಪ್ರತಿ ವರ್ಷವೂ ಮಿಡ್ಲ್ ಸ್ಕೂಲ್ ಮತ್ತು ಹೈಸ್ಕೂಲ್‌ಗಳಲ್ಲಿ ವ್ಯಾಸಂಗಮಾಡುವ ಸುಮಾರು 110 ಮಂದಿ ವಿದ್ಯಾರ್ಥಿಗಳಿಗೆ ಉಚಿತವಾಗಿ ಅಶನವಸತಿಗಳ ಸೌಕರ್ಯವನ್ನು ನೀಡಲಾಗಿದೆ. ಇದಕ್ಕಾಗಿ ವರ್ಷಕ್ಕೆ ಸುಮಾರು 25000 ರೂಗಳು ಖರ್ಚು ತಗಲುತ್ತದೆ.

### ಯಳಂದೂರು

ಇಲ್ಲಿ 1951ನೇ ಇಸ್ವಿಯಲ್ಲಿ ಬಡ ಮಕ್ಕಳ ಅನುಕೂಲಕ್ಕಾಗಿ ಒಂದು ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಲಾಯಿತು. ಇಲ್ಲಿ ಪ್ರತಿವರ್ಷವೂ ಸುಮಾರು 40 ಮಂದಿ ವಿದ್ಯಾರ್ಥಿಗಳಿಗೆ ಉಚಿತ ಅಶನ ವಸತಿ ಸೌಕರ್ಯವನ್ನು ನೀಡಲಾಗಿದೆ. ಇದಕ್ಕಾಗಿ ತಗಲುವ ವಾರ್ಷಿಕ ವೆಚ್ಚ ಸುಮಾರು 8500 ರೂಪಾಯಿಗಳು.

### ಸರಗೂರು

ಇಲ್ಲಿ 1954ರಲ್ಲಿ ಒಂದು ಉಚಿತ ವಿದ್ಯಾರ್ಥಿನಿಲಯವನ್ನು ತೆರೆಯಲಾಯಿತು. ಪ್ರತಿವರ್ಷವೂ ಸುಮಾರು 85 ಮಂದಿ ವಿದ್ಯಾರ್ಥಿಗಳಿಗೆ ಉಚಿತ ಅಶನ ವಸತಿಗಳ ಸೌಕರ್ಯವನ್ನು ಮಾಡಲಾಗಿದೆ. ಇದಕ್ಕಾಗಿ ವರ್ಷಕ್ಕೆ ಸುಮಾರು 10800 ರೂಪಾಯಿಗಳು ಖರ್ಚಾಗುತ್ತದೆ. ಈ ವಿದ್ಯಾರ್ಥಿನಿಲಯದ ಬಗ್ಗೆ ಒಂದು ಸಂತೋಷಕರವಾದ ವಿಷಯವೇನೆಂದರೆ, ಈ ವಿದ್ಯಾರ್ಥಿನಿಲಯದ ಪೂರ್ಣ ಜವಾಬ್ದಾರಿಯನ್ನು ಮಳಲಿಯ ಗುರುಕಾರ್ ಶ್ರೀಮಾನ್ ಎಂ.ಡಿ. ಶಿವಪ್ಪಾಜಿಯವರು ವಹಿಸಿಕೊಂಡು ನಡೆಸುತಿದ್ದಾರೆ. ಇದೇ ರೀತಿ ಸಾರ್ವಜನಿಕರೂ ಮುಂದೆ ಬಂದು ಜವಾಬ್ದಾರಿಯನ್ನು ವಹಿಸಿಕೊಂಡರೆ ಇನ್ನು ಹೆಚ್ಚಿನ ಸೇವೆಮಾಡಲು ಅವಕಾಶ ಕಲ್ಪಿಸಿಕೊಟ್ಟಂತಾಗುತ್ತದೆ.

### ಕೃಷ್ಣರಾಜನಗರ

ಇಲ್ಲಿ ಬಡ ಮಕ್ಕಳ ವಿದ್ಯಾಭ್ಯಾಸಕ್ಕಾಗಿ 1961ರಲ್ಲಿ ಒಂದು ವಿದ್ಯಾರ್ಥಿನಿಲಯವನ್ನು ತೆರೆಯಲಾಯಿತು. ಪ್ರತಿವರ್ಷವೂ ಸುಮಾರು 25 ಮಂದಿ ವಿದ್ಯಾರ್ಥಿಗಳಿಗೆ ಉಚಿತವಾಗಿ ಅಶನ ವಸತಿಗಳಿಗೆ ಸೌಕರ್ಯಮಾಡಲಾಗಿದೆ. ಇದಕ್ಕಾಗಿ ತಗಲುವ ವಾರ್ಷಿಕವೆಚ್ಚ ಸುಮಾರು 5000 ರೂಪಾಯಿಗಳು. ಹೆಚ್ಚು ಮಂದಿ ಬಡವಿದ್ಯಾರ್ಥಿಗಳಿಗೆ ಮುಂದಿನ ಸಾಲಿನಿಂದ ಅವಕಾಶಮಾಡಲಾಗುತ್ತದೆ.

## ಹುಲ್ಲಹಳ್ಳಿ

ನಂಜನಗೂಡು ತಾಲ್ಲೂಕು ಹುಲ್ಲಹಳ್ಳಿಯಲ್ಲಿ 1961ರಲ್ಲಿ ಒಂದು ವಿದ್ಯಾರ್ಥಿನಿಲ ಯವನ್ನು ಸ್ಥಾಪಿಸಲಾಯಿತು. ಇಲ್ಲಿ ಈ ಸಾಲಿನಲ್ಲಿ ಹೈಸ್ಕೂಲ್‌ನಲ್ಲಿ ಅಭ್ಯಾಸಮಾಡುವ 35 ಮಂದಿ ವಿದ್ಯಾರ್ಥಿಗಳಿಗೆ ಉಚಿತವಾಗಿ ಅಶನವಸತಿ ಸೌಕರ್ಯವನ್ನು ಮಾಡಲಾ ಗಿದೆ. ಇದಕ್ಕಾಗಿ ವರ್ಷಕ್ಕೆ ಸುಮಾರು 7500 ರೂಗಳು ಖರ್ಚಾಗುತ್ತಿದೆ. ಮುಂದಿನ ಸಾಲಿನಿಂದ ಇನ್ನು ಹೆಚ್ಚುಮಂದಿಗೆ ಅವಕಾಶಕೊಡುವ ಏರ್ಪಾಡುಮಾಡಿದೆ.

## ಜಗದ್ಗುರು ಶ್ರೀ ಶಿವರಾತ್ರೀಶ್ವರ ವಿದ್ಯಾಪೀಠದ ಆಶ್ರಯದಲ್ಲಿ ನಡೆಯುತ್ತಿರುವ ವಿದ್ಯಾ ಸಂಸ್ಥೆಗಳ ವಿವರ

1. ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿಶುವಿಹಾರ, ಮೈಸೂರು.
2. " ಸುತ್ತೂರು.
3. " ಹುಲ್ಲಹಳ್ಳಿ.
4. " ಪ್ರೈಮರಿಸ್ಕೂಲ್ ಮೈಸೂರು.
5. ಜಗದ್ಗುರು ಶ್ರೀ ಶಿವರಾತ್ರೀಶ್ವರ ಹೈಯರ್ ಸೆಕೆಂಡರಿ ಸ್ಕೂಲ್ ಮೈಸೂರು.
6. " ಚಾಮರಾಜನಗರ.
7. " ಹುಲ್ಲಹಳ್ಳಿ
8. " (ವಿದ್ಯಾರ್ಥಿನಿಯರಿಗೆ) ಮೈಸೂರು.
9. " ಸುತ್ತೂರು.
10. ಕ್ಯಾ॥ಸಾ॥ ಸಿದ್ದಲಿಂಗಯ್ಯನವರ ಸಂಸ್ಕೃತ, ವೇದ, ಮತ್ತು ಜ್ಯೋತಿಷ್ಯ ಪಾಠಶಾಲ ಮೈಸೂರು.
11. ಜಗದ್ಗುರು ಶ್ರೀ ಶಿವರಾತ್ರೀಶ್ವರ ಗಂಡುಮಕ್ಕಳ ಮೂಲಶಿಕ್ಷಣ ತರಬೇತಿ ಕೇಂದ್ರ ಮೈಸೂರು
12. " ಹೆಣ್ಣುಮಕ್ಕಳ ಮೂಲಶಿಕ್ಷಣ ತರಬೇತಿಕೇಂದ್ರ ಮೈಸೂರು.
13. " ಖಾದಿ ಮತ್ತು ಗ್ರಾಮೋದ್ಯೋಗ ವಿಭಾಗ, ಮೈಸೂರು.

## ಗುರುಸಂದರ್ಶನ

ಪ್ರಖ್ಯಾತವಾದ ಸುತ್ತೂರು ವೀರಸಿಂಹಾಸನಮಠದ ಜಗದ್ಗುರುಗಳವರ ಕಾರ್ಯ ಕ್ಷೇತ್ರವು ಕನ್ನಡಿಗರೆಲ್ಲರ ಅಭಿಮಾನಕೇಂದ್ರವಾಗಿದೆ. ಈ ಸಂಸ್ಥೆಯುನಡೆಯುತ್ತಿರುವ ಸೇವಾಕಾರ್ಯಗಳನ್ನು ಅನೇಕಜನ ವಿದ್ವನ್ಮಣಿಗಳೂ, ಮಠಾಧೀಶ್ವರರೂ, ರಾಷ್ಟ್ರೀಯ ಮುಖಂಡರೂ, ಪಂಡಿತರೂ ಸ್ವಯಂ ಸಂದರ್ಶಿಸಿ ಜಗದ್ಗುರುಗಳವರ ಸೇವೆಯನ್ನು ಪ್ರಶಂಸೆಮಾಡಿ ತಮ್ಮ ಅಭಿಮಾನವನ್ನು ವ್ಯಕ್ತಪಡಿಸಿದ್ದಾರೆ. ಜಾತಿಮತ ಭೇದವಿಲ್ಲದೆ

ರ್ವರರೂ ಈ ಸಂಸ್ಥೆಯ ಆತಿಥ್ಯವನ್ನು ಸ್ವೀಕರಿ ಸಂಸ್ಥೆಯ ಅಭ್ಯುದಯವನ್ನು ಆಶಿಸಿ ಸಂಸ್ಥೆಯಲ್ಲಿ ಆಶ್ರಯಪಡೆಯುತ್ತಿರುವ ವಿದ್ಯಾರ್ಥಿವೃಂದವನ್ನು ಹರಸಿದ್ದಾರೆ.

ಜಗದ್ಗುರುಗಳವರು ನಡೆಸುತ್ತಿರುವ ಮಂತ್ರ ಲೇಖನ ಯಜ್ಞ ಮತ್ತು ಅವರಲ್ಲಿರುವ ಕರ್ತವ್ಯ ದಕ್ಷತೆ ಇವುಗಳು ಪ್ರೇಕ್ಷಕರನ್ನು ಅಚ್ಚರಿಗೊಳಿಸಿವೆ. ವಿದ್ವಜ್ಜನರೂ ಮಠಾಧೀಶ್ವರರು ಮತ್ತು ಮಹಾನುಭಾವರನೇಕರು ಜಗದ್ಗುರುಗಳ ಮತ್ತು ಅವರ ಕಾರ್ಯಕುಶಲತೆಯನ್ನು ಕಂಡು ವ್ಯಕ್ತಪಡಿಸಿರುವ ಅಭಿಪ್ರಾಯಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಸಂಗ್ರಹಿಸಲಾಗಿದೆ. ಇದುವರೆಗೆ ಸಾವಿರಕ್ಕೀತಲೂ ಮಿಗಿಲಾಗಿ ಮಹನೀಯರು ಜಗದ್ಗುರುಗಳನ್ನು ಸಂದರ್ಶಿಸಿ ತಮ್ಮ ಅಭಿಮತವನ್ನು ಪ್ರಕಟಪಡಿಸಿದ್ದಾರೆ. ಸ್ಥಳಾಭಾವದಿಂದ ಎಲ್ಲವನ್ನೂ ಇಲ್ಲಿ ಪ್ರಕಟಿಸಲಾಗಿಲ್ಲ. ಈ ಸಂಸ್ಥೆಯಸೇವೆಯನ್ನು ಪ್ರಶಂಸಿಸುವುದರಮೂಲಕ ಸಂಸ್ಥೆಯ ಶ್ರೇಯಸ್ಸನ್ನೂ ಹಾರೈಸಿದ ಎಲ್ಲಾಮಹನೀಯರನ್ನು ಈ ಸಮಯದಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಓಂ. ನಮಃಶಿವಾಯ ಓಂ. ನಮಃಶಿವಾಯ ಓಂ. ನಮಃಶಿವಾಯ

ಓಂ. ನಮಃಶಿವಾಯ ಓಂ. ನಮಃಶಿವಾಯ

ಮಾನವನು ಜೀವಿಸುತ್ತಿರುವುದು ಪ್ರಾಣವಾಯುವಿನಬಲದಿಂದ ಆ ವಾಯುವಿನ ಲೋಮ, ವಿಲೋಮಸಂಚಾರವು 21600 (ಇಪ್ಪತ್ತೊಂದುಸಾವಿರದ ಆರನೂರು) ಪ್ರತಿನಿತ್ಯ ಪ್ರತಿ ಮಾನವನಿಗೆ ಸಹಜವಾಗಿ ನಡೆಯತಕ್ಕ ಈ ಕ್ರಿಯೆಯು ಶಕ್ತಿಯೋಗ ದತ್ತ ಅಡಿಇಟ್ಟರೆ ಅದೇ ಹಂಸಜಪಯೋಗ- ಆ ಜಪದತ್ತಡಿಯಿಟ್ಟ ಮನವುಳ್ಳ ಮಾನವನ ಪ್ರಾಣವು ಪ್ರಾಣಲಿಂಗಸ್ಥಿತಿಯುಳ್ಳದ್ದಾಗುತ್ತದೆ. ಅದು ಸಾಧಿಸಿದರೆ ಶಿವ-ಯೋಗವು ಕರತಲಾಮಲಕವಾಗುತ್ತದೆ- ಆವಾಗ್ಯೆ ಯಾವ ಬ್ರಹ್ಮಾಣ್ಯಾಧ್ಯಾಯ ಕರ್ಮಾಣಿ- ಎಂಬೋಕ್ತಿಯಂತೆ- ಆ ಯೋಗಿಯ ಕರ್ಮಂಗಳೆಲ್ಲ ಬ್ರಹ್ಮನಿಷ್ಠದೃಷ್ಟಿಯುಳ್ಳವುಗಳಾಗುತ್ತವೆ- ಆವಾಗ್ಯೆ ಯಾವ ಕರ್ಮಮಲಂಗಳ ಬಂಧನವೇ ಇಲ್ಲದಂತಾಗುತ್ತದೆ. ಇದನ್ನು ಸಾಧಿಸಿದ ಶ್ರೀ ವೀರಸಿಂಹಾಸನಾಧೀಶ್ವರರಾದ ಶ್ರೀ. ಶ್ರೀ ಶಿವರಾತ್ರಿಮಹಾಸ್ವಾಮಿಗಳಿಗೆ- ಶಿವಯೋಗಿಗಳೆಂದು ಅನುಭವಿಸುವುದು ನಮಗೆ ಅತ್ಯಾನಂದವನ್ನುಂಟುಮಾಡುತ್ತದೆ.

ಇಲ್ಲಿಯುವರೆವಿಗೆ 75ಲಕ್ಷ ಪ್ರಣವ ಜಪಗಳನ್ನು ಅವ್ಯಾಹತವಾಗಿ ಸಾಗಿಸಿಕೊಂಡು ಬಂದ ಮಹಾಸ್ವಾಮಿಗಳಿಗೆ ಇನ್ನೂ ಕೋಟಿ ಸಂಖ್ಯೆ ಅನುಗ್ರಹಿಸಲೆಂದು ಮನಃಪೂರ್ವಕ ಇಚ್ಛಿಸುತ್ತೇನೆ.

ಸುತ್ತೂರು ಕ್ಯಾಂಪ್
3-4-55

Sd)ಮೃತ್ಯುಂಜಯಸ್ವಾಮಿಗಳು ಗವೀಮಠ
ಮುಧೋಳ

ಇಂದು ಶ್ರೀ ಸುತ್ತೂರು ಹಿರಿಯ ಜಗದ್ಗುರುಗಳವರನ್ನು ಸಂದರ್ಶಿಸಿದೆವು ಇವರ ಕಾರ್ಯಕ್ಷೇತ್ರವು ಮಹತ್ವಪೂರ್ಣವಾಗಿದೆ ಇವರು ವಯೋವೃದ್ಧರಾಗಿದ್ದರೂ, ಪ್ರತಿ ದಿನ ಒಂಭತ್ತು ಘಂಟೆಗಳಕಾಲ ಶಿವ ಮಂತ್ರವನ್ನು ಬರೆಯುತ್ತಿರುವುದು ಆದರ್ಶವಾಗಿದೆ. ಮನನಕ್ಕಿಂತಲೂ ಉಲ್ಲೇಖನವು ಚಿತ್ತದ ಏಕಾಗ್ರತೆಗೆ ಹೆಚ್ಚಿನ ನೆರವನ್ನು ನೀಡುತ್ತದೆ. ಕೋಟಿಜಪಕ್ಕಿಂತಲೂ ಹತ್ತು ಸಾರಿ ಬರೆಯುವುದು ಉತ್ತಮವಾದುದು. ಶ್ರೀ ಸುತ್ತೂರು ಶ್ರೀಗಳವರು ಕೇವಲ ಆಧ್ಯಾತ್ಮವನ್ನು ತಮ್ಮ ಜೀವನದ ಧ್ಯೇಯವಾಗಿಟ್ಟು ಲೋಕಸೇವೆಯ ದೀಕ್ಷೆಯನ್ನು ಕೈಕೊಂಡು ಅನ್ನದಾಸೋಹದಿಂದ ಸಾವಿರಾರುಜನ ವಿದ್ಯಾರ್ಥಿಗಳಿಗೆ ನೆರೆನೀಯುತ್ತಿರುವುದು ತುಂಬಾ ಆದರ್ಶವಾಗಿದೆ ಶ್ರೀ ಶ್ರೀಗಳವರ ಸೇವಾಕ್ಷೇತ್ರವು ಇನ್ನೂ ವಿಸ್ತಾರವಾಗಲಿ ಶ್ರೀ ಶ್ರೀಗಳವರ ಸಂಕಲ್ಪ ಸತ್ಯ ಸಂಕಲ್ಪವಾಗಲಿ.

Sd) ಶ್ರೀ ಶಿವಕುಮಾರ ಶಿವಾಚಾರ್ಯ
ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ ಸಿರಿಗೆರೆ
ತಾ|| 18-12-60 ಮೈಸೂರು ಮೊಕ್ಕಾಂ

ಶ್ರೀ ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರ ಸಂದರ್ಶನವನ್ನು ಪಡೆದು ನನ್ನ ಹೃದಯವು ಪುನೀತವಾಯಿತು ಶ್ರೀ ಮಹಾಸ್ವಾಮಿಗಳವರ ಆತ್ಮ ತೇಜಸ್ಸೂ ಹಾಗೂ ಆಂತರಿಕ ಓಜಸ್ಸು ಎಲ್ಲರ ಚಿತ್ತವನ್ನು ಆಕರ್ಶಿಸುತ್ತದೆ. ಅವರು ಆಧ್ಯಾತ್ಮ ಶಕ್ತಿಯ ಕೇಂದ್ರವೂ ಯೋಗಶಕ್ತಿಯ ಪುಂಜವೂ ಆಗಿದ್ದಾರೆ ಈಶಕ್ತಿಯು ಅವರಲ್ಲಿ ಅವತರಿಸಿದ್ದುದು ಷಡಕ್ಷರಿ ಮಂತ್ರ ಪ್ರಭಾವದಿಂದ ಧರ್ಮಗ್ರಂಥಗಳೆಲ್ಲವೂ ಮಂತ್ರಮಹಿಮೆಯನ್ನು ತುಂಬಾ ಹೊಗಳಿದ್ದಾರೆ. ಆದರೆ ಅದರ ಪ್ರತ್ಯಕ್ಷಪ್ರಭಾವವನ್ನು ಪರಿಣಾಮವನ್ನು ನಾವು ಮಹಾಸ್ವಾಮಿಯವರಲ್ಲಿ ಕಣ್ಣಾರೆ ನೋಡುತ್ತೇವೆ. ಪ್ರವಚನಕ್ಕಿಂತ ಪ್ರತ್ಯಕ್ಷ ಉದಾಹರಣೆಯೇ ಲೇಸೆಂಬಂತೆ ಮಹಾಸ್ವಾಮಿಗಳವರ ದಿವ್ಯ ಜೀವನ ರೀತಿವೆ ಇದಕ್ಕೆ ಸಾಕ್ಷಿ ಒಂದು ಮಂತ್ರವು ಎಷ್ಟೋ ಅಕ್ಷರವುಳ್ಳದ್ದು ಅಷ್ಟು ಲಕ್ಷ ಜಪಿಸಿದರೆ ಇಲ್ಲವೆ ಬರೆದರೆ ಆ ಮಂತ್ರ ಸಿದ್ಧಿಯಾಗುವದೆಂದು, ಮಂತ್ರಶಾಸ್ತ್ರವು ಹೇಳುತ್ತದೆ ಶ್ರೀ ಮಹಾಸ್ವಾಮಿಗಳು ಈಗ ಒಂದುಕೋಟಿ ಅರವತ್ತೆಂಟುಲಕ್ಷ ಬರೆದಿದ್ದಾರೆ ಈ ಮಂತ್ರವನ್ನು 6 ಕೋಟಿ ಬರೆದು ಮುಗಿಸಲೆಂದು ನಾನು ಪ್ರಭುವಿನಲ್ಲಿ ಪ್ರಾರ್ಥಿಸುತ್ತೇನೆ ಅಲ್ಲದೆ ದಯಾಘನನಾದ ಪರಮಾತ್ಮನು ಅವರಿಗೆ ಇನ್ನೂ ಆಯುರಾರೋಗ್ಯವನ್ನು ಕೊಟ್ಟು ಅವರಿಂದ ಲೋಕಕಲ್ಯಾಣಕಾರ್ಯವು ಜರಗುವಂತಾಗಲೆಂದು ನಾನು ಮತ್ತೊಮ್ಮೆ ಪ್ರಭುವಿನಲ್ಲಿ ಪ್ರಾರ್ಥಿಸುತ್ತೇನೆ.

ಶ್ರೀ ಶ್ರೀ ಸುತ್ತೂರು ಚಿಕ್ಕಸ್ವಾಮಿಗಳವರ ಕಾರ್ಯವಂತೂ ವಿದ್ಯಾ ಕ್ಷೇತ್ರದಲ್ಲಿ ಅತ್ಯಂತ ಅಗಾಧವಾಗಿದೆ ಅವರು ಕೇವಲ ತಮ್ಮ ತಪೋಬಲದಿಂದ 15 ಸಂಸ್ಥೆಗಳನ್ನು ನಡೆಸುತ್ತಿದ್ದಾರೆ ಸುಮಾರು 2500 ವಿದ್ಯಾರ್ಥಿಗಳಿಗೆ ಅನ್ನದಾನ ನೀಡುತ್ತಿದ್ದಾರೆ ಶ್ರೀ ಚಿಕ್ಕಸ್ವಾಮಿಗಳವರ ಸರಳ ಜೀವನ, ಅವರ ಆಧ್ಯಾತ್ಮ ತೇಜಸ್ಸು ಅವರ ಸ್ವಾರ್ಥ

ತ್ಯಾಗ, ಅವರ ಸೇವಾಭಾವ ಇವೆಲ್ಲ ಸದ್ಗುಣಗಳು ಅವರನ್ನು ಒಬ್ಬ ಆದರ್ಶ ಮಹಾಪುರುಷರನ್ನಾಗಿ ಮಾಡಿವೆ. ದಾನವು ಹಲವು ಬಗೆಯಾಗಿದೆ. ಅದೇಕೆ ಈ ವಿಶ್ವವೇ ದೇವಾದಿದೇವನ ದಾನವಾಗಿದೆ ಅಂತೆಯೇ ಬಸವಣ್ಣನವರು ದೇವಾ, ಕೂಡಲಸಂಗಮಾ ನೀನು ಮಹಾದಾನಿ ಎಂದು ಕೊಂಡಾಡಿದ್ದಾರೆ ಅನ್ನದಾನಕ್ಕಿಂತಲೂ ವಿದ್ಯಾದಾನ ಮಹತ್ವದ್ದು ಇವೆರಡನ್ನು ನೀಡಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನಮಾಡುತ್ತ ಆಧ್ಯಾತ್ಮದ ಹಂಬಲವನ್ನು ಧಾರ್ಮಿಕದ ಭಾವನೆಯನ್ನು ಪ್ರಸ್ಥಾಪಿಸುತ್ತಿರುವುದು ನಿಜಕ್ಕೂ ಅಭಿಮಾನಪಡುವಂತಹ ವಿಷಯವು. ಶ್ರೀ ಚಿಕ್ಕಸ್ವಾಮಿಗಳು ಗುರುಕುಲವನ್ನು ತೆರೆದು ಅದರಲ್ಲಿ ಯೋಗಾಭ್ಯಾಸದ ವಿಷಯವನ್ನು ಕಲಿಸುತ್ತಿರುವುದು ಸಂತೋಷದ ಸಂಗತಿಯು ಆದರೆ ಅದರಲ್ಲಿ ಕ್ರಮಬದ್ಧವಾದ ಶಿವಯೋಗವನ್ನು ಕಲಿಸುವ ಏರ್ಪಾಡಾಗಬೇಕೆಂದು ನನ್ನ ಬಯಕೆಯಾಗಿದೆ. ಶ್ರೀ ಚಿಕ್ಕಸ್ವಾಮಿಗಳವರು ಇನ್ನೂ ಇಂತಹ ಹಲವಾರು ಸಂಸ್ಥೆಗಳನ್ನು ನಡೆಸಿಕೊಂಡು ಹೋಗುವಂತಹ ಇನ್ನು ಹಲವಾರು ಸಾವಿರ ವಿದ್ಯಾರ್ಥಿಗಳಿಗೆ ಅನ್ನದಾನ ಮಾಡುವಂತಹ ಶಕ್ತಿಯನ್ನು ಪರಮಾತ್ಮನು ಅವರಿಗೆ ದಯಪಾಲಿಸಲೆಂದು ನನ್ನ ಪ್ರಾರ್ಥನೆ.

ಸುತ್ತೂರು. Sd) ಶ್ರೀ ಕುಮಾರಸ್ವಾಮಿಗಳು
12-3-61 ನವಕಲ್ಯಾಣಮಠ, ದಾರವಾಡ

ಶ್ರೀ ಸುತ್ತೂರು ವೀರಸಿಂಹಾಸನ ಮಠದ ಶ್ರೀ ಶಿವರಾತ್ರಿಸ್ವಾಮಿಗಳು ಕೈಗೊಂಡಿರುವ ಶಿವ ಮಂತ್ರ ಸ್ಮರಣೆಯ ಲೇಖನ ಕಾರ್ಯಕ್ರಮ ನೋಡಿ ನಮಗೆ ಬಹಳ ಆನಂದವಾಗಿದೆ. ಲೋಕಕಲ್ಯಾಣಕ್ಕಾಗಿ ಹಾಲಾಹಲ ವಿಷವನ್ನೆ ನುಂಗಿದ ಆ ಮಹಾಕರುಣಾಮೂರ್ತಿಯಾದ ಶಿವನ ಚಿತ್ರನಾಮಸ್ಮರಣೆಯಿಂದ ಜಗತ್ತಿನ ಶಾಂತಿ ಹಾಗೂ ಕಲ್ಯಾಣ ಸಾಧನೆಗೆ ವಿಶೇಷ ಸಹಾಯವಾಗುವುದೆಂದು ಆಶಿಸುತ್ತೇನೆ. ಸುತ್ತೂರು ಮಠದ ಹಿರಿಯ ಮತ್ತು ಕಿರಿಯ ಸ್ವಾಮಿಗಳಜೊತೆಗೆ ನಾವು ನಡೆಸಿದ ಪರಸ್ಪರ ಸಂದರ್ಶನ ಹಾಗೂ ಮಾತುಕತೆಯಿಂದ ನನಗೆ ವಿಶೇಷ ಆನಂದವಾಗಿದೆ. ನಿಮ್ಮೆಲ್ಲರ ಪರಸ್ಪರ ಸ್ನೇಹ ಹಾಗೂ ಸಹಕಾರದಿಂದ ಸಮಾಜಹಿತಸಾಧನೆಗೆ ಅನುಕೂಲವಾಗುವುದೆಂದು ಆಶಿಸುತ್ತೇನೆ.

Sd) ವಿಶ್ವೇಶತೀರ್ಥ ಶ್ರೀಪಾದಂಗಳವರು
15-2-60 ಶ್ರೀ ಪೇಜಾವರ ಮಠ ಉಡುಪಿ

ಈ ವೃದ್ಧ ತಪಸ್ವಿಗಳಿಂದ ಎಲ್ಲಕ್ಕಿಂತಲೂ ಹೆಚ್ಚಾದಂತ ಮಂತ್ರವನ್ನು ಬರೆಯುವುದರ ಮೂಲಕ ಭಗವಂತನ ಅನುಗ್ರಹವು ಬಹಳ ಒಳ್ಳೆಯದಾಗಿ ಆಗುತ್ತದೆ ಎಂದು ತಿಳಿಯುತ್ತದೆ ಮನಸ್ಸನ್ನು ನಿಗ್ರಹಮಾಡುವುದಕ್ಕೆ ಇದೇನೇ ಸುಲಭವಾದ ದಾರಿಯು.

Sd) ಆದಮಾರು ಮಠೀಯ ವಿಭುದೇಶ ತೀರ್ಥ ಶ್ರೀ ಶ್ರೀ ಪಾದಾಃ||
12-10-59 ಸುತ್ತೂರು ಸ್ಥಾನಂ

ಪ್ರಥಮ ಬಾರಿ ಶ್ರೀ ಸುತ್ತೂರು ಮಠಕ್ಕೆ ಸಂದರ್ಶನವಿತ್ತು ಶ್ರೀ ಗಳವರ ಆಶೀ ರ್ವಾದಪಡೆಯುವ ಸದವಕಾಶ ಈ ದಿನ ನಮಗೆ ದೊರಿತದ್ದು ತುಂಬ ಸಂತೋಷದ ವಿಷಯ.

ಶ್ರೀ ಸ್ವಾಮಿಗಳವರ ಮತ್ತು ಮಠದ ವಿಷಯದಲ್ಲಿ ಅನೇಕ ದಿನಗಳಿಂದಲೂ ಇತರೆಯವರ ಮೂಲಕವಾಗಿ ಪ್ರಶಂಸನೀಯವಾದ ಮಾತುಗಳನ್ನು ಕೇಳುತಿದ್ದು, ಈ ದಿನ ಪ್ರತ್ಯಕ್ಷವಾಗಿ ನೋಡುವ ಅವಕಾಶ ಲಭಿಸಿತು. ಶ್ರೀಯುತರುಗಳಾದ ಸಾಹುಕಾರ್ ಶ್ರೀ ಎಸ್. ಚನ್ನಯ್ಯನವರು ಶ್ರೀ ಹೆಚ್. ಎಂ. ಚನ್ನಬಸಪ್ಪನವರು ಶ್ರೀ ಗಾಂಜಿವೀರ ಪ್ಪನವರು ಶ್ರೀ ಕೊಂಡಜ್ಜಿ ಬಸಪ್ಪನವರು ಮೊದಲಾದ ಅನೇಕ ಸ್ನೇಹಿತರುಗಳೆಲ್ಲರೂ ಶ್ರೀಗಳವರು ತಮ್ಮ ಅಮೋಘವಾದ ಕಾಲವನ್ನು ಶಿವಯೋಗದಲ್ಲಿಯೂ, ವಿದ್ಯಾಪ್ರಸಾರ ಅನ್ನದಾನ, ಜ್ಞಾನಬೋಧೆಯಂತಹ ಅತ್ಯಂತ ಉಪಯುಕ್ತ ರಚನಾತ್ಮಕ ಚಟುವಟಿಕೆ ಗಳಲ್ಲಿಯೂ ಸದುಪಯೋಗಿಸುತ್ತಿರುವುದು ತುಂಬಾ ಮೆಚ್ಚುಗೆಯ ಸಂಗತಿಯಾಗಿದೆ.

ಪುರಾತನ ಇತಿಹಾಸವನ್ನು ಹೊಂದಿ ಇಂದಿಗೂ ದೇಶಕ್ಕೆ ಉಪಯುಕ್ತವಾದ ಸೇವೆಸಲ್ಲಿಸುತ್ತಿರುವ ಈ ಮಠದ ಸ್ವಾಮಿಗಳವರ ಸೇವೆಯು ಆದರ್ಶಪ್ರಾಯವಾಗಿದೆ. ಮೈಸೂರು ಜಿಲ್ಲೆಯ ನಾನಾಕಡೆಗಳಲ್ಲಿ ವಿದ್ಯಾರ್ಥಿಗಳಿಗಾಗಿ ಪ್ರಸಾದ ನಿಲಯಗಳನ್ನು ಸ್ಥಾಪಿಸಿ ವಿದ್ಯಾಪ್ರಸಾರಕಾರ್ಯದಲ್ಲಿ ಸ್ವಾಮಿಗಳು ತೊಡಗಿರುವುದು ತುಂಬಾ ಸ್ತುತ್ಯವಾ ಗಿದೆ. ಶ್ರೀ ಗಳವರ ಸೇವೆಯು ಈಗಾಗಲೇ ಮೈಸೂರು ಸಂಸ್ಥಾನದಲ್ಲೂ ಸಂಸ್ಥಾನದ ಹೊರಗೂ ಪ್ರಖ್ಯಾತವಾಗಿ ಇಂತಹ ಸೌಕರ್ಯದಲ್ಲಿ ಮಗ್ನರಾಗಿ ಇಡೀ ದೇಶದ ಏಳಿಗೆಗೆ ಶ್ರಮಿಸುತ್ತಿರುವ ಶ್ರೀಗಳವರ ಸೇವಾಚಟುವಟಿಕೆಗಳು ಫಲಪ್ರದವಾಗಲೆಂದು ಪ್ರಾರ್ಥಿ ಸುತ್ತೇವೆ.

26–6–54 Sd) ಎಸ್. ನಿಜಲಿಂಗಪ್ಪ

(sd) ಹೆಚ್. ಎಂ. ಚನ್ನಬಸಪ್ಪ, (sd) ಎಸ್. ಚನ್ನಯ್ಯ

ಗಾಂಜೀ ವೀರಪ್ಪ 26–6–54

ಓಂ ನಮಃಶಿವಾಯ (sd) ಕೆ. ಹನುಮಂತಯ್ಯ

ಆಧ್ಯಾತ್ಮಿಕ ಸಾಧನೆಯಲ್ಲಿ ಮಂತ್ರಕ್ಕೆ ನಮ್ಮಲ್ಲಿ ಬಹಳ ಮಹತ್ವವಿದೆ. ಮಂತ್ರ ಯೋಗವೆಂಬುದೂ ಕೂಡ ಉಂಟು. ಅಂದರೆ ಕೇವಲ ಮಂತ್ರೋಪಾಸನೆಯಿಂದ ಕೂಡ ಮುಕ್ತಿಯನ್ನುಪಡೆಯಲು ಅವಕಾಶವಿದೆ ಎಂದು ಅರ್ಥ.

ತಾವು ಸಾಧಿಸುತ್ತಿರುವ ಷಡಕ್ಷರ ಮಂತ್ರವು ಬಹಳ ಪುರಾತನವೂ. ಅನೇಕ ಮುನಿಗಳು' ಸಾಧುಸಂತರು, ಯೋಗಿಗಳು, ವಚನಕಾರರು. ಶಿವಶರಣರಿಂದ ಉಪಾಸಿ ಸಲ್ಪಟ್ಟದ್ದೂ ಇರುವುದು. ಇದು ಆಗಮೋಕ್ತ ಮಂತ್ರವು ಆಹುದು. ಇಂಥ ಪವಿತ್ರ ಮಂತ್ರೋಪಾಸನೆಯಲ್ಲಿ ತಮಗೆ ಪೂರ್ಣ ಯಶಸ್ಸು ದೊರೆಯಲೆಂದು ಪರಮಾತ್ಮನನ್ನು ಪ್ರಾರ್ಥಿಸುವೆ.

ತಮ್ಮವನಾದ

ಮೈಸೂರು. 30–11–59 Sd) ಆರ್. ಆರ್. ದಿವಾಕರ.

ನಾನು ಈ ದಿವಸ ಶ್ರೀ ವೀರಸಿಂಹಾಸನ ಮಠವನ್ನು ಸಂದರ್ಶಿಸಿದೆನು. ಮಠಾಧ್ಯಕ್ಷರಾದ ಶ್ರೀ ಮತ್ಪ್ರಣಮಸ್ವರೂಪಿಗಳಾದ ಶ್ರೀ ಶ್ರೀ ಶಿವರಾತ್ರೀಶ್ವರ ಸ್ವಾಮಿಗಳವರನ್ನು ಕಂಡು ಧನ್ಯನಾದೆನು. ಅದೇಕಾಲದಲ್ಲಿ ಪರಮ ವಿದ್ವಾಂಸರೂ ಯೋಗಿಶ್ರೇಷ್ಠರೂ ಆದ ಮೈಸೂರು ಗವೀಮಠದ ಶ್ರೀ ಗೌರಿಶಂಕರಸ್ವಾಮಿಗಳವರೂ ಅಲ್ಲಿಯೇ ಇದ್ದುದನ್ನು ನೋಡಿ ನನಗೆ ಆನಂದಕ್ಕೆ ಪಾರವೇಇಲ್ಲವಾಯಿತು. ಶ್ರೀ ಶಿವರಾತ್ರೀಶ್ವರ ಸ್ವಾಮಿಗಳವರು ತುಂಬಾ ನಿಸ್ವಾರ್ಥ ಜೀವನವನ್ನು ನಡೆಸುತ್ತಾ ಮಠದ ವಿಶಿಷ್ಠ ಕಾರ್ಯಗಳನ್ನು ನಡೆಸುವುದರಲ್ಲಿ ಅತ್ಯಂತ ದಕ್ಷರೆಂದು ಕೀರ್ತಿಯನ್ನು ಪಡೆದಿದ್ದಾರೆ. ಈ ಮಠದ ಪ್ರಭಾವವು ನಾನಾಕಡೆಗಳಲ್ಲಿ ವಿಸ್ತರಿಸಿ ಭಕ್ತಾದಿಗಳ ನಡೆನುಡಿಗಳ ಸುಧಾರಣೆಗೆ ಕಾರಣವಾಗಿದೆ. ವಿದ್ಯಾಪ್ರಸಾರಕ್ಕೆ ಶ್ರೀ ಸ್ವಾಮಿಗಳವರು ಕೈಗೊಂಡಿರುವ ಸಂಸ್ಕೃತ ಪಾಠಶಾಲೆ ಮತ್ತು ವಿದ್ಯಾರ್ಥಿನಿಲಯಗಳು ಅವರ ಅಸಾಧಾರಣ ಉದಾರತೆಯನ್ನು ಮತ್ತು ಲೋಕ ಕಲ್ಯಾಣ ಮನೋಭಾವವನ್ನು ಎತ್ತಿಹಿಡಿದು ತೋರಿಸುತ್ತವೆ. ಇಂತಹ ಮಹಾನುಭಾವರು ಬಹುಕಾಲ ಬದುಕಿರಲೆಂಬುದೇ ನನ್ನ ನಿರಂತರವಾದ ಪ್ರಾರ್ಥನೆ.

ತಾ॥ 5-10-1948 Sd) ಹೆಚ್. ಚಂದ್ರಶೇಖರಯ್ಯ
ಸುತ್ತೂರು. ವಿದ್ಯಾಸಚಿವ
ಮೈಸೂರು ಸರ್ಕಾರ

ಈ ಮಠಕ್ಕೆ ಭೇಟಿಕೊಟ್ಟು ಸ್ವಾಮಿಯವರ ದರ್ಶನ ಲಾಭ ಪಡೆಯುವ ಭಾಗ್ಯ ನನಗೆ ದೊರೆಯಿತಲ್ಲ ಎಂದು ಸಂತೋಷಪಡುತ್ತೇನೆ. ಸರ್ವವಿಧದಲ್ಲಿಯೂ ಈ ಮಠ ಈ ಸ್ವಾಮಿಗಳು ಇತರ ಮಠ ಮತ್ತು ಸ್ವಾಮಿಗಳಿಗೆ ಆದರ್ಶ. ಇತರರೂ ದಾನಧರ್ಮಗಳನ್ನು ಮಾಡುತ್ತಿರಬಹುದು, ಆದರೆ ಈ ಸ್ವಾಮಿಜಿಯವರ ವಿಶಾಲ ಭಾವನೆ ಇತರರೂ ತೋರಿಸುತ್ತಾರೆಂದು ನಾನು ಹೇಳಲಾರೆ,

ಮೈಸೂರಿನಲ್ಲಿ ಇವರು ನಡೆಸುತ್ತಿರುವ ವಿದ್ಯಾರ್ಥಿನಿಲಯದಲ್ಲಿ ಒಬ್ಬ ಹರಿಜನ ವಿದ್ಯಾರ್ಥಿಯೂ ಇರುತ್ತಾನೆ. ಚಾಮರಾಜ ನಗರದ ಇವರ ವಿದ್ಯಾರ್ಥಿನಿಲಯದಲ್ಲಿ ಸರ್ವ ಕೋಮಿನವರಿಗೂ ಅವಕಾಶ ಉಂಟು ಇಂದು ಶ್ರೀಮಠದ ದೇವಸ್ಥಾನಕ್ಕೆ ಹರಿಜನರನ್ನು ಬಿಡುವ ವ್ಯವಸ್ಥೆಯನ್ನು ಮಾಡಲಾಗುವುದೆಂದು ಭರವಸೆ ಇಟ್ಟಿರುತ್ತಾರೆ. ಇದನ್ನೆಲ್ಲಾ ನೋಡಿ ಮಹದಾನಂದ ಉಂಟಾಗಿರುತ್ತದೆ. ಶ್ರೀ ಮಠವು ಚಿರಕಾಲವಿರಲಿ ಇದರ ಪ್ರಭಾವ ಬೆಳೆಯಲಿ ಶ್ರೀ ಸ್ವಾಮಿಯವರು ಧೀರ್ಘಕಾಲವಿದ್ದು ತಮ್ಮ ಅಮೋಘ ಸೇವೆಯನ್ನು ಹೆಚ್ಚು ಹೆಚ್ಚಾಗಿ ಮಾಡಲು ಅವಕಾಶವಾಗಲಿ ಎಂದು ಜಗದೀಶ್ವರನನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

Sd) ಹಿರಳ್ಳಿ ಚನ್ನಯ್ಯ ದಾಸಪ್ಪ
1-1-48

ಈ ದಿವಸ ಮಹಾಸ್ವಾಮಿಗಳ ದರ್ಶನವಾದದ್ದು ನನ್ನ ಪುಣ್ಯ, ಮಂತ್ರ ಜಪದ ಮಹತ್ವವನ್ನು ಅನುಷ್ಠಾನ ಮಾಡುತ್ತಾ ಅದರ ತಪಃಪ್ರಭಾವವನ್ನು ಮಹಾಸ್ವಾಮಿಗಳ ದಿವ್ಯದರ್ಶನದಲ್ಲಿ ಕಾಣಬಹುದು.

ಕಲಿಯುಗದ ಪ್ರಾರಂಭದಲ್ಲಿರುವ ನಾವುಗಳು ಈ ಮಂತ್ರಜಪದ ಮಹತ್ವವನ್ನು ತಿಳಿದು ಮಹಾಸ್ವಾಮಿಗಳು ತೋರುತ್ತಿರುವ ದಿವ್ಯಪಥದಲ್ಲಿ ನಾವುಗಳೆಲ್ಲಾ ನಡೆಯು ವಂತೆ ಅನುಗ್ರಹವಾಗಲೆಂದು ಹಾರೈಸುತ್ತೇನೆ.

A. G. Ramachandra Rao

16–7–61 EX.-Minister

ಈ ದಿನ ಮೈಸೂರು ಸಂಸ್ಥಾನದ ಮುಖ್ಯಮಂತ್ರಿಗಳಾದ ಶ್ರೀಮಾನ್ ಹನುಮಂತಯ್ಯನವರ ಸಂಗಡ ಸುತ್ತೂರು ಸಿಂಹಾಸನಕ್ಕೆ ಭೇಟಿಕೊಟ್ಟು ಜಗದ್ಗುರುಗ ಳವರ ದರ್ಶನ ಮಾಡಿ ತುಂಬಾ ಸಂತೋಷ ಪಟ್ಟೆನು.

ಶ್ರೀ ಜಗದ್ಗುರುಗಳವರು ದೇಶದ ಪ್ರಗತಿಯ ಬಗ್ಗೆ ವಿದ್ಯಾ ಸುಧಾರಣೆಯ ತಪಸ್ಸನ್ನು ಕೈಗೊಂಡು ಮೈಸೂರು ದೇಶ ಮತ್ತು ನೀಲಗಿರಿ ವಗೈರೆ ಪ್ರಾಂತಗಳಲ್ಲಿ ಹತ್ತಾರುಕಡೆ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿ ಜಾತಿಮತ ಭೇದ ಭಾವವಿಲ್ಲದೆ ಸುಮಾರು 1600 ಮಂದಿ ವಿದ್ಯಾರ್ಥಿಗಳಿಗೆ ಅಶನ ವಸತಿಗಳನ್ನೇರ್ಪಡಿಸಿ ವಿದ್ಯಾಭ್ಯಾ ಸಕ್ಕೆ ಪ್ರೋತ್ಸಾಹ ನೀಡುತ್ತಿರುವುದು ತುಂಬಾ ಸ್ತುತ್ಯಾರ್ಹವಾದುದು.

ಪೂಜ್ಯಪಾದರಾದ ಜಗದ್ಗುರು ಪಟ್ಟದ ಶ್ರೀ ಶ್ರೀಶಿವರಾತ್ರಿಸ್ವಾಮಿಗಳು ದೇಶ ಕಲ್ಯಾಣಕ್ಕಾಗಿ ಮಹಾಮಂತ್ರ ಬರವಣಿಗೆಯ ತಪಸ್ಸನ್ನು ಕೈಗೊಂಡು ಇಲ್ಲಿಯವರೆವಿಗೆ ಹತ್ತು ಲಕ್ಷ ಪಂಚಾಕ್ಷರೀ ಮಹಾ ಮಂತ್ರವನ್ನು ಬರೆದಿರುತ್ತಾರೆ.

ಇಂತಹ ಗುರುಗಳ ದರ್ಶನದ ಭಾಗ್ಯವು ದೊರೆತಿದ್ದಕ್ಕೆ ನನಗೆ ಮಹದಾನಂದ ಉಂಟಾಗುತ್ತದೆ.

ಜಗದ್ಗುರುಗಳವರು ಕೋಟಿ ಮಂತ್ರಗಳನ್ನು ಬರೆಯಲು ಶಕ್ತಿಸಾಮರ್ಥ್ಯವನ್ನು ಕೊಡಲಿ ಎಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

Sd) ಹೆಚ್. ಸಿದ್ದವೀರಪ್ಪ.

22–7–1954

ಸುತ್ತೂರು ವೀರಸಿಂಹಾಸನ ಮಠದ ಪೂಜ್ಯ ಗುರುಗಳಾದ ಶ್ರೀ॥ ಜಗದ್ಗುರು ಶಿವರಾತ್ರಿಸ್ವಾಮಿಗಳವರನ್ನು ದರ್ಶನಪಡೆಯುವ ಲಾಭವು ಲಭಿಸಿತು. ಗುರುಗಳು ಈ ವೃದ್ಧಾಪ್ಯದಲ್ಲಿ ಪಂಚಾಕ್ಷರಿ ಮಹಾಮಂತ್ರವನ್ನು ಬರೆಯುವ ಕಾರ್ಯದಲ್ಲಿ ತೊಡಗಿ ರುವುದು ದೇಶದ ಕಲ್ಯಾಣದಲ್ಲಿ ಆವರಿಸಿರುವ ಆಸಕ್ತಿಯನ್ನು ತೋರಿಸುತ್ತದೆ. ಈ ಸಂಸ್ಥಾನದವರು ಜಾತಿಮತಗಳ ಭೇದ ಭಾವ ಮರೆತು ಸುಮಾರು 1800 ವಿದ್ಯಾರ್ಥಿ

ಗಳಿಗೆ ಉಚಿತ ಊಟವಸತಿ ಸೌಕರ್ಯ ಉಂಟುಮಾಡಿ ದೇಶದ ಪ್ರಗತಿಗೆ ತುಂಬಾ ಸಹಾಯಮಾಡುತ್ತಿದ್ದಾರೆ. ಮೈಸೂರು ಡಿಸ್ಟ್ರಿಕ್ಟ್ ವಿದ್ಯಾಭ್ಯಾಸದಲ್ಲಿ ಹಿಂದುಳಿದ ಪ್ರದೇಶವಾದ್ದರಿಂದ ಈ ಮಠದವರು ಡಿಸ್ಟ್ರಿಕ್ಟ್ ನಾನಾ ಭಾಗಗಳಲ್ಲಿ ಹಾಸ್ಟಲುಗಳನ್ನು ಸ್ಥಾಪನೆ ಮಾಡಿ ಹಿಂದುಳಿದವರನ್ನು ಮುಂದಕ್ಕೆ ತರುವ ಮಹಾಯಜ್ಞದಲ್ಲಿ ತೊಡಗಿರುವುದು ನಮ್ಮ ದೇಶಕ್ಕೆ ಹೆಮ್ಮೆ ತರುವ ವಿಷಯವಾಗಿದೆ. ಇಂಥ ಸಂಸ್ಥೆಗಳಿಗೆ ಸರ್ಕಾರದವರ ಪ್ರೋತ್ಸಾಹ ಅವಶ್ಯಕವಾಗಿರುತ್ತೆ. ಭಗವಂತನು ಈ ಮಠದವರಿಗೆ ಇನ್ನೂ ಹೆಚ್ಚಿನ ಶಕ್ತಿಯನ್ನು ಅನುಗ್ರಹಿಸಲಿ.

Sd) ಹೆಚ್. ಎಸ್. ರುದ್ರಪ್ಪ
16-12-1959

ಈ ದಿವಸ ಶ್ರೀ ಸುತ್ತೂರುಮಠಕ್ಕೆ ಬಂದು ಜಗದ್ಗುರುಗಳ ದರ್ಶನಾಶೀರ್ವಾದ ಪಡೆಯುವ ಅವಕಾಶವನ್ನು ಕಲ್ಪಿಸಿಕೊಟ್ಟ ನನ್ನ ಮಿತ್ರರಾದ ಶ್ರೀ ರಾಜಶೇಖರಮೂರ್ತಿಯವರಿಗೆ ನಾನು ಕೃತಜ್ಞನಾಗಿದ್ದೇನೆ ಶ್ರೀ ಜಗದ್ಗುರುಗಳು ಮಾಡುತ್ತಿರುವ ಸಹಾಯವು ಶ್ಲಾಘನೀಯವೂ ಅನುಕರಣೀಯವೂ ಆಗಿದೆ. ದೇಶ ಕಲ್ಯಾಣಾರ್ಥವಾಗಿ ಅವರು ಮಾಡುತ್ತಿರುವ ಮಂತ್ರ ಪಠಣದಿಂದ ಎಲ್ಲರಿಗೂ ಶಾಂತಿ ಸಮಾಧಾನಗಳು ಲಭಿಸುವಂತೆ ಭಗವಂತನು ಅನುಗ್ರಹಿಸಲೆಂದು, ಭಕ್ತಮಂಡಲಿಯವರ ಶ್ರೇಯೋಭಿವೃದ್ಧಿಯನ್ನು ಕೋರಲು ಶ್ರೀ ಜಗದ್ಗುರುಗಳಿಗೆ ಭಗವಂತನು ಸರ್ವಮಂಗಳವನ್ನುಂಟು ಮಾಡಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

Sd) ವಿ. ವೆಂಕಟಪ್ಪ
ವಿದ್ಯಾಮಂತ್ರಿ.

4-5-1957

ಶ್ರೀ

19-12-1958

"ಓಂ ನಮಃಶಿವಾಯ"

ಇಂದು ಸುದಿನ "ಶಿವ ಮಂತ್ರಮಹಿಮೆ" ಎಂಬ ಗ್ರಂಥವನ್ನು ಸ್ಪಷ್ಟವಾಗಿ ವೇದೋಪನಿಷತ್ತು, ಪುರಾಣಗಳಿಂದ ಶಿವಮಂತ್ರ ಮಹಿಮೆಯನ್ನು ಎಲ್ಲರಿಗೂ ಸುಲಭವಾಗಿ ತಿಳಿಯುವಂತೆ ಬರೆದು ಲೋಕೋಪಕಾರಮಾಡಿರುವ ಶ್ರೀ ಸುತ್ತೂರು ವೀರಸಿಂಹಾಸನಾಧೀಶ್ವರರಾದ ಜಗದ್ಗುರುಗಳ ಸಂದರ್ಶನವನ್ನು ಮತ್ತೊಮ್ಮೆ ಪಡೆದ ಸೌಭಾಗ್ಯದ ದಿನವಿದು. ಈಗಾಗಲೇ ಇವರು ಶಿವಪಂಚಾಕ್ಷರೀ ಮಂತ್ರವನ್ನು ತಮ್ಮ ಅಮೃತ ಹಸ್ತದಿಂದಲೇ ಒಂದುಕೋಟಿ ಮೂವತ್ತೊಂದುಬಾರಿ ಬರೆದು ಈ ಜಗದ್ಗುರುಗಳು ವಿದೇಹಮುಕ್ತ ಪದವಿಯನ್ನು ಲೀಲಾಜಾಲವಾಗಿ ಸಾಧಿಸುತ್ತಿದ್ದಾರೆ. ಇವರು ಇತೋಪ್ಯತಿಶಯವಾಗಿ ಶಿವಪಂಚಾಕ್ಷರೀ ಮಂತ್ರವನ್ನು ಕೋಟ್ಯಾನು ಕೋಟಿ ಬರೆದು ಜಗತ್ತಿಗೆ ಇನ್ನೂ ಹೆಚ್ಚು ಕಲ್ಯಾಣವನ್ನು ಸಾಧಿಸುತ್ತಾರೆಂಬುದನ್ನು ಮಂತ್ರಗಳಮಹಿಮೆಯನ

ರಿತವರು ಎಲ್ಲರೂ ಒಪ್ಪಲೇಬೇಕು. ಇದರಿಂದ ಮತ್ತು ಇವರಿಂದ ನಮ್ಮ ದೇಶಕ್ಕೆ ಮಾತ್ರವೇ ಅಲ್ಲದೆ ಸಮಸ್ತ ಜಗತ್ತಿಗೂ ಅವರು ಸ್ಥಾಪಿಸಿ ಬೆಳೆಸುತ್ತಿರುವ, ವಿದ್ಯಾ ಸಂಸ್ಥೆ ವಿದ್ಯಾರ್ಥಿವಸತಿಗಳಿಗೂ ಸಕಲಸನ್ಮಂಗಳ ಲಭಿಸುತ್ತವೆಂಬುದು ನನ್ನ ದೃಢವಾದ ನಂಬಿಕೆ.

Sd) A. N. Narasimhia

ಮೈಸೂರು
ಶುಕ್ರವಾರ
ನಮಃಶಿವಾಯ. ದಿ. 30–3–62

ಪರಮ ಪೂಜ್ಯರೂ ಮಹಾಮಹಿಮರೂ ಆದ ತಪಸ್ವಿ ಶಿವರಾತ್ರೀಶ್ವರ ಮಹಾಸ್ವಾಮಿಗಳ ಪವಿತ್ರ ದರ್ಶನವು ನನಗೆ ಮೊದಲು ಲಭಿಸಿದ್ದು 1953ರ ಜುಲೈ ತಿಂಗಳಲ್ಲಿ ಸುತ್ತೂರಿನ ಮಹಾಸ್ವಾಮಿಗಳ ಮಠದಲ್ಲಿಯೇ ಎರಡನೆಯಸಲ 1960ರಲ್ಲಿ ಅದೂ ಮಠದಲ್ಲಿಯೇ ಇದು ಮೂರನೆಯಸಲ ಮೈಸೂರಿನಲ್ಲಿ ನಾನು ಈ ಮೂರುಬಾರಿಯೂ ಈ ಮಹಾ ತಪಸ್ವಿಗಳೂ ಷಡಕ್ಷರೀ ಮಂತ್ರಗಳನ್ನು ಬರೆಯುವ ಉಗ್ರತಪಸ್ಸಿನಲ್ಲಿ ತೊಡಗಿದಾಗ ಈ ಕಾರ್ಯಕ್ಕೆ ತೊಡಗಿ ಇಂದಿಗೆ ಹನ್ನೊಂದು ವರ್ಷಗಳಾದವೆಂದು ಮಹಾಸ್ವಾಮಿಗಳಿಂದಲೇ ತಿಳಿದು ಪರಮ ಆನಂದವಾಯಿತು. ಈ ಅವಧಿಯಲ್ಲಿ ಒಂದುಕೋಟಿ ತೊಂಬತ್ತೊಂದುಲಕ್ಷ ಮಂತ್ರಗಳನ್ನು ಬರೆದು ಮುಗಿಸಿದ್ದು ಘನ ಘೋರವಾದ ತಪಸ್ಸು. ಸಾಮಾನ್ಯರಿಂದ ಸಾಧಿಸತಕ್ಕ ಮಾತು ಇದಲ್ಲ. ಅಸಮಾನ್ಯರಿಂದಲೇ ಸಾಧಿಸುವ ಅಸದೃಶಕಾರ್ಯ. ಅಂತೆಯೇ ಅನನ್ಯ ಭಕ್ತಿಯಿಂದ ಕೂಡಿದ ಈ ಅದ್ಭುತಕಾರ್ಯ 76 ವರುಷ ವಯಸ್ಸಿನ ಮಹಾಶಿವಯೋಗಿಗಳಿಂದ ಸಾಧ್ಯವಾಗಿದೆ. ಎಷ್ಟೇ ಕೃಶವಾಗಿದ್ದರೂ ಶಿವಯೋಗಿಗಳ ಕಾಯವು ಪುಟಕ್ಕೆಹಾಕಿದ ಚಿನ್ನದಂತೆ ಚೊಕ್ಕವಾಗುತ್ತ ನಡೆದಿದೆ. ಇನ್ನೂ ಹನ್ನೆರಡು ಲಕ್ಷಗಳಷ್ಟು ಮಹಾಮಂತ್ರಗಳನ್ನು ಬರೆದು ಮುಗಿಸಿದರೆ ಮಹಾಶಿವಯೋಗಿಗಳ ಈ ಮಹತ್ಕಾರ್ಯದ ಒಂದು ಮಹತ್ವದ ಹಂತ ಪೂರೈಸಿದಂತಾಗುತ್ತದೆ. ಈ ಕಾರ್ಯದಿಂದ ಅಂತರಂಗ ಬಹಿರಂಗ ಶುದ್ಧಿಗಳೆರಡನ್ನೂ ಮಾಡಿಕೊಂಡು ಈ ಭೂಸ್ವರ್ಗದಲ್ಲಿ ಶಿವಯೋಗಿಗಳು ಜೀವನ್ಮುಕ್ತರಾಗಿದ್ದಂತೆಯೇಸರಿ. ಪರಮಾತ್ಮನು ನಮ್ಮ ಪೂಜ್ಯಪಾಲರಿಗೆ ಇಂತಹ ಇನ್ನೂ ಅನೇಕ ಪವಾಡಗಳನ್ನು ಮಾಡುವ ಶಕ್ತಿಯನ್ನು ಆಯುರಾರೋಗ್ಯಗಳನ್ನು ಕೊಡಲೆಂದು ಅತನಲ್ಲಿ ಅನನ್ಯ ಭಕ್ತಿಯಿಂದ ಹಾರೈಸುತ್ತೇನೆ.

Sd) ಗುದ್ಲೆಪ್ಪ ಹಳ್ಳಿಕೇರಿ
ಹುಬ್ಬಳ್ಳಿ M.L.C.

ಸುತ್ತೂರು ವೀರಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳವರು ಒಂದು ಕೋಟಿ ಶ್ರೀ ಷಡಕ್ಷರ ಮಹಾಮಂತ್ರಲೇಖನ ದೀಕ್ಷೆಯನ್ನು ತಳೆದು ಲೋಕಕಲ್ಯಾಣಾರ್ಥವಾಗಿ ನಿರ್ವಹಿಸಿ ಕೃಪೆತೋರಿ ಆಸ್ತಿಕರೆಲ್ಲರಿಗೂ ಪರಮಾನುಗ್ರಹಮಾಡಿದ್ದಾರೆ ಆಸ್ತಿಕತೆಯೂ, ದೈವಭಕ್ತಿಯೂ ಇಳಿಮುಖವಾಗುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ ಈ ಅನುಗ್ರಹವು ಅಮೂಲ್ಯವೆಂದು ಅತ್ಯಂತ ಸ್ಫೂರ್ತಿದಾಯಕವೆಂದೂ, ಧಾರಾಳವಾಗಿ ಹೇಳಬಹುದು. ಶ್ರೀಗಳವರ ಅಧಿಷ್ಠಾತೃತ್ವದಲ್ಲಿ ಮತ್ತು ಶ್ರೀ ಶ್ರೀಗಳವರ ಶಿಷ್ಯೋತ್ತಮರಾದ ಶ್ರೀ ಶ್ರೀ ರಾಜೇಂದ್ರ ಮಹಾಸ್ವಾಮಿಗಳವರ ದಕ್ಷತಮವಾದ ಮತ್ತು ವಿಚಕ್ಷಣವಾದ ಆಡಳಿತದಲ್ಲಿ ನಡೆಯುತ್ತಿರುವ ವಿದ್ಯಾದಾನ, ಅನ್ನದಾನ ಮುಂತಾದ ಲೋಕೋಪಕಾರ್ಯಗಳೂ, ಸಾಂಸ್ಕೃತಿಕ ಕಾರ್ಯ ಕಲಾಪಗಳೂ, ಆಧ್ಯಾತ್ಮಿಕಸಮಾರಂಭಗಳೂ, ಸಮಸ್ತಜನಾಂಗಗಳೂ ಹೆಮ್ಮೆಪಡುವಂತಿದೆಯೆಂದರೆ ಅದರಲ್ಲಿ ಲೇಶಮಾತ್ರವೂ ಅತಿಶಯೋಕ್ತಿಯಲ್ಲ. ಗುರುಶಿಷ್ಯರಾದ ಉಭಯ ಶ್ರೀ ಶ್ರೀಗಳವರ ತಪಸ್ಸಿನ ಜ್ಞಾನಾನುಭವಗಳ ಮತ್ತು ಪರಮಾನುಗ್ರಹದ ಪರಿಣಾಮವಾಗಿ ಸಮಾಜಕ್ಕೆ ಸರ್ವತೋಮುಖವಾದ ಶ್ರೇಯಸ್ಸುಂಟಾಗುವಂತೆ ಪರಮಕೃಪಾಳುವಾದ ಪರಮೇಶ್ವರನು ಅನುಗ್ರಹಿಸಲೆಂಬುದೇ ಆ ದಯಾಮಯನಲ್ಲಿ ನನ್ನ ಪ್ರಾರ್ಥನೆ.

Sd) ಸಿ. ಕೆ. ವೆಂಕಟರಾಮಯ್ಯ
10-1-1962

ಓಂ ನಮಃಶಿವಾಯ ಓಂ ನಮಃಶಿವಾಯ ಓಂ ನಮಃಶಿವಾಯ
ಓಂ ನಮಃಶಿವಾಯ ಓಂ ನಮಃಶಿವಾಯ

ಈ ದಿನ ಪರಮ ಪುಣ್ಯದಿನ. ಶ್ರೀ ಪರಮ ಪೂಜ್ಯ ಜಗದ್ಗುರು ಶ್ರೀ ಸುತ್ತೂರು ಮಠದ ವೀರಸಿಂಹಾಸನಾಧೀಶ್ವರರು ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು–ಇವರ ದಿವ್ಯ ಸನ್ನಿಧಿಯ ದರ್ಶನಾಶೀರ್ವಾದದಿಂದ ಪುನೀತನಾದೆನು–ವಿರಶೈವರಿಗೆ ಅಷ್ಟಾವರಣವು ಅಂಗವಾಗಿಯೂ–ಪಂಚಾಚಾರವು ಪ್ರಾಣವಾಗಿಯೂ ಷಟ್‌ಸ್ಥಲವು ಆತ್ಮವಾಗಿಯೂ ಇರುವುವು. ಷಟ್‌ಸ್ಥಲವು ವೀರಶೈವರಿಗೆ ತತ್ವಶಾಸ್ತ್ರವಾಗಿರುವುದು. ಪಂಚಾಚಾರವು ವೀರಶೈವರ ನೀತಿಶಾಸ್ತ್ರವಾಗಿರುವುದು. ಅಷ್ಟಾವರಣವು ವೀರಶೈವರ ಸಮಾಜದ ಧರ್ಮ ಶಾಸ್ತ್ರಕ್ಕೆ ಸಂಬಂಧಿಸಿರುವುದು. ಅಷ್ಟಾವರಣಗಳಲ್ಲಿ ಗುರುಲಿಂಗಜಂಗಮ ಈ ಮೂರು ಮೂರ್ತಿಗಳು ಮುಖ್ಯರಾಗಿರುವರು-ಉಪಸ್ಯಾಸಮೂರ್ತಿಗಳಾಗಿರುವರು ಈ ಮೂರ್ತಿಗಳ ಉಪಾಸನೆಯ ಫಲಗಳೇ ಪಾದೋದಕ–ಪ್ರಸಾದಗಳು. ಈ ಫಲಗಳನ್ನು ಪಡೆಯುವ ಸಾಧನಗಳು, ವಿಭೂತಿ-ರುದ್ರಾಕ್ಷಿ ಮಂತ್ರಗಳು. ಈ ಮೂರಲ್ಲಿ ಮಂತ್ರವೇ ಮುಖ್ಯಸಾಧನವಾಗಿರುವುದು. ಈ ಷಡಕ್ಷರ ಮಂತ್ರಮೂಲವಾಗಿಯೇ ವೀರಶೈವ ಸಾಮಾಜಿಕ-ಧಾರ್ಮಿಕ ಸಂಸ್ಕಾರಗಳು ನಡೆಯುವುವು- ಈ ಷಡಕ್ಷರಮಂತ್ರವು 7 ಕೋಟಿ (ಏಳುಕೋಟಿ) ಮಹಾಮಂತ್ರಗಳಿಗೆ ಮಾತೃಸ್ಥಾನದಲ್ಲಿರುವುದು ಇಂತಹ

ಮಂತ್ರವನ್ನು ಲೇಖನ ಮೂಲಕವಾದ ಜಪಮಂತ್ರದಿಂದ ಒಂದುಕೋಟಿ ಇಪ್ಪತ್ತುಲಕ್ಷ ದವರೆಗೆ ನೆಡೆಸಿರುವ ಶ್ರೀ ಪೂಜ್ಯಪಾದರು ಲೋಕಕಲ್ಯಾಣ ಕಾರ್ಯವನ್ನು ಎಂದರೆ ವಿದ್ಯಾದಾನ ಪ್ರಸಾದದಾನ ಕಾರ್ಯಗಳೊಡನೆ ನಮ್ಮ ಸಮಾಜಕ್ಕೆ ಅಷ್ಟೆ ಅಲ್ಲ. ಅಖಿಲ ಕರ್ಣಾಟಕಕ್ಕೂ ಚಿರಸ್ಮರಣೀಯರೂ, ಪೂಜ್ಯಪಾದರೂ ಆಗಿರುವ ಇಂತಹ ತಪಸ್ವಿಗಳ ದರ್ಶನಾಶೀರ್ವಾದವು ನನ್ನಂತೆ ಅನಂತ ಭಕ್ತರಿಗೆ ಬಹುಕಾಲ ಲಭಿಸುವಂತೆ ಕೃಪೆಮಾಡಲೆಂದು ದಯಾಘನನಾದ ಪರಮಾತ್ಮನನ್ನು ಪ್ರಾರ್ಥಿಸುವೆನು.

ತಾ॥ 1-10-57 Sd) ವೈ. ನಾಗೇಶಶಾಸ್ತ್ರಿ
ಸುತ್ತೂರು ಮೈಸೂರು ಆಸ್ಥಾನವಿದ್ವಾನ್

ಶ್ರೀ

ಓಂ ನಮಃಶಿವಾಯ ಓಂ ನಮಃಶಿವಾಯ ಓಂ ನಮಃಶಿವಾಯ

ಹೀಗೆಯೇ ಮುಂದಕ್ಕೆ ಸುಮ್ಮನೆ ಬರೆಯುತ್ತಲೇ ಹೋಗೋಣವೆನ್ನಿಸುತ್ತದೆ. ಯಾಕೆಂದರೆ ಲೋಕದಲ್ಲಿ ಇದಕ್ಕಿಂತ ಹೆಚ್ಚು ಮಂಗಳಕರವೂ, ಪುಣ್ಯಕರವೂ. ಶಾಂತಿ ದಾಯಕವೂ, ಆದ ಕಾರ್ಯ ಬೇರೊಂದೂ ಇಲ್ಲ.

ಇಂದಿನ ಜಗತ್ತಿನಲ್ಲಿ ನಾವು ದೇವರಿಗೆ ಪೆನ್‌ಷನ್ ಕೊಡಲು ಪ್ರಯತ್ನಿಸುತ್ತಿದ್ದೇವೆ. ಆದರೆ "ತೇನವಿನಾತೃಣಮಪಿನಚಲತಿ" ಈ ಸತ್ಯವನ್ನು ಈ ಲೋಕದಲ್ಲಿ ತಪಸ್ವಿಗಳು ಪದೇ ಪದೇ ಸಾರಿದ್ದಾರೆ. ಶ್ರೀ ಸುತ್ತೂರು ಸಿಂಹಾಸನಾಧೀಶ್ವರರು ಈ ಮಾರ್ಗದಲ್ಲಿ ಅಗ್ರಗಣ್ಯರು. ಇವರ ದರ್ಶನಮಾಡುವುದು ಕ್ಷೇತ್ರಸಂದರ್ಶನ.

ಶ್ರೀಗಳವರು ಷಡಕ್ಷರೀ ಮಂತ್ರವನ್ನು ಒಂದು ಕೋಟಿ ಮೂವತ್ತು ಲಕ್ಷ ಆವೃತ್ತಿ ಬರೆದಿರುವುದನ್ನು ನೋಡಿದ ಹೊರತು ನಂಬುವುದಕ್ಕೆ ಆಗುವುದಿಲ್ಲ, ನೋಡಿದ ಮೇಲೆ ಈ ಅದ್ಭುತ ಸಾಧನೆ ಸಚ್ಚಲ ಇದರ ಎದುರಿಗೆ ಅದ್ಭುತ ಶಕ್ತಿ ಅಥವಾ ಹಿಮಾಲಯದ ಎದುರಿಗೆ ನಿಲ್ಲುವಂತೆ ಮಂಕಾಗಿ ನಿಲ್ಲುತ್ತೇವೆ. ಅನಂತರ ನಿಧಾನವಾಗಿ ಅರಿವಾಗುತ್ತದೆ ಈ ತಪಸ್ವಿಗಳ ದೇಹದಲ್ಲಿ ಕೆಲಸಮಾಡುತ್ತಿರುವುದು ಇವರ ಅಂತರಾತ್ಮದಲ್ಲಿರುವ ಸಮ್ಯಮ ನಿಷ್ಠೆಗಳ ಶಿವನೆ ! ಎಂಬುದು.

ಮಂತ್ರಿಗಳ ಮಹಿಮೆ ಜನರಿಗೆ ಮರೆಯುತ್ತಿರುವ ಈ ನಾಸ್ತಿಕ ಯುಗದಲ್ಲಿ ಶ್ರೀಗಳವರು ಮಾಡಿರುವ ಕೋಟಿ ಮೂವತ್ತು ಲಕ್ಷ ಮಂತ್ರಜಪ ಜಗತ್ತಿಗೆ ಮತ್ತೆ ಮಂತ್ರಮಹಿಮೆಯನ್ನು ಎತ್ತಿ ತೋರಿಸುತ್ತಿದೆ. ಇದು ಬರಿಯ ಬಾಹ್ಯ ಕ್ರಿಯೆ ಅಲ್ಲ, ಪ್ರತಿ ಅಕ್ಷರದಲ್ಲಿಯೂ ಪರಮಾತ್ಮನಲ್ಲಿ ಪೂರ್ಣಲೀನತೆ ನಿಜವಾದ ಭಕ್ತಿ, ಜೊತೆಗೆ ಶ್ರೀಗಳವರು ಪಾಮರರಿಗೆ ಅರ್ಥವಾಗುವಂತೆ ಸುಲಭ ಶೈಲಿಯಲ್ಲಿ ಷಡಕ್ಷರ ಮಂತ್ರದ ಮಹಿಮೆಯನ್ನು ಅನೇಕ ಉದಾಹರಣೆಗಳೊಡನೆ ತಾವು ಬರೆದಿರುವ ಗ್ರಂಥದಲ್ಲಿ ನಿರೂಪಿಸಿದ್ದಾರೆ. ಇದರಿಂದ ಈ ಗ್ರಂಥವನ್ನು ನೋಡುವವರಲ್ಲಿ ಸನ್ಮಾರ್ಗಪ್ರೇರಣೆಯೂ ಭಗವದ್ಭಕ್ತಿಯೂ ಉಂಟಾಗಲು ಸಹಾಯವಾಗುವುದು.

ಈ ಸಂಸ್ಥೆಯನ್ನು ಶ್ರೀಗಳ ತಪಃಪ್ರಭಾವ ಅನಾಶಕ್ತಿ ಇವು ನಡೆಸುತ್ತಿವೆ. ಶಿವ ಭಕ್ತಿ, ಲಕ್ಷ ಜನ ಮಾಡಲಾಗದ ಕಾರ್ಯಮಾಡುತ್ತದೆ. ಯಾವುದು ಸಾಮಾನ್ಯ ಜನರಿಗೆ ನಿರಪಯುಕ್ತವಾಗಿ ತೋರುವುದೋ ಅದೇ ಲೋಕಕ್ಕೆ ಕಲ್ಯಾಣಮಾಡುತ್ತದೆ. ಹರಿಶ್ಚಂದ್ರ ರಾಜ್ಯವನ್ನು ವಿಶ್ವಾಮಿತ್ರನಿಗೆ ಕೊಟ್ಟುದು, ಸಾಮಾನ್ಯರಿಗೆ ಹೆಡ್ಡತನವಾಗಿ ತೋರುತ್ತದೆ ಆದರೆ ಜಗತ್ತಿಗೆ ಕಲ್ಯಾಣವಾಗಿರುವುದು ಅದರಿಂದಲೇ. ಶ್ರೀಗಳವರು ಬರೆದಿರುವ ಎರಡು ಆಳು ಹೊರಬೇಕಾದ ಇಪ್ಪತ್ತೆರಡು ವಾಲ್ಯೂಮ್ (Volume) ಶಿವಮಂತ್ರ, ಮಾಡಿದ್ದಕ್ಕೆಲ್ಲ ಪ್ರತಿಫಲ ಬೇಕೆನ್ನುವ ಆಧುನಿಕನಿಗೆ ಬರಿಯ ವ್ಯರ್ಥವಾಗಿ ತೋರಿದರೂ ತೋರಬಹುದು. ಆದರೆ ಈ ಜಗತ್ತು ಉಳಿದಿರುವುದು, ಈ ಜಗತ್ತಿನ ಕಲ್ಯಾಣವಾಗುತ್ತಿರುವುದು ಇದರಿಂದ. ಇದು ಅಣುಬಾಂಬಿಗಿಂತ ಹೆಚ್ಚು ಶಕ್ತಿ. ಆದರೆ ಅಣುಬಾಂಬು ನಾಶಮಾಡುತ್ತದೆ. ಶಿವನಾಮ ರಕ್ಷಣೆ ಕೊಡುತ್ತದೆ.

ಇಂತಹ ಸಂಸ್ಥೆಗಳನ್ನು ನೋಡುವುದರಿಂದ ಭಾರತದ ಹಿನ್ನೆಲೆ ಋಷಿಗಳ ಧರ್ಮ. ಆಶ್ರಮ, ಸತ್ಯ ಇವು ಜ್ಞಾಪಕಕ್ಕೆ ಬಂದು ನಿಜವಾದ ಭಾರತ ಹೃದಯ ಇಲ್ಲಿರುವುದು ಕಾಣುತ್ತದೆ. ಇಲ್ಲಿಯ ವಿದ್ಯಾರ್ಥಿಗಳಿಗೆಲ್ಲಾ ಈ ಸ್ಫೂರ್ತಿ ಚಿರಕಾಲ ಇರಲಿ. ಶ್ರೀಗಳು ಚಿರಕಾಲ ಇಲ್ಲಿ ತಪಸ್ಸು ಮಾಡುತ್ತಾ ದೇಶವನ್ನು ಹರಸಿರಿ.

ಓಂ ನಮಃಶಿವಾಯ

(sd) ಗೊರೊರು ರಾಮಸ್ವಾಮಿ ಅಯ್ಯಂಗಾರ್
ಎಂ. ಶಂಕರಯ್ಯ
ಲೋಕಸಭಾ ಸದಸ್ಯ
ಮೈಸೂರು ನಗರ

ಸುತ್ತೂರು
ತಾ॥ 31-1-59

ಶ್ರೀ ಶ್ರೀ ಸುತ್ತೂರುಮಠದ ಸಿಂಹಾಸನಾರೂಢರಾದ ಶ್ರೀ ಜಗದ್ಗುರು ಶಿವ ರಾತ್ರೀಶ್ವರ ಮಹಾಸ್ವಾಮಿಗಳ ಸುದರ್ಶನವು ಲಭಿಸಿದ ಇಂದಿನ ದಿನ ನನ್ನ ಜೀವ ಮಾನದ ಒಂದು ಪುಣ್ಯದಿವಸವಾಗಿ ನಾನು ಪರಿಗಣಿಸಿದ್ದೇನೆ. ಈ ಅದ್ಭುತವಾದ ಶ್ರೀಮಠದ ಅಂಗವಾಗಿ ಮಹಾಸ್ವಾಮಿಗಳು ಅನೇಕ ಆದರ್ಶಕವಾದ ಪುಣ್ಯ ಕಾರ್ಯ ಗಳನ್ನು ಕೈಗೊಂಡಿದ್ದಾರೆಂಬುದನ್ನು ಕೇಳಿ ನನಗೆ ಮನಸ್ಸಂತೋಷವೂ ಮತ್ತು ಒಂದು ವಿಧವಾದ ಹೆಮ್ಮೆಯೂ ಉಂಟಾಗಿದೆ. ನಮ್ಮ ಈ ನಾಡಿನಲ್ಲಿ ಇಂತಹ ಸುಕೃತಂಗಳನ್ನು ಕೈಗೊಂಡಿರುವ ಮಹಾತ್ಮರು ಜನಿಸಿ ತಮ್ಮ ತಪೋಬಲದಿಂದ ದೇಶೋದ್ಧಾರಕವಾದ ಮಹತ್ಕಾರ್ಯಗಳನ್ನು ನಿರ್ವಿಘ್ನವಾಗಿ ನೆರವೇರಿಸುತ್ತಿರುವುದು ನಮ್ಮ ಕರ್ನಾಟಕ ನಾಡಿಗೆ ಒಂದು ಹೆಮ್ಮೆ. ಎರಡು ಸಹಸ್ರಕ್ಕೆ ಮೇಲ್ಪಟ್ಟ ನಾನಾ ಕೋಮಿನ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ಅನುಕೂಲವನ್ನು ಕಲ್ಪಿಸುತ್ತಿರುವ ಶ್ರೀ ಸ್ವಾಮಿಗಳಿಗೆ ಭಗವಂತನು ಅನಂತವಾದ ಆಶೀರ್ವಾದಗಳನ್ನು ಕಲ್ಪಿಸಲಿ. ಶ್ರೀ ಶ್ರೀಗಳವರಿಗೆ ಆಯುರಾರೋಗ್ಯಗಳನ್ನು ಕಲ್ಪಿಸಲಿ.

ಶ್ರೀ ಶಿವಮಂತ್ರವನ್ನು ಸ್ವಹಸ್ತದಿಂದ ನದಿಯೋಪಾದಿಯಲ್ಲಿ ತಂಡತಂಡವಾಗಿ ಕೋಟ್ಯಾಂತರ ಸಾರಿ ಬರೆದ ಹಸ್ತವನ್ನು ಭಗವಂತನು ಸ್ವರ್ಣಹಸ್ತವನ್ನಾಗಿ ಮಾಡಿ, ಈ ಕೈಗಳು ಪ್ರಪಂಚದ ಏಳಿಗೆಗೆ ದುಡಿದು ಮಾನವ ವರ್ಗವನ್ನು ಆಶೀರ್ವದಿಸಲೆಂದು ಸದಾ ಹಾರೈಸುತ್ತೇನೆ.

ಈ ಸಂಸ್ಥೆಯಲ್ಲಿ ಶ್ರೀ ಶ್ರೀ ಶಿವರಾತ್ರಿರಾಜೇಂದ್ರ ಮಹಸ್ವಾಮಿಗಳವರು ನಿರಂತರವಾಗಿ ದೇಹಶ್ರಮಪಡುತ್ತಿರುವುದು ಒಂದು ಮಹತ್ತರವಾದ ವಿಶಯ. ಭಗವಂತನು ಶ್ರೀ ಶ್ರೀ ಶಿವರಾತ್ರೀಶ್ವರಮಹಾಸ್ವಾಮಿಗಳ ಇಚ್ಛೆಯನ್ನು ಪೂರೈಸುವುದರಲ್ಲಿ ನಿರತರಾದ ಶ್ರೀ ಚಿಕ್ಕಸ್ವಾಮಿಗಳವರ ದೇಶೋದ್ಧಾರದ ಕೆಲಸವು ಅಡಚಣೆ ಇಲ್ಲದೆ ಜರುಗಲೆಂದು ಶ್ರೀ ಗಣೇಶನನ್ನು ಹಾರೈಸುತ್ತೇನೆ.

ಓಂ ನಮಃ ಶಿವಾಯ

(sd) ಕೆ. ಕಡಾಂಬಿ
ಚೀಫ್ ಕನ್ಸರ್‌ವೇಟರ್ ಆಫ್ ಫಾರೆಸ್ಟ್
ಇನ್ ಮೈಸೂರು–ಬೆಂಗಳೂರು

ಸುತ್ತೂರು
ತಾ|| 22-5-60

ನಾನು ಅನೇಕ ವೇಳೆ ಪುರಾತನವೂ, ಇತಿಹಾಸಪ್ರಸಿದ್ಧವೂ ಮತ್ತು ಪುಣ್ಯಕ್ಷೇತ್ರವೂ ಆದ ಸುತ್ತೂರು ಮಹಾಸಂಸ್ಥಾನಕ್ಕೆ ಹೋಗಿ, ವೀರಸಿಂಹಾಸನಾಧೀಶ್ವರರಾದ ಶ್ರೀ ಶ್ರೀ ಜಗದ್ಗುರು ಶಿವರಾತ್ರೀಶ್ವರ ಮಹಾಸಾಮಿಗಳವರ ಮತ್ತು ಶ್ರೀ ಶ್ರಿ ಜಗದ್ಗುರು ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರ ದರ್ಶನಾಶೀರ್ವಾದಗಳಿಂದ ಪುಣ್ಯಫಲಗಳನ್ನು ಪಡೆದಿದ್ದೇನೆ.

ಶ್ರಿ ಹಿರಿಯಜಗದ್ಗುರುಗಳವರು ಆದರ್ಶಶಿವಯೋಗಿಗಳು ಪವಾಡಪುರುಷರು ಮತ್ತು ಮಹಾ ವಿಭೂತಿಗಳು ಶ್ರೀ ಜಗದ್ಗುರುಗಳವರು ಸಮಾಜದ ಕಲ್ಯಾಣಕ್ಕೆ ದಿನವಹಿ ಮಾಡುತ್ತಿರುವ ಕಾರ್ಯಗಳು ಕಲ್ಪನಾತೀತವಾಗಿವೆ.

ದಾನಗಳಲ್ಲಿ ಅನ್ನದಾನವೇ ಶ್ರೇಷ್ಠ ಎಂದು ಕೆಲವರ ಮತ ಇನ್ನು ಕೆಲವರು ವಿದ್ಯಾದಾನವೇ ಶ್ರೇಷ್ಠವೆಂದು ಅಭಿಪ್ರಾಯಪಡುತ್ತಾರೆ. ಇವೆರಡು ದಾನಗಳನ್ನು ಏಕಕಾಲದಲ್ಲಿಯೇ ಸಹಸ್ರಾರು ಜನ ಶಿಷ್ಯರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ ಒದಗಿಸುತ್ತಿರುವ ಶ್ರೀ ಜಗದ್ಗುರುಗಳವರ ಪವಾಡವನ್ನು ಎಷ್ಟು ವರ್ಣಿಸಿದರೂ ತೀರದು.

ಹನ್ನೆರಡನೆಯ ಶತಮಾನದಲ್ಲಿ ಶ್ರೀ ಬಸವೇಶ್ವರರು ಭೋದಿಸಿದ ಮತ್ತು ಆಚರಿಸಿದ ತತ್ವಗಳನ್ನೇ ಭೋದಿಸುತ್ತಾ ಮತ್ತು ಆಚರಿಸುತ್ತಾ ಅಭಿನವ ಬಸವೇಶ್ವರರಂತೆ ಪ್ರಚಲಿಸುತಿದ್ದಾರೆ. ಅಲ್ಲದೆ ಜಾತ್ಯಾತೀತ, ಸಮಾಜ ಮತ್ತು ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ತೊಡಗಿ ಅದಕ್ಕೆ ಸುಭದ್ರವಾದ ಮತ್ತು ಶಾಶ್ವತವಾದ ಅಸ್ತಿಭಾರವನ್ನು ಹಾಕುತ್ತಿದ್ದಾರೆ.

ಎಲ್ಲದಕ್ಕೂ ಮಿಗಿಲಾಗಿ ಇಹಪರಸಾಧನೆಗೆ ಅವಶ್ಯಕವಾದ ಲೌಕೀಕ ಮತ್ತು ಾರಮಾರ್ಥಿಕ ವಿದ್ಯೆಗಳೆರಡಕ್ಕೂ ಪ್ರೋತ್ಸಾಹವೀಯುತ್ತಾ ಶಿಷ್ಯ ಕೋಟಿಯ ಕಲ್ಪ ೃಕ್ಷದಂತೆ ರಾರಾಜಿಸುತ್ತಿದ್ದಾರೆ.

ಕಾಯಕವೇ ಕೈಲಾಸ, ಜನಸೇವೆಯೇ ಜನಾರ್ಧನನ ಸೇವೆ. ಎಂಬ ತತ್ವದ ುರ್ಮವನ್ನರಿತು ವಿಸ್ತಾರವಾದ ಲೋಕ ಕಲ್ಯಾಣಕಾರಕವಾದ ಕಾರ್ಯರಂಗದಲ್ಲಿ ತೊಡ ದ್ದಾರೆ.

ಪರಮ ಪೂಜ್ಯರೂ, ತಪೋನಿಧಿಗಳೂ ಆದ ಹಿರಿಯ ಜಗದ್ಗುರುಗಳವರು ೋರತರವಾದ ತಪಸ್ಸನ್ನಾಚರಿಸುತ್ತಾ ತಮ್ಮ ಅನ್ಮೃತ ಹಸ್ತದಿಂದ ಒಂದು ಕೋಟಿ ಪ್ಪತ್ತೈದುಲಕ್ಷಕ್ಕಿಂತ ಹೆಚ್ಚಾಗಿ ಷಡಾಕ್ಷರೀ ಮಂತ್ರವನ್ನು ಬರೆಯುವುದರ ಮೂಲಕ ಶ್ವ ಶಾಂತಿ ಮತ್ತು ಲೋಕ ಕಲ್ಯಾಣಕ್ಕೆ ಕಾರಣರಾಗಿದ್ದಾರೆಂಬುದು ಮಂತ್ರದ ಮಹಿ ುೆಯನ್ನು ತಿಳಿದವರಿಗೆಲ್ಲಾ ಗೊತ್ತು. ಶಿಷ್ಯಕೋಟಿಯ ಉದ್ಧಾರವೇ ಶ್ರೀ ಜಗದ್ಗುರು ವರಾತ್ರೀಶ್ವರರ ಷಡಾಕ್ಷರಿ ಮಂತ್ರದ ಗೂಢಾರ್ಥ.

ಇವರ ಅಮೂಲ್ಯ ತಪಸ್ಸಿನ ಫಲವಾಗಿ ಜಗತ್ತಿನಲ್ಲಿ ಶಾಂತಿ, ಶಿಸ್ತು ಸೌಹಾರ್ದ ುತ್ತು ಸರ್ವಧರ್ಮ ಸಹಿಷ್ಣುತೆಗಳು ಶಾಶ್ವತವಾಗಿ ನೆಲಸಿ ತನ್ಮೂಲಕ ಮಾನವಕೋಟಿ ಯ ಉದ್ಧಾರವಾಗಲೆಂದು ಪ್ರಾರ್ಥಿಸುತ್ತೇನೆ.

ಹೆಚ್. ಎಸ್. ಪಾಳೈಗಾರ್.<br>ಮೈಸೂರು ಶ್ರೀಮನ್ ಮಹಾರಾಜರವರ<br>ನಿವೃತ್ತ ಕಾರ್ಯದರ್ಶಿ<br>ತಾ|| 2-10-1961

ಓಂ ನಮಃ ಶಿವಾಯ. ಓಂ. ನಮಃ ಶಿವಾಯ. ಓಂ. ನಮಃ ಶಿವಾಯ

ಪರಮ ಪೂಜ್ಯ ಶ್ರೀ ಸುತ್ತೂರು ವೀರಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಶಿವರಾತ್ರೀಮಹಾಸ್ವಾಮಿಗಳವರು ಹನ್ನೆರಡುಲಕ್ಷ ಪರಮ ಪವಿತ್ರವಾದ ಷಡಕ್ಷರ ಮಹಾ ಮಂತ್ರವನ್ನು ಇಪ್ಪತ್ತೆಂಟುಸಹಸ್ರ ದೇವೀ ನವಾರ್ಣವ ಮಂತ್ರವನ್ನೂ....ಮುತ್ತಿನಂತಹ ಮುದ್ದಾದ ಅಕ್ಷರಗಳಲ್ಲಿ ಬರೆದಿರುವುದನ್ನು ನೋಡಿ ಅತ್ಯಂತ ಸಂತೋಷವಾಗಿದೆ. ಮನಸ್ಸಿನ ಏಕಾಗ್ರತೆಗಾಗಿ ಅತಿ ಮುಖ್ಯವಾದ ಮಂತ್ರಲೇಖನವನ್ನು ಯಶಸ್ವಿಯಾಗಿ ಮುಗಿಸಿ ಸದರಿ ಗ್ರಂಥಗಳನ್ನು-ದಿನಾಂಕ-ಇಪ್ಪತ್ತಮೂರು-ಹನ್ನೊಂದು ಐವತ್ತನಾಲ್ಕ ರಲ್ಲಿ (23-11-54) ಭಗವಾನ್ ಶ್ರೀ ಮಂಜುನಾಥಸ್ವಾಮಿ ಸನ್ನಿಧಿಯಲ್ಲಿರಿಸಿ ಪೂಜಿಸಿ, ಸಮಾಪ್ತಿಗೊಳಿಸಿರುವುದು ಅತ್ಯಂತ ಮಹತ್ವವಾದ ಅಂಶವಾಗಿರುತ್ತದೆ ಹನ್ನೆರಡು ಲಕ್ಷ ಮಹಾಮಂತ್ರ ಲೇಖನದ ಪುಣ್ಯಕಾರ್ಯವು-ಪವಿತ್ರವಾದ ಈ ಧರ್ಮಕ್ಷೇತ್ರದಲ್ಲಿ ಮುಕ್ತಾಯಗೊಂಡಿರುವುದು ಮಹತ್ವದ ವಿಷಯ.

ಶ್ರೀ ಮಂಜುನಾಥಸ್ವಾಮಿಯವರ ಲಕ್ಷದೀಪೋತ್ಸವದ ಸಂದರ್ಭದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದ ಅಧ್ಯಕ್ಷತೆವಹಿಸಿ ಪೂಜ್ಯಮಹಾಸ್ವಾಮಿಯವರು ಆಧ್ಯಾತ್ಮ ತತ್ವದಮೇಲೆ ಅಮೋಘ ಸಂದೇಶವನ್ನು ಇತ್ತುದು ಈ ಮಹಾಮಂತ್ರ ಸಿದ್ಧಿ ಎಂದು ಮನಗಾಣುವಂತಿತ್ತು. ಆಧ್ಯಾತ್ಮಯೋಗದಲ್ಲಿ ತೊಡಗಿರುವ ಅಂಧಕರಿಗೆ ಇದು ಮಾರ್ಗ ದರ್ಶಕವಾಗಿದೆ. ಜಗದ್ಗುರುಗಳ ತಪಸ್ಸಿನ ಪ್ರಭೆ ನಾಡಿನಲ್ಲಿ ಹರಡಿ ಜನತೆಯನ್ನು ಉದ್ಧರಿಸಲೆಂದು ಪ್ರಾರ್ಥಿಸುತ್ತೇನೆ.

Sd) Manjanatha Heggade

ಶ್ರೀ ಧರ್ಮಸ್ಥಳ 26-11-54

It gave me much pleasure to visit the Sanskrit Patasala and free-boarding home started under the auspices of Kyatanahalli Sowkar Siddalingaiah and the Sri Swami of Suttur Mutt. The students gave some recitations from Purushasukta and Maharudra and some Sanskrit Kavyas and acquinted themselves creditably. They are undergoing good vydika Training under competent teachers. The boys are taught free and they get free-boarding and lodging. The building provides full accommodation for all purposes. The students' rooms are spacious and well ventilated. The kitchen arrangements are excellent. The whole place breathes an air of cleanlines and being the mark of good management. under the immediate supervision of the Sri Swami of Suttur Mutt.,who spends the greater parts of his time in supervising the affairs of the institution and looking after the students who now number 40. I was pleased to learn that the institution has got a cash endowment of Rs. 30,000 and an annual contribulion of

.00 pallas of paddy from the Suttur Mutt. It is very creditable to the organisers that such a school has been started with a free-boarding home in the capital city of Mysore. It shows the great value they attach to the education in sanskrit and teaching of vadas and Upanishads to the Veerashaiva students. I found the students clean and bright and cheerful. I wish the institution every success. It deserves encourage ment from the Muzrai Department in a libera- measure.

Date. 6th October 1935 Sd) K.P. Puttanna Setty
Mysore,

Sri Swamigalu of Suttur Mutt was kind enough to invite me to visit the Sanskrit Patashala which is being conducted by him in this capital city. To-day, I visited the institution along with Mr. Basavalingappa and it was reallya great pleasure to me to see the students who conducted themselves very well in the recitation of vedic passage and their respective subjects taught in their classes. The students are very keen and eager no less than their teachers and Swamiji himself is having a personal supervision over the conduct and training of the boys. The Swamiji out of his benificence, is himself meeting all the boarding and teaching expenses and resides here during the great part of the year. The Swamiji's generous gift in this connection has been suitably recognised by our beloved His Higness the Maharaja who has been pleased to bestow on the Swamiji a public service medal in the last Dasara Durbar. The Instituion is in a flourishing condition and dese-

rves all possible encouragement at the hands of the Muzrai Deparment. I wish it all success.

Sd) M. Lingaraja Urs
Retd. Muzrai Bhakshi
Date 20-11--35

The Sri Swamiji of Suttur received me with delightful hospitality. I was very glad to see the good work he has done both for the mutt and for the temples and sculptures of the place. The way he has preserved the sculptures and image of the Sri Someswara Temple is praiseworthy. It would have been better if the old structure had been saved with the sculptures in their proper places. However the Swami deserves congradulation of what he has been able to do.

Sd) M.H.Krishna
Date. 18-9-43 Director of Archaeology

It gives me great pleasure to record my impressions of the Suttur Mutt which I visit to-day for the hundredth time. It treaces its origin to remote antiquity. The Swamiji who is the very soul of the Institution possess a fascinating personality and enormous influence over his Shishyvarge. The administration of the Mutt is carried on in a highly fficient manner and it would not be an exaggaration to say that the Mutt is a model to all other similar !nstitutions in the state-combining in himself a rare spiritual power and world by practicals. The Swamiji is entirely responsible for achieving the present material prosperity to the mutt and securing the homage

of a great number of Sishyas in the community. The institution itself is kept in proper time and the whole atmosphere is suffused with ineffable beauty and sprituality, I have no hesitation in hoping that the institution inspired by such ideals and backed up by such sound financial resources as at present bids fair to become a pre-eminent mutt in the entire state. The mass feeding that is undertaken and the fostering of many a charitable institutions by the mutt are among the things that deserve special mention. It is a hopeful augmy for the mutt that the Junior Swami Sri Shivaratri Rajendra Swamigalu who is learned and intelligent will carry on the torch of spirituality with undeminished vigour. Pray the institutions prosper and attain every widening popularity and usefulness.

Sd) B. S. Puttaswamy
28-12-1943 Public Service Commissioner

The Swamiji very kind by took me round the mutt at Suttur. His generosity and the abiding interest he takes in the well being of the mutt and the institutions maintained by it are admirable.

(sd) Tamboo Chetty
Private Secretary to His
28-11-1945 Highness the Maharaja of
Mysore

I have the good fortune of knowing and receiving the blessings of His Holiness the Swamijis, Senior and Junior of the ancient Suttur Mut, established about 1000 B.C. The Suttur Mutt is therefore

one of the most farword mutts of the Mysore State. Its influence over all classes of people is very great, and all people intellectuals and others, have great reverance to the two Swamijis.

The Senior Swamiji has achieved the great sadhana of writing Japa of the Shadakshara Maha Mantra of I crore and eightytwo lakhs. Every day, for seventeen hours His Holiness is seated writing the mantrs and he writes not less than six thousand Mantras per day. Uttering God's name in the simple and exacted union which is the tradition of this mutt. All those who have darshan of the Swamijis will realise it.

The Suttur Mutt has also the tradition of working for the Education and enlightenment of the younger generation. It maintains two colleges one for men and another for women in Basic Education. It seems 3 high schools and several hostels in Mysore City and outside, and about 2400students receive education,free meals etc. and the two Swamijis are guardians to them; all the problems and worries are brought to the Swamijis who attend to them with loving care.

The Suttur Mutt has not only provided facilities for the education of the modern students. It has also taken care of our classical learning by providing for Sanskrita education in their Patasala.

The Suttur Mutt is the invisible Kingdom of faith and righteousness reigning over man's minds and hearts.

I may add a final word about the Junior Swamiji Sree Shivaratri Rajendra Swamiji, who is the dynamic spirit behind all the activities of the Suttur Mutt. There is a glory and lustre in his face signifying spiritual attainment. The Swamiji has a sympathetic understanding of men and is always eager to help whoever comes to him. He is the friend, philosopher and guide to all these, especially the young and youthful students at all ages, who flock to him unceasingly day and night. The junior Swamiji labours for them. Spiritual insight practical wisdom, great executive ability are some of the qualities which strike any body who comes in contact with him. It has been my good fortune to have come into close contact with Junior Swamiji and I hold him in the greatest reverence. May Junior Swamiji live long and continue to carry out the great traditions of the ancient Suttur Mutt.

(sd) N. A. Nikam
Vice-chancellor
Mysore University

date 6-11-1961

—§—

I had the privilege of visiting the Suttur Mutt and having the pleasure of meeting the Swamiji. I had growing accounts from many sources, but all combined to the disciples of the mutt and its activities. All that I need say is that I found none of these accounts in any way exaggerated. The mutt, the temple and all the surroundings both physical and spiritual are calculated to inspire and devote. The Swamiji is a great savant who compels respect and

admiration by his learning, simplicity and spirit of service. With facts deep in the past tradition of religious, and cultural India, with an out look as modern as may be desired, the Swamiji is a shining example of a Matadhipathi. I wish the institution many happy years of utility and progress.

sd) A. Ramaswami Mudaliar

sd) K. T. Bhashyam June I949

During my stay at mysore in connection with the Dasara festival and the Dasara Session of the R. A. I paid a visit to Sri Suttur Mutt on the 22nd October 1948 which is about 7 miles from Nanjangud. I was received at the mutt authorities. Both the Senior and Junior Swamijis took me round the mutt and its premises and Sri Someswara Temple which is inside the mutt. I was immensely pleased to see the mutt and its premises being kept sarcpulously clean. Both the Swamijis are taking good lot of interest in the attains of this institution and are managing very efficiently. I was informed by the Swamiji that they are maintainlng about half a dozen hostels providing free-boarding lodging facilities for 500 students of whom about 100 students are receiving instructions in Sanskrit. They also gave me an idea of the income and expenditure of this institution which is nearly Rs. 80,000. The Swamijis are very pious self sacrifying and devoted to the service of both God and man. In case such well managed institutions increase in large number. They will have great effect on the materialistic tendencies the present day generations.

In my opinion such institutions deserve more and more encouragement both at the hands of the Government and the public.

Sd) P. Subbaray Chetty
Minister
Government of Mysore
Date. 4-12-1948 Bangalore

It gave me great pleasure to visit the Suttur Mutt on 15-7-1949 and to acquint myself with the work and progress of the institution. I was much impressed with that I saw and heard. I was particularly gratified to learn that the mutt is maintaining some students, hostels and is evincing keen interest in educational matter. May institution prosper and contribute richer to spiritual and material progress.

Sd) Changalaraya Reddy
Chief Minister
Date. 26-1-1950 Mysore Government

It is a great fortune to me to have the holy audience of Srimaniranjan Jagadguru Sri Shivarath–reswara Mahaswamiji who has done commendable work in the field of education. He is feeding and maintaining two thousand students. Such a great work is unheard of in our history. Probably he is first Swamiji in the whole of India who is doing such a tremendous social work. Swamiji has already performed more than one crore and 38 lakhs of shada_kshari Mantra for the good of the world. I have just returned from the tour of united kingdom and the continent of Europe and I find the vast difference

between the two world. It is such Swamiji who hav added to the sum total of the spirituality to ou country. Swamiji bears a round about him whicl inspires confidences and courage in us to face th oddities of the world. I feel very much honourec and purified by his holy audience.

Suttur — Sd) S.R. Kanthi
Date. 30-6-1959 — Speaker, Mysore

Sri Mangala Das Pakvas — Raj Bhavan, Bangalore
Governor of Mysore — Date. April 26-4-1961

I visited the Shivarathrieswara Educational In stitution Mysore on the 19th April 1961 on the occa ssion of the inauguration of Sri Basava Jayanth Celebrations. I am happy to learn that the insti tution is doing good service in the field of educatio under the able guidance of Swamiji and hope that th work will continue to increase.

Sd)Mangaladas Pakva
Governor of Mysore

H.M. Channabasappa, B.sc., — Bangalore
Minister For Home — Date. 9th January 195
Camp: Mysore

I have had the privilege of having intimat association and knowledge of the activities of h Holiness Sri Shivarathtreswara Swamiji of Suttu Mutt for over a decade and half. The untiring effor and anxiety of his Holiness to promote educatio in the country are something exemplary. I hav nothing but admiration to the over increasing anxiet

ınd positive steps taken by his Holiness to promote he interest of the people in the country.

Sd) H.M. Channabasappa

It gives me great pleasure to record my deep mpression of Suttur Veerasimhasana Mutt which races its origin to the remote antiquity. The Swamiji who is head of this great institution is looking abiding interest in the progress of the lingayet community as well as other community. The several acts of charity and benevolence that the Swamiji has aken are praiseworthy. It gives me great pleasure o see the Mutt and its surroundings and the neatness with which it is kept. What strikes a casual visitor when he first visits the mutt is the garden of he building of the mutt and historic days, and its utmost cleanliness. It is really a great place in all respects situated on the banks of the kapila river naving facilities for worship and teaching. I had the Darshan of Sri Swamiji. His simplicity, his learning and generosity are admirable. He spares no efforts o promote the well being of the mutt. The mutt and the Swamiji are very catholic in their nature and activities and it is indeed laudable feature which is rare in so many mutts.

May the Swamiji live long and his mutt be an abode of peace, love, devotion and selfless service for the good of the humanity at large.

Sd) Maharaja of Gondal

—§—

It was a pleasure for the staff and the trainees of the Central Institute of English to visit the several institutions and hostels run by the mutt and to partake of the hospitality of the Swamiji at Mysore and at Suttur.

The history of the mutt goes back to a thousand years. Swamiji as the heir of a great spiritual inheritance has kept it up by his own Japa. Then there is the dynamic side of constructive educational activity. This points to the new synthesis that India needs of "Status" and of dynamism. Blassed are they who receive from such hands.

Sd) V.K. Gokak
Director
Date. 14-6-62 Central Institute of English
Hyderabad 7

---

" Here is the Tlejas of two worlds :- At Suttur Mutt 28th Novermber 1945.

JAI

There is the Tejas dowers men with the glory of power and exploit in the secular life. There is also the tejas that crowns the brow of those who are masters of renunciation, the inheritors of the spirit. Extremely rare it is for the light of spirit or renunciation to shine upon men charged with the urgencies of the secular life. God has called the Suttur mutt to Minister to the welfare of 500 families of the Suttur Village. But the Ministration has to come from source where external symbals are the Temple, the Mutt, and the Men who have taken upon

their heads the lives of self denial, of non attachment of Sannyas.

The wise ones say, "Nakarmana, Naprajaya Dhanena, tyagna, naikena, Amritatva Manasuh"But Tyaga is a negative thing and cannot be an ideal; The virtue about Tyaga is " Karmapala tyaga". Without the call of duty and the secular obligation the fairest spirits deteriorates. In the simple unostentaions rounds of daily duty and Praja sava, Sree Shivarathri Swami, the Head of the Suttur mutt, has lifted the ideal of tyaga to the plain of positive achievement. In the Swamiji the light of the spirit is the source to all round benefactions, and self effacing application of energies in the service of those comited to the care of the mutt. The light that shines on his face is, therefore, the light of both worlds, of devotion on Earth and of the serinity and spiritual poise of Heaven.

May God bless the Swamiji and may his spirit wax in strength time without end.

Sd) Purushothma,
Prof. of Philosoyhy

I had the previlege of visiting the Suttur mutt on 17th of January 1947 with my friend and collegue the minister for Agriculture and public works. What impressed me most was the beautiful lay out, the tideness of Building and the cleanliness of sorroundings. An atmosphere of calmness and the devotion presides the precints of the mutt.

The development of mutt in recent years and its note worthy contibutions to the cause of educational advancement must be attributed largely to the untiring effort and zeal of the senior Swamygalu whose pious and unostantatious life counts every onces admiration and devotion.

Sd) Y. Appaji Gowda
Minister for Revenue

ಈ ದಿನ ಪ್ರಾತಃಕಾಲ ಶ್ರೀ ಪರಮ ಪೂಜ್ಯ ಜಗದ್ಗುರು ಶ್ರೀ ಸುತ್ತೂರು ಮಠದ ವೀರಸಿಂಹಾಸನಾಧೀಶ್ವರರು ಶಿವರಾತ್ರಿಸ್ವಾಮಿಗಳವರ ದರ್ಶನಲಾಭ ನನಗೆ ದೊರೆತಿರುವುದು ಒಂದು ಸುಕೃತ. ದಿವ್ಯಾನುಗ್ರಹಪೂರ್ವಕವಾಗಿ ಶ್ರೀ ಶ್ರೀಯವರು ಪರಮಪವಿತ್ರವಾದ ಷಡಕ್ಷರ ಮಹಾಮಂತ್ರ 18 ಲಕ್ಷ ಪ್ರಣವ ಮಂತ್ರ ಒಂದು ಕೋಟಿ ಎಂಟುಲಕ್ಷ ಇವುಗಳನ್ನು ಸ್ವಹಸ್ತದಿಂದ ದಯಮಾಡಿ ಬರೆದಿರುವ ಪ್ರತಿಗಳನ್ನು ನೋಡಿ ಏಕಕಾಲದಲ್ಲಿ ಪರಮಾಶ್ಚರ್ಯವೂ ಮಹದಾನಂದವೂ ಉಂಟಾಗಿದೆ ಶ್ರೀಗಳವರು ಬರೆದಿರುವ ಪ್ರತಿಗಳು ಹಸ್ತಲಿಖಿತವೆಂದು ಹೇಳುವುದೇಸಾಧ್ಯವಿಲ್ಲ. ಮೇಲಾಗಿ ಶ್ರೀಗಳವರ ತಪಸ್ಸಿದ್ಧಿ ಮತ್ತು ಯೋಗಸಿದ್ಧಿಯ ಪ್ರತೀಕವೆಂದು ನನಗೆ ಭಾಸವಾಗುತ್ತದೆ. ಲೋಕಾನುಗ್ರಹಾರ್ಥವಾಗಿ ಶಿಷ್ಯಕೋಟಿಯ ಶ್ರೇಯಸಾಧನೆಗಾಗಿ ನಡೆಸಿದ ಈ ಪ್ರಯತ್ನ ನಿರಂತರವಾಗಿ ಶಾಶ್ವತವಾಗಿ ಭಕ್ತರೆಲ್ಲರ ಕೃತಜ್ಞತೆಗೆ ಪಾತ್ರವಾಗಿದೆ. ಮಂತ್ರದಲ್ಲಿ ನಂಬಿಕೆಖಿಲವಾಗುತ್ತಿರುವ ಈ ನವನಾಗರೀಕತೆಯ ಕಾಲದಲ್ಲಿ ತಪಸ್ಸಾಧನದ ನಿಜಸ್ವರೂಪವನ್ನೇ ತಿಳಿಯಲಾರದ ಪಾಮರರು ಶ್ರೀಗಳವರ ಪ್ರಯತ್ನವನ್ನು ಸ್ವತಃ ನೋಡಿ ತಮ್ಮ ರೀತಿನೀತಿಗಳನ್ನು ಬದಲಾಯಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ. ಶ್ರೀಮಠವು ಜ್ಞಾನಯಜ್ಞವನ್ನು ಪ್ರಾರಂಭಿಸಿ ವಿದ್ಯಾದಾನದಲ್ಲಿ ಮಹತ್ವದ ಸ್ಥಾನವನ್ನು ಗಳಿಸಿ ಆದರ್ಶ ಸಂಸ್ಥಾನವಾಗಿದೆ ಎಂದರೆ ಅತಿಶಯೋಕ್ತಿಯಲ್ಲ ಇಂದು ಈ ಮಂತ್ರಜಪದಿಂದ ಮಂತ್ರ ಯಜ್ಞದಿಂದ ಜಗತ್ಕಲ್ಯಾಣಸಾಧನೆ ಆಗುವುದರಲ್ಲಿ ಸಂದೇಹವಿಲ್ಲ. ಸಾರ ಸಾರ್ಥದ ಅರಿವು ಸಾಮಾನ್ಯ ಜನರಿಗೆ ದೊರಕುವುದು ಪರಮಪೂಜ್ಯ ಶ್ರೀಗಳವರ ಕೃಪಾ ಕಟಾಕ್ಷಾಶೀರ್ವಾದದಿಂದ ಎನ್ನುವುದನ್ನು ಈ ಗ್ರಂಥಗಳು ಸಿದ್ಧಾಂತಗೊಳಿಸಿವೆ. ಒಟ್ಟಿನಲ್ಲಿ ವಿಶ್ವದ ಯಾವ ಕ್ಷೇತ್ರದಲ್ಲಿಯೂ ಗುರುಸ್ಥಾನದಿಂದ ಈ ಮಹತ್ವದ ಕಾರ್ಯ ಯಶಸ್ವಿಯಾಗಿ ನೆರವೇರಿದಂತೆ ನನಗೆ ತೋರುವುದಿಲ್ಲ. ಈ ಮಹತ್ಸಾಧನೆ ಯಾರನ್ನು ತಾನೆ ವಿಸ್ಮಯಗೊಳಿಸುವುದಿಲ್ಲ.

ಸರ್ವ ಸಮನ್ವಯ ದೃಷ್ಟಿಯಿಂದ ಈ ಮಂತ್ರಯಜ್ಞದ ಫಲ ವಿಶ್ವವ್ಯಾಪಿಯಾಗುವುದರಲ್ಲಿ ಸಂದೇಹವಿಲ್ಲ. ಈ ದೃಷ್ಟಿಯಿಂದ ಶ್ರೀ ಜಗದ್ಗುರುಗಳವರು ವಿಶ್ವಮಾನ್ಯರು ಎಂಬ ಶಾಶ್ವತಕೀರ್ತಿಗೆ ಭಾಗಿಗಳು. ಶ್ರೀಗಳವರ ಈ ಯಜ್ಞಪ್ರಭುಗಳವರ ಕೃತಜ್ಞತೆಗೆ ಪಾತ್ರವಾಗಿದೆ ಎನ್ನುವುದನ್ನು ನಾನು ಸ್ವತಃ ತಿಳಿದಿದ್ದೇನೆ.

ಓಂ ನಮಃಶ್ಶಿವಾಯ

ಮೊಕ್ಕಾಂ ಸುತತ್ತೂರು

Sd) ಜಿ. ಬಿ. ಮಲ್ಲಾರಾಧ್ಯ
ಶ್ರೀಮನ್ಮಹಾರಾಜರವರ ನಿವೃತ್ತ ಹುಜೂರು
ಸೆಕ್ರೆಟರಿ

6-2-1957

—ಊಊ—

ಓಂ ನಮಃಶಿವಾಯ

ಕಾಯಪಿಡಿದಾತ್ಮ ರಾಶಿಗೆ ಪರತರ ಮುಕ್ತಿಗುಪಾಯವಿದು ನಿಜ ಶಿವ ಮಂತ್ರ ವರಾಹೌ ॥ ಅವರಿವರೆಂಬುದೇನು ? ಶಿವಶಿವಾ-ಸಕೃದುಚ್ಚಾರ ಮಾತ್ರೇಣಪ-ಮಹಾ ಮನೋಃ ॥ ಸರ್ವೆಷಾಮಪಿ ಜಂತೂನಾಂ ಸರ್ವಪಾಪಕ್ಷಯೋಭವೇತ್ ಎನಲಾಗಿ ಇಂತೆನಲಾಗಿ ಶ್ರುತಿಯನಲಾಗಿ ಎಂದು ನಿಜಗುಣ ಶಿವಯೋಗಿಗಳು ತಮ್ಮ ಸ್ವಾನುಭವ ದಿಂದಲೂ ಶ್ರುತಿ ಪ್ರಮಾಣವಾಗಿಯೂ ಹೇಳಿರುವಂತೆ ಒಮ್ಮೆ ಶಿವ ಷಡಾಕ್ಷರೀ ಮಹಾ ಮಂತ್ರವನ್ನುಚ್ಛರಿಸಿದರೆ ಸರ್ವಪಾಪಗಳೆಲ್ಲ ನಿವಾರಣೆಯಾಗಿ ಮೋಕ್ಷವು ಕರತರಲಾ ಮಲಕವಾಗುವುದು ? ಅಂಥ ಮಂತ್ರವನ್ನು 13875000 ದ ವರೆಗೆ ಜಪಿಸಿ-ಲಿಖಿತ ರೂಪವಾಗಿ ಬರೆದಿಟ್ಟಿರುವ ಮುಂದೆಯೂ ಬರೆಯುತ್ತಿರುವ ಸುತ್ತೂರು ವೀರಸಿಂಹಾ ಸನಾಧೀಶ್ವರ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳನ್ನು ಕಂಡು ನಾನು ಬಹು ಸಂತೋಷಭರಿತನಾಗಿರುವೆನು.

ಮಹಾಸ್ವಾಮಿಗಳು ಮಂತ್ರವನ್ನು ಬರೆದು ಮಂತ್ರಮೂರ್ತಿಗಳಾಗಿದ್ದಾರೆ. ಅವರಿಗೆ ಅಂತರಂಗ ಬಹಿರಂಗದಲ್ಲಿ ಮಂತ್ರವೇ ತೋರುತ್ತಿದೆ. ಮತ್ತು ಶಿವಮಂತ್ರ ಮಹಿಮೆಎಂಬ ಗ್ರಂಥವನ್ನು ಪ್ರಕಟಿಸಿ ಆಸ್ತಿಕ ಜಗತ್ತಿಗೆ ಮಹದುಪಕಾರವನ್ನು ಮಾಡಿದ್ದಾರೆ.

ಅವರ ಈ ಆತ್ಮೋದ್ಧಾರದಕಾರ್ಯವು ಕೇವಲ ವೀರಶೈವರಿಗಾಗಿ ಅಲ್ಲ ಹಾಗೂ ಭಾರತೀಯರಿಗಾಗಿಯೂ ಅಲ್ಲ ಅದು ಪ್ರಪಂಚದ ಎಲ್ಲ ಮಾನವ ಕುಲದ ಉದ್ಧಾರಕ್ಕಾ ಗಿಯಾಗಿದೆ.

ಮಹಾಸ್ವಾಮಿಗಳ ಚಿಕ್ಕಾಳಿಯೇ ಒಂದು ಮೂರ್ತಿಯಾಗಿ ಬಂದಂತಿರುವ ಚಿಕ್ಕ ರಾಜೇಂದ್ರ ಶಿವರಾತ್ರೀಶ್ವರ ಸ್ವಾಮಿಗಳವರು ಭಾರತದ ಭಾಗ್ಯೋದಯದ ಮುಖ್ಯಾಂಗ ವಾದ ಶಿಕ್ಷಣ ಪ್ರಸಾರದ ಅತ್ಯದ್ಭುತ ಕಾರ್ಯವನ್ನು ನೋಡಿ ವಿಸ್ಮಯಚಿತ್ತನಾಗಿರುವೆನು. ದೊಡ್ಡ ಸ್ವಾಮಿಗಳ ಆಧ್ಯಾತ್ಮಶಕ್ತಿ ಚಿಕ್ಕಸ್ವಾಮಿಗಳ ಲೌಕಿಕ ಶಕ್ತಿಗಳೆರಡೂಕೂಡಿ ವೀರ ಶೈವರ ಶಕ್ತಿ ವಿಶಿಷ್ಟಾದ್ವೈತಸಿದ್ಧಾಂತವೇ ಮೂಡಿಬಂದಂತಾಗಿದೆ. ಸುತ್ತೂರ ಪೀಠದಲ್ಲಿ ಹೀಗೆ ಲೋಕೋದ್ಧಾರಕ್ಕಾಗಿ ಅವತರಿಸಿದ ಉಭಯ ಶ್ರೀಗಳವರಿಗೆ ಪರಮಾತ್ಮನು ಹೆಚ್ಚಾದ ಆಯುರಾರೋಗ್ಯವನ್ನು ಕೊಟ್ಟು ಭಾರತದ ಭವಿಷ್ಯವು ಉಜ್ವಲವಾಗುವಂತೆ ಮಾಡಲೆಂದು ಹಾರೈಸುವ

ದಿನಾಂಕ. 28-6-59 — ಸ. ಶಿವಯೋಗಿಗಳು ಬಂಥನಾಳ

ಅಧ್ಯಕ್ಷ

ಸುತ್ತೂರು ಮುಕ್ಕಾಂ — ಅ॥ ಭಾ॥ ವೀರಶೈವ ಮಹಾಸಭಾ

I was taken round the mutt on the 17th by both the Swamijis who have spared no pains to keep the entire precicnts scrupulously clean. It is so kind of the Senior Swamiji to have pleaced the entire resources of the mutt at the disposal of Lingayet community who are very backward in education in these parts. It is equally noble on the part of the Junior Swamiji whose one motto in life is service to community and who has been devoting himself to the service of the community.

Date. 19-1-1947 Sd) L. Siddappa

I am glad that I had an opportunity to pay visit to this historical mutt, took ' Darshan' of His Holiness Swamiji and paid my respects to him, Sri Swamiji is well versed in Shastras and has toured almost all parts of India. It is really a pleasure to have conversation with him on religious matters. He had completed the vow of writing one crore "SHADAKSHARA MANTHRA" and is still writing more. The mutt authorities under his guidance are conducting number of educational institutions in which about 2000 students are being trained. This mutt is doing commendable work in the field of education. Major portion of mutt income is spent on this institution. I hope the other mutts will follow the example of this mutt and help the cause of education. I pray for long life for Swamiji.

Date. 19-9-1957 Sd) M.P. Patil

Instituions like the one which I have had the good fortune to visit in response to the kind invitation extended to me by His Holiness. Mutts are generally in a very deplorable conditions for want of proper management. As for as this institution is conerned I have nothing but the greatest admiration. The mana-gement is excellant and His Holiness the present Swamiji is an example to all those who are entrusted with such institutions. During his term of office vast and valuable properties have been acquired and the income thereof is being spent in feeding travellers, in the proper upkeep of the institution and in maintaining hostels werein poor and deserving students are fed freely. The way in which the insti-tution is being kept and the worthy objects on which the income of institution is being spent are worthy of amulations by Heads of other mutts and religious institutions.

Date. 17-6-1944

Sd) G. Paramasivaiah
Judge
High Court of Mysore

ಶಿವಾಯ ನಮಃ

ಇಂದು ಮಹಾಸ್ವಾಮಿಗಳ ದರ್ಶನವಾದದ್ದು ನನ್ನ ಭಾಗ್ಯ. ಮಹಾಸ್ವಾಮಿ ಗಳು ಜಗತ್ತಿನ ಕಲ್ಯಾಣದ ಸಲುವಾಗಿ "ಓಂ ನಮಃಶಿವಾಯ" ಮಂತ್ರವನ್ನು ಇದ ವರೆಗೆ ಒಂದು ಕೋಟಿ ಮೂವತ್ತೊಂದು ಲಕ್ಷ ಬರೆದಿದ್ದಾರೆ. ಇನ್ನು ಸ್ವಾಮಿಗಳ ಒಂದು ಕೋಟಿ ನಲವತ್ತನಾಲ್ಕು ಲಕ್ಷಕ್ಕೆ ತಮ್ಮ ಬರೆಯುವ ಕೆಲಸವನ್ನು ನಿಲ್ಲಿ ಬೇಕೆಂದು ನನ್ನ ಬೇಡಿಕೆ. ಶಿವ ಮಂತ್ರ ಮಹಿಮೆ ಎಂಬ ಗ್ರಂಥವನ್ನು ಬರೆದಾ ನಮ್ಮೆಲ್ಲರ ಭಾಗ್ಯ. ಈ ಗ್ರಂಥವನ್ನು ಸರ್ವರೂ ಓದಿ ತಮ್ಮ ದೇಹಗಳನ್ನು ಮಂತ್ರ ಮಯ ದೇಹಗಳನ್ನಾಗಿ ಮಾಡಿಕೊಂಡು ಶಿವನೊಳಗೆ ಕೂಡಿಕೊಳ್ಳಬೇಕು. ಈ ಮಹಾ ಮಂತ್ರ ಬರೆಯುವ ಕಾರ್ಯ ಉಳಿದ ಸಂಸ್ಥೆಗಳು ನಡೆಯಿಸಬೇಕು.

Date. 15-1-59

B.D. Jathi

ಶ್ರೀ ಶ್ರೀ ಜಗದ್ಗುರು ಪಟ್ಟದ ಶಿವರಾತ್ರಿ ಸ್ವಾಮಿಗಳು ಕೃಪೆಯಿಂದ ಕಳುಹಿಸಿದ ಶಿವಮಂತ್ರ' ಮಹಿಮೆಯನ್ನು ಓದಿ ಕೃತಾರ್ಥನಾಗಿದ್ದೇನೆ. ಇಂದಿನ ಜಗತ್ತಿಗೆ ಬಹು ಮುಖ್ಯವಾಗಿ ಬೇಕಾಗಿರುವುದು ಅಂತರಂಗದ ವ್ಯವಸಾಯ. ಇದಿಲ್ಲದೆ ಯಾವ ರೀತಿಯ ಬಾಹ್ಯ ವೈಭವ ಜ್ಞಾನ ಸಾಮಗ್ರಿಗಳು ವ್ಯರ್ಥವಾಗುವುದೆಂಬ ಅರಿವು ಕ್ರಮೇಣ ನಾಶವಾಗುತ್ತದೆ. ತಪಸ್ಸು, ಧ್ಯಾನ, ಅಂತರಂಗಶುದ್ಧಿ ಇವುಗಳಿಗೆ ಮುಖ್ಯ ಸಾಧಕವಾದ ಮಂತ್ರಜಪ ಅತ್ಯಮೂಲ್ಯವಾದ ಸಾಧನವಾಗಿದೆ. ಮಂತ್ರೋಚ್ಚಾರಣೆಯಿಂದ ಮಂತ್ರದಲ್ಲಿ ಅಡಗಿರುವ ಅರ್ಥದ ಅನುಸಂಧಾನದಿಂದ ನಮ್ಮ ಜೀವನ ಪರಿಶುದ್ಧವಾಗುವುದಲ್ಲದೆ ನಮಗೆ ಅಗತ್ಯವಾಗಿ ಬೇಕಾಗಿರುವ ಶಾಂತಿ ನೆಮ್ಮದಿ ದೊರಕುವುದರಲ್ಲಿ ಸಂದೇಹವಿಲ್ಲ. ಶಿವ ಮಂತ್ರಮಹಿಮೆ ಪಂಡಿತ ಪಾಮರರಿಗೆಲ್ಲರಿಗೂ ಮನಂದಟ್ಟಾಗುವಂತೆ ವಿವರಿಸಿರುವ ಜಗದ್ಗುರುಗಳಿಗೆ ನಾವೆಲ್ಲರೂ ಕೃತಜ್ಞರಾಗಿರುತ್ತೇವೆ ಎಂದು ನನ್ನ ನಮ್ರ ನಿವೇದನೆ

ಮೈಸೂರು.  
15-2-1960

ಎಂ. ಯಮುನಾಚಾರ್ಯ  
ನಿವೃತ್ತ ತತ್ವ ಶಾಸ್ತ್ರದ ಪ್ರಾಧ್ಯಾಪಕ  
ಮೈಸೂರು ವಿಶ್ವ ವಿದ್ಯಾನಿಲಯ

ಈವತ್ತಿನ ದಿವಸ ನನ್ನ ಜೀವನದಲ್ಲಿ ಒಂದು ಸುದಿನ. ಅನೇಕ ವರ್ಷಗಳಿಂದ ಸುತ್ತೂರು ಸಂಸ್ಥಾನ ಮತ್ತು ಸಂಸ್ಥಾನದ ಮಠಾಧೀಶ್ವರರಾದ ಶ್ರೀ ಶ್ರೀ ಜಗದ್ಗುರು ಶಿವರಾತ್ರೀಶ್ವರ ಮಹಾಸ್ವಾಮಿಗಳ ದರ್ಶನ ಲಾಭ ಪಡೆಯಬೇಕೆಂಬ ನನ್ನ ಬಯಕೆ ಸುದೈವದಿಂದ ಈವತ್ತು ಈಡೇರಿದೆ. ಅನ್ನದಾನ ವಿದ್ಯಾದಾನಗಳಿಂದ ಮಿಗಿಲಾದ ದಾನ ಜಗತ್ತಿನಲ್ಲಿ ಮತ್ತಾವುದೂ ಇಲ್ಲ. ವಿದ್ಯಾ ಕ್ಷೇತ್ರದಲ್ಲಿ ಪೂಜ್ಯ ಮಹಾಸ್ವಾಮಿಗಳು ಅವಿಶ್ರಿತವಾಗಿ ಶ್ರಮಿಸಿ ಸಾಧಿಸಿದ ಮಹತ್ಸಾಧನೆ ಬರೀ ಕರ್ನಾಟಕಕ್ಕೆ ಅಲ್ಲ ಇಡೀ ಭರತಖಂಡದಲ್ಲೇ ಶೈಕ್ಷಣಿಕ, ಸಾಮಾಜಿಕ ಕ್ಷೇತ್ರದಲ್ಲಿ ತನುಮನಧನದಿಂದ ನಿರತರಾದ ಮಹಾನುಭಾವರುಗಳಿಗೆ ನಿದರ್ಶನವಾಗಿದೆ. ಪೂಜ್ಯಮಹಾಸ್ವಾಮಿಜಿಯವರ ಈ ಸ್ತುತ್ಯಕಾರ್ಯ ಇಡೀ ನಮ್ಮ ಜನಾಂಗಕ್ಕೆ ಸ್ಫೂಲದಾಯಕವಾಗಿದೆ.

ಅನೇಕ ವರ್ಷಗಳಿಂದ ಹರಿದು ಹಂಚಿಹೋಗಿದ್ದ ನಮ್ಮ ಕನ್ನಡನಾಡು ಈಗ ಒಂದಾಗಿದೆ. ಕನ್ನಡನಾಡು ಬಾಳಿ ಬೆಳಗಬೇಕಾದರೆ ಇಂಥಹ ಸತ್ಪುರುಷರ ಆಶೀರ್ವಾದಗಳು ಸದಾಕಾಲ ನಮ್ಮ ಮೇಲೆ ಇರಬೇಕು. ದೇವರು ಪೂಜ್ಯಸ್ವಾಮಿಗಳ ಆಶೀರ್ವಾದ ನಮ್ಮ ಮೇಲೆ ನಮ್ಮ ನಾಡಿನಮೇಲೆ ಸದಾ ಇರುವಂತೆ ಅವಕಾಶ ಕಲ್ಪಿಸಿ ಕೊಡಲೆಂದು ಅನನ್ಯ ಭಾವದಿಂದ ಪ್ರಾರ್ಥಿಸುತ್ತೇನೆ.

ಸುತ್ತೂರು.  
9-4-1961

ವೀರೇಂದ್ರ ಪಾಟೀಲ  
ಅಬ್ಕಾರಿ, ಪಾನ ನಿರೋಧ, ಕೈಗಾರಿಕಾ ಶಾಖೆ ಮಂತ್ರಿ  
ಮೈಸೂರು ಸರ್ಕಾರ

ಸುತ್ತೂರು ಮಹಾಸಂಸ್ಥಾನ ಮೂರು ಸಾವಿರ ವರ್ಷಗಳ ಸ್ಮಾರಕ. ಸಾವಿರ ವರ್ಷಗಳಿಗೂ ಹೆಚ್ಚಾದ ಚರಿತ್ರಾಂಶ, ಶ್ರಮ ಮಹದೇಶ್ವರನು ಕೆಲಕಾಲ ವಾಸಿಸಿದ ಪುಣ್ಯಕ್ಷೇತ್ರ, ಇಂತಹ ಪ್ರಾಚೀನ ಮಹಿಮಾ ಕ್ಷೇತ್ರಕ್ಕೆ ಬಂದು ಶ್ರೀ ಸ್ವಾಮಿಗಳವರ ದರ್ಶನ ಲಾಭ ಪಡೆದ ಈ ದಿನವನ್ನು ನಾನು ನನ್ನ ಭಾಗದ ಮಹಾ ಪುಣ್ಯದಿನವೆಂದು ಭಾವಿಸುತ್ತೇನೆ. ಸುತ್ತೂರು ಮಹಾ ಸನ್ನಿಧಿಯವರು ವಿದ್ಯಾಪ್ರಸಾರ, ಜ್ಞಾನಪ್ರಚಾರ ಭಕ್ತಿಪ್ರಸಾರಗಳಿಗಾಗಿ ಕೈಗೊಂಡು ನಡೆಸುತ್ತಿದ್ದ ನಾನಾ ಕಾರ್ಯಕಲಾಪಗಳ ಕಡೆಗೆ ಗಮನಕೊಡುವುದಾದರೆ, ದೇಶದಲ್ಲಿ ಸುಸಂಸ್ಕೃತರು ಹೆಚ್ಚಿ ಲೋಕಕಲ್ಯಾಣ ವಾಗುವುದರಲ್ಲಿ ಸಂದೇಹವಿಲ್ಲ. ಶ್ರೀ ಸುತ್ತೂರು ಮಠಾಧೀಶರು ಈ ದಿಶೆಯಲ್ಲಿ ಮಾರ್ಗದರ್ಶನ ಮಾಡುತ್ತಿರುವುದು ದೇಶದ ಸೌಭಾಗ್ಯ-ನನ್ನ ಅನಂತ ಪ್ರಣಾಮಗಳು.

ಹೆಚ್.ಕೆ. ವೀರಣ್ಣಗೌಡ
4-8-61

ಇಂದು ಶ್ರೀ ಸ್ವಾಮಿಗಳ ದರ್ಶನಕ್ಕೆ ಬಂದಿದ್ದು ಮೂರನೆ ಸಲ ಕುಟುಂಬ ಸಮೇತನಾಗಿ ಆಶೀರ್ವಾದ ಪಡೆಯಲು ಬಂದೆ. ಪ್ರತಿ ಸಾರಿಯೂ ಇನ್ನೊಮ್ಮೆ ಬರೋಣವೆಂಬ ಇಚ್ಛೆ ಬಲವಾಗುತ್ತದೆ. ಶ್ರೀ ಸ್ವಾಮಿಗಳು ಅವಿರತವಾದ ತಪೋಬಲದಿಂದ ಎಷ್ಟು ಸಾಧಿಸಿದ್ದಾರೆಂಬುದು ಸರ್ವ ವೇದ್ಯವಾಗಿದೆ, ಅವರ ವಯೋಮಾನದಲ್ಲಿ ಎಂತಹ ಕಾರ್ಯನಡೆಸಿದ್ದಾರೆಂದು ನೋಡಿದರೆ ಆಶ್ಚರ್ಯವಾಗದಿರದು. ಏಕಮುಖವಾಗಿ, ಏಕಾಗ್ರ ಚಿತ್ತದಿಂದ ಒಂದು ಕೋಟಿ ಎಪ್ಪತ್ತೇಳು ಲಕ್ಷ ಮಹಾ ಶಿವ ಪಂಚಾಕ್ಷರೀ ನಾಮವನ್ನು ಬರೆದಿದ್ದಾರೆ ಎಂದು ನೋಡಿದಲ್ಲಿ, ಅವರ ಪಾರಮಾರ್ಥಿಕ ಶಕ್ತಿ ಎಷ್ಟು ಎನ್ನುವುದು ಸಹಜವಾಗಿ ತಿಳಿಯುತ್ತದೆ. ಅಷ್ಟೇ ಅಲ್ಲ, ಆ ಮಂತ್ರ ಪ್ರಭಾವ ಬಾಹ್ಯ ಪ್ರಪಂಚದಲ್ಲಿ ಎಷ್ಟು ಪರಿಣಾಮಕಾರಿಯಾಗಿದೆ ಎಂದು ಅರಿತಲ್ಲಿ ಆಧ್ಯಾತ್ಮಿಕ ಜೀವನದಿಂದ ಮಹಾ ವಿಭೂತಿ ಪುರುಷರು ನಾನಾ ಮುಖವಾಗಿ ಸಮಾಜವನ್ನು ಉದ್ಧಾರ ಮಾಡಬಲ್ಲರು ಎಂಬ ಮನವರಿಕೆಯಾಗುತ್ತೆ. ಧ್ಯಾನ ಮತ್ತು ಕಾರ್ಯ ಇವು ವಿಸಂಗತನಲ್ಲಿ, ಕೇವಲ ನಾಮಸ್ಮರಣೆಯಿಂದ ಮಾತ್ರ ಆಗದ ಪರಿಣಾಮವು ಈ ಪ್ರತಿಕ್ರಿಯೆ ಮಂತ್ರೋಚ್ಚಾರಣೆ ಮತ್ತು ಲೇಖನಗಳಿಂದ ಅಗುವುದರಲ್ಲಿ ಸಂದೇಹವಿಲ್ಲ. ನನಗೆ ಈ ಭಾವನೆ ಬಂದಿದ್ದೇ ಮಹಾಲಾಭ, ಶ್ರೀ ಶ್ರೀಗಳವರು ಇದೇ ರೀತಿಯಲ್ಲಿ ನಮಗೆಲ್ಲಾ ಚಿರಕಾಲ ಮಾರ್ಗದರ್ಶನ ಮಾಡಲಿ ಎಂಬುದೇ ಭಗವಂತನಲ್ಲಿ ನನ್ನ ಪ್ರಾರ್ಥನೆ.

ಆರ್. ಬಿ. ನಾಯಕ
20-8-1961
(ರಘುನಾಥರಾವ್ ಬಿ. ಆರ್)
ಮೈಸೂರು ಸಿಟಿ ಮ್ಯಾಜಿಸ್ಟ್ರೇಟ್

ಸುತ್ತೂರು ಮಠದ ಮಹಾಸ್ವಾಮಿಗಳು ಮಾಡತಕ್ಕಂಥಾ ಕಾರ್ಯ ದೇಶದ ಕಾರ್ಯ-ಇದರಿಂದ ದೇಶದ ಅಭಿವೃದ್ಧಿ ಮತ್ತು ಜನಾಂಗದ ಪ್ರಗತಿಗೆ ಮಹದುಪಕಾರ ವಾಗಲಿದೆ. ಕಲ್ಯಾಣ ರಾಜ್ಯದಲ್ಲಿ ಇಂಥ ಕಲ್ಯಾಣಕಾರ್ಯಗಳಿಗೆ ಜನ ಹಿತಕ್ಕೆ ತಳಹದಿಯಾಗಿ ಪರಿಣಮಿಸುತ್ತದೆ–14 ಹಾಸ್ಟಲುಗಳು, 2 ತರಬೇತಿ ಕಾಲೇಜುಗಳು 3 ಪೌಢಶಾಲೆಗಳು ಮತ್ತು ಒಂದು ಸಂಸ್ಕೃತ ಕಾಲೇಜು ಈ ತರಹ 20 ಸಂಸ್ಥೆಗಳು ನಡೆಸುವ ಕಾರ್ಯ ಏನು ಸಣ್ಣದಾಗಿಲ್ಲ-ಇಂಥಾ ಮಹಾಕಾರ್ಯ ದೇಶದಲ್ಲಿ ಅದ್ಭುತ ಕ್ರಾಂತಿ ಮಾಡುವುದರಲ್ಲಿ ಸಂಶಯವಿಲ್ಲ-ಶಿಕ್ಷಣದಲ್ಲಿ ಕ್ರಾಂತಿ, ಬುದ್ಧಿಮಟ್ಟವನ್ನು ಎತ್ತರಿಸುವರಲ್ಲಿ ಕ್ರಾಂತಿ ಮತ್ತು ತತ್ಪರಿಣಾಮವಾಗಿ ಸಮಾಜದ ಏಳ್ಗೆ-ಈ ರೀತಿ ಘನವಾಗಿ ಆಗುವುದರಲ್ಲಿ ಸಂಶಯವಿಲ್ಲ-ಇಂಥಾ ಐತಿಹಾಸಿಕ ಕಾರ್ಯ ದೇಶದ ಇತಿಹಾಸ ಕರ್ತರು ಮರೆಯದೆ ಬರೆಯುವುದರಲ್ಲಿ ಸಂಶಯವಿಲ್ಲ. ಮಹಾಸ್ವಾಮಿಗಳು ನಡೆಸುತ್ತಿರುವ ಈ ಕಾರ್ಯಕ್ಕೆ ದೇಶ ಅವರಿಗೆ ಚಿರಋಣಿಯಾಗಿರುವುದರಲ್ಲಿ ಸಂಶಯವಿಲ್ಲ.

ಜಿ. ಅಣ್ಣಾರಾವ್

20-1-61 ವಿದ್ಯಾಮಂತ್ರಿ

ಓಂ ಶಿವಾಯ ನಮಃ

ಇಂದು ಧಾರವಾಡದಲ್ಲಿ ಶ್ರೀ ಸುತ್ತೂರು ಜಗದ್ಗುರು ಶಿವರಾತ್ರೀಶ್ವರ ಮಠಾಧೀಶ ಮಹಾಸ್ವಾಮಿಗಳ ಸಂದರ್ಶನ ಯೋಗ ದೊರೆತದ್ದು ಅನಿರೀಕ್ಷಿತ ಭಾಗ್ಯವೆಂದೆಣಿಸುವೆ. ಷಡಕ್ಷರ ಮಹಾಮಂತ್ರ ಲೇಖನವನ್ನು ಒಂದು ಕೋಟಿ ಎಂಭತ್ತಮೂರು ಲಕ್ಷದವರೆಗೆ ಈಗಾಗಲೇ ಮುಗಿಸಿದ ಮಹಾಸಿದ್ಧಪುರುಷರ ದರ್ಶನಾಶೀರ್ವಾದಗಳು ಸಕಲರಿಗೂ ಸುಲಭವಾಗಿ ದೊರೆಯಲಾರದಂತಾದ್ದರಿಂದ ನನ್ನ ಪುಣ್ಯದಿಂದ ಈ ಲಭ್ಯ ಲಾಭವು ದೊರೆತಿದೆ. ಅವರ ಕರುಣಾಮಯ ಆಶೀರ್ವಾದಕ್ಕೆ ಸದಾ ನಾನು ಅರ್ಹನಾಗುವಂತೆ ಕರುಣಿಸಲಿ ಎಂದು ಪ್ರಾರ್ಥಿಸುವೆ.

ಮುಪ್ಪಿನ ಮಹಾ ತಪಸ್ವಿಗಳ ತಪೋಬಲದಿಂದ ಜನಸಾಮಾನ್ಯರು ಕಲ್ಯಾಣಾಭಿವೃದ್ಧಿ ಕಾರ್ಯಗಳು ಸದಾ ನಡೆಯುತ್ತಿರುತ್ತವೆ. ಅದರಲ್ಲೂ ವಿಶೇಷ ವಿದ್ಯಾರ್ಜನೆಗೆ ಆತುರರಾದ ತರುಣ ಪೀಳಿಗೆಯ ನೆರವಿಗೋಸ್ಕರ ಕೈಗೊಂಡ ಕಾರ್ಯಗಳು ಅತ್ಯಂತ ಸ್ತುತ್ಯವಾದವುಗಳು. 2000ಸಾವಿರಕ್ಕೆ ಮೇಲ್ಪಟ್ಟು ವಿದ್ಯಾರ್ಥಿಗಳಿಗೆ ನಿತ್ಯವೂ ಪ್ರಸಾದ ವಿನಿಯೋಗಿಸುವಂತೆ ಸಂಸ್ಕೃತ ಕಾಲೇಜು, ತರಬೇತಿ ಕಾಲೇಜುಗಳು, ಪೌಢಶಾಲೆಗಳಲ್ಲದೆ ಹಾಸ್ಟಲುಗಳು, ಸ್ಕಾಲರ್‌ಶಿಪ್ಪುಗಳು, ಸಾಹಿತ್ಯಪ್ರಕಟನೆ, ವ್ಯಾಖ್ಯಾನವೇ ಮೊದಲಾದ ವಿಧ ವಿಧದ ರೂಪದಲ್ಲಿ ಕರುಣ ರಸವು ಹರಿದು ಜನತೆಯ ಅಜ್ಞಾನ ಬಡತನಗಳನ್ನು ನೀಗುವಲ್ಲಿ ಕಾಮಧೇನುವಿನ ಅಮರ ಪಾಲ್ಗಡಲಾಗಿ ಪರಿಣಮಿಸಿದೆ. ಹಿರಿಯ ಮಹಾ ಸಿದ್ಧರ ಪರಂಪರೆಯಲ್ಲಿ ಕಿರಿಯ ಮಹಾಸ್ವಾಮಿಗಳವರು ಮಠದ ವೈಶಿಷ್ಟ್ಯವನ್ನು ಹೆಚ್ಚಿಸುವಲ್ಲಿ ಜನತೆಯ ಲೌಕಿಕ ಸಂತೋಷಗಳನ್ನು ನಿವಾರಿಸಿ ಧರ್ಮಪ್ರವೃತ್ತರನ್ನಾಗಿ

ಮಾರ್ಗದರ್ಶಿಸುವಲ್ಲಿ ನಿತ್ಯ ಶ್ರಮಿಸುತ್ತಿರುವುದು ಎಂಥವರಿಗೂ ಆಶ್ಚರ್ಯವನ್ನುಂಟುಮಾಡಿದಂತಾಗಿದೆ.

ಮಹಾಸ್ವಾಮಿಯವರು ಧಾರವಾಡ ನವಕಲ್ಯಾಣ ಮಠದ ಸ್ಥಾಪನಾಚಾರ್ಯರಾದ ಶ್ರೀ ಗುರುಸಿದ್ಧಪ್ರಭುಗಳವರ 75ನೆಯ ಜನ್ಮದಿನಾಚರಣೆ ನೈಮಿತ್ತಿಕವಾಗಿ ಆಗಮಿಸಿದ ಈ ಸಂದರ್ಭದಲ್ಲಿ ಮೈಸೂರು ಶ್ರೀಮನ್ಮಹಾರಾಜರವರ ಜೊತೆಯಲ್ಲಿ ಇಲ್ಲಿಗೆ ಬರುವ ಯೋಗ ದೊರೆತು, ಆ ಮೂಲಕ ಮಹಾಸ್ವಾಮಿಗಳ ಸಂದರ್ಶನವು ದೊರೆತದ್ದು ವೈಶಿಷ್ಟ್ಯವಾಗಿದೆ, ಸಜ್ಜನರ ಹಾಗೂ ಮಹಾಪುರುಷರ ಸಹವಾಸದ ಫಲವಿದು ನಾನು ಈ ಸಮಯದಲ್ಲಿ ಬರೆದು ಸದಾ ಅವರ ಕರುಣೆಗೆ ಪಾತ್ರನಾಗುವ ಮತ್ತು ನಡೆ ನುಡಿಗಳನ್ನು ಅವರ ಮೆಚ್ಚುಗೆ ಹೊಂದುವಂತೆ ಇರಿಸಿಕೊಳ್ಳುವಂತೆ ಆಶೀರ್ವದಿಸಬೇಕೆಂದು ಮಹಾಸ್ವಾಮಿಗಳಲ್ಲಿ ಪ್ರಾರ್ಥಿಸಿಕೊಳ್ಳದಿರಲಾರೆ.

ಧಾರವಾಡ— ಕಲ್ಲನಗೌಡ ಪಾಟೀಲ
Minister for Transport and food
16-11-1961 Govt. of Mysore

॥ ಶ್ರೀ ಸಿದ್ಧಲಿಂಗ ಪ್ರಸೀದ ॥

ಇಂದು ಮಹಾ ಶಿವಯೋಗಿ ಶ್ರೀ ಎಡೆಯೂರೇಶನ ಪ್ರೇರಣೆಯಿಂದ ಸುತ್ತೂರು ವೀರ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರುಗಳವರು ನವಿಲುಗುಂದ ಶ್ರೀ ಗವಿಮಠಕ್ಕೆ ತಮ್ಮ ಪರಿವಾರದೊಂದಿಗೆ ಆಗಮಿಸಿ ಜಗದ್ಗುರು ಶ್ರೀ ರೇಣುಕ ಮಂದಿರದ ಅಡಿಗಲ್ಲನಿಟ್ಟು ಉಪಕರಿಸಿದ್ದಾರೆ. ಇಂತ ಹಿರಿಯ ತಪಸ್ವಿಗಳು, ಅನುಭವಿಗಳು, ಕನ್ನಡ ನಾಡಿನಲ್ಲಿರುವ ನಾಡಿಗೆ ಭೂಷಣ. ನಮಗೂ ಒಂದು ಅಭಿಮಾನದ ಸಂಗತಿ, ಎರಡು ಕೋಟಿಗಿಂತಲೂ ಹೆಚ್ಚಾಗಿ ಮಹಾಮಂತ್ರ ಬರೆದು ಮಂತ್ರಮಯ ಶರೀರಿಗಳಾದ ಮೇಲ್ಕಂಡ ಮಹಾಸ್ವಾಮಿಗಳು ಜಗತ್ ಕಲ್ಯಾಣಕ್ಕಾಗಿ ಬಹುದಿನ ನಮ್ಮ ಮಧ್ಯದಲ್ಲಿರುವ ಭಾಗ್ಯವನ್ನು ಜಗದೀಶನು ಕರುಣಿಸಲೆಂದು ಹಾರೈಸುತ್ತೇನೆ.

ತಾ॥. 17-11-61 ಬಸವಲಿಂಗಸ್ವಾಮಿಗಳು
ನವಿಲುಗುಂದ

—§—

# ಅನುಬಂಧ (ಶಾಸನಗಳು)

## ನಂಜನಗೂಡು ತಾಲ್ಲೂಕು ಶಾಸನ ೧೬೦

( ಸುತ್ತೂರು ಗ್ರಾಮದ ವೀರಭದ್ರ ದೇವಸ್ಥಾನದ ದಕ್ಷಿಣ ಪಾರ್ಶ್ವದಲ್ಲಿರುವ ಕಲ್ಲಿನಲ್ಲಿ ಹಳಗನ್ನಡಕ್ಷರ ಪ್ರಮಾಣ 6'x4'6" )

1 ಸಂಮೊಂಶ್ರೀ ಶಿರೆ—————————ಲಂಇ. ಲ

9 —————————ರೆಯರ ಬ್ರಾಹ್ಮಣರ

10 —————————ಸನ್ತತಿ. ಪ್ಪಗೆ

12 ........———ಳ ನೆಯ ನರಕಕಳಿದಂ ಸಭೆಯೊ

13 ————ಗಾಚಾರಿ ಇವನ್ನಕರಂ ಕಾಮು

( ಚಕ್ಕೆ ಎದ್ದುಹೋಗಿರುವುದರಿಂದ ಅಕ್ಷರಗಳು ಕಾಣುವುದಿಲ್ಲ )

## ನಂಜನಗೂಡು ತಾಲ್ಲೂಕು ಶಾಸನ 161

(ಅದೇ ಸೋಮೇಶ್ವರ ದೇವಸ್ಥಾನದ ಉತ್ತರ ಪಾರ್ಶ್ವದಲ್ಲಿನ ಶಾಸನಕ್ಕೆ ಎದುರಾಗಿರುವುದು—ಹಳಗನ್ನಡಕ್ಷರ ಪ್ರಮಾಣ. 6'x4'6" ಹಿಂಬಾಗದಲ್ಲಿ,

2 ಚೋಳವಳನಾಟ್ಟುಇ

3 ಉದೆಯೂರ ಶ್ರೀರಾಜೇನ್ದ್ರ ಚೋಳ

4 ದವಲಾನುಂ ವೆಪ್ಪದಿ ಆರಿಯುಂ

6 ಕಳುಕ್ಕು ಕೊಂಗಳ್ಕೊಡುತ್ತು ನಿಲಮೂವತ್ತು ಇರ್ವಾರ್ಸರ್ವ್ವದೇವ

7 ಕಿಳ ಕುಂದಣಿಯು ಕಣ್ಡತ್ತುಕ್ಕುಮೆ

7 ಕ್ಕೆ ಕಾಲುಕುಕಿಳಕು ಕರಿವಿಣಿಯು ಗಣ್ಡತ್ತು

9 ಟ್ಪ ನಿಲಂ ಇರಣ್ಡು

14 ದವಲಾನು ಆರಿಯುಂಚಿಮುನುಕು ಮಾರಂಸುಂ ವೀರಯನುಂತೆ ವಯಂ ಸೋ

15 ಮುಜುನು ನಾರಾಯಣಂ ನರಸಿಂಗನುಂ ಶ್ರೀಯೂರಚಾವುಣ್ಡಾಯ ನುಂ ಉಳ್ಳಿದ್ದ

16 ಸಭೆಯುಂ ಇನ್ನಿಲತ್ತುಕ್ಕು ಇನ್ರೈಯ ಎವ್ವಾರುಂ ಉಳ್ಳಿದ್ದ ಇರಯಾತಾ॥

## ನಂಜನಗೂಡು ಶಾಸನ 165

( ಅದೇ ದೇವಸ್ಥಾನದ ಎಡಭಾಗದಲ್ಲಿ ನಿಲ್ಲಿಸಿದ ಕಲ್ಲಿನ ಹಿಂಭಾಗದಲ್ಲಿ 164 ಮತ್ತು 165 ಎರಡು ಶಾಸನಗಳು ಒಂದೆಕಲ್ಲಿನಲ್ಲಿವೆ)

### ಪ್ರಮಾಣ 6x5'3"

1 ತು ಕೃಚ್ಚ್ಕರ್ಮಕ್ಕೆ ಆ ಸಮೂಹಕ್ಕೆ ಒದ

2 ವಯುಂ ತಮ್ಮಪ ದೇವಸ್ಥಾನ ಪೂಜೆಯುಮಂ ಸಲೆ

3 ಯೂರ ಕೆರೆಗೆ ಕೊಟ್ಟರ್ ಸ್ವಸ್ತಿ ಸಮಸ್ತ ಪ್ರಸ
4 ಸ್ತಿಸಹಿತಂ ಶ್ರೀಮತ್ ನಾನಾದೇಸಗರ ಮು
5 ಳ್ಳಿಟ್ಟ ಸೀಮೆಯ ಮುಮ್ಮಿಳ್ದ ಶ್ರೋತ್ರಿಯೂರಲಿ ಕೂಡಿದ
6 ಪುದ್ದ ಧನಮುಂ ಪಸೆವುಟ್ಟಿಗೆಯುಂ ಆರೆವೆಗೆಳ್ತಿಯು
7 ಮು ಕೆರೆಗೆ ಕೊಟ್ಟರ್ —ನರ —ಗಣಕ್ಕೆ ನಿಚ್ಚಂ ಒವರ್ಮ್ಮಾನ
8 —ಯಲಿಕಳ——ನನ್ದಾದೀವಿಗೆಯಾಗ ಲಾ ಎ
9 ನಿತುಗಾಣಂ ನಟ್ಟಾ——ತಿ ನನ್ದಾದೀವಿಗೆಯುಂ ಶ್ರೋ
10 ತ್ರಿಯೂರ ಸಭೆಯೂರ ಈ ದಿನ ಈಶ್ವರ ಮುಡೆಯರ್ಗ್ಗೆ ಕೊ
11 ಟ್ಟರ್ ಈ ಧರ್ಮವ ನಾವ ನೋರ್ವ್ವ ಅಸಕೂಲನಾಗಿ ನಡೆಯಿ
12 ಸದೆ ಕೆಡಿಸಿದಾತ ವಾರಣಾಸಿಯುಂ ಕವಿಲೆಯುಮ
13 ನಳಿದಂ ಸ್ವದತ್ತಂ ಪರದತ್ತಂ ವಾ ಯೋ ಹರೇತ ವಸುನ್ಧರಾಃ ಷಷ್ಟಿ
14 ವರ್ಷ ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ
15 ನ ವಿಷಂ ವಿಷಮಿತ್ಯಾಹುರ್ದೇವಸ್ವಂ ವಿಷಮುಚ್ಯತೇ । ವಿಷ
16 ಮೇಕಾಕಿನಂ ಹಸ್ತಿ ದೇವಸ್ವಂ ಪುತ್ರ ಪೌತ್ರಕಂ ॥

(ಕಲ್ಲುಚಕ್ಕೆ ಎದ್ದು ಹೋಗಿರುವುದರಿಂದ ಚನ್ನಾಗಿ ಕಾಣುವುದಿಲ್ಲ)

## ನಂಜನಗೂಡು ಶಾಸನ 28 (164)

(ನಂಜನಗೂಡು ತಾಲ್ಲೂಕು ಸುತ್ತೂರು ಸೋಮೇಶ್ವರ ದೇವಸ್ಥಾನಕ್ಕೆ ಉತ್ತರ ಕಡೆಯೂ ವೀರಭದ್ರ ದೇವಸ್ಥಾನಕ್ಕೆ ದಕ್ಷಿಣದಲ್ಲೂ ಇರುವ ನಂಜನಗೂಡು 164ನೆಯ ನಂಬರು ಶಿಲಾಶಾಸನದ ಪುನರ್ಮುದ್ರಣ)

ಪ್ರಮಾಣ 6'5"x5'3"

1 ಪೂರ್ವ್ವದೇಶಮುಂ ಗಂಗೆಯುಂ ಕೊಣ್ಡ ಕೊಪ್ಪರಕೇಸರಿ ಪರ್ಮರಾಯ ಒಡೆಯಾರ್
2 ಶ್ರೀ ರಾಜೇನ್ದ್ರ ಚೋಳದೇವರ್ ಯಾಣ್ಡು 31 ಆವದು ಸ್ವಸ್ತಿ
3 ಸಕವರಿಷ (95) 5ನೆಯ ಅಂಗಿರಸಂವತ್ಸರದ
4 ಕಾರ್ತ್ತಿಕ ಮಾಸದ ಪೂರ್ಣ್ಣಮೆ ತಲೆದಿವಸಮಾಗೆ ಬಿದಿ
5 ಗೆ ಸೋಮವಾರ ರೋಹಿಣಿನಕ್ಷತ್ರದಲ್ ಒಡೆಯಾರ್ ಶ್ರೀ ರಾಜೇನ್ದ್ರ
6 ಳದೇವಗುರುಕ್ಕಳ್ ಅರುಳಿಚ್ಚೆಯ್ಯದದಾವತು ಕೆರೆಗೆ ಬಿತ್ತುವ [ಚೋ
7 ಟ್ಟಮು ದೇವರ್ಗೆತಿರು [ವ] ಮುದಿಜ್ಗಿ ಬಿಟ್ಟ ಭೂಮಿಯುಮಂ ಕಲ್ವಟ್ಟ ಕೊಡುವುದಕ್ಕೆ ತಿರು
8 ವಾಯಿಮೊಳಿ ಪುದಿಯಿನಾಲ್ ಒಡೆಯಾರ್ ಧಾರಾವರ್ಷಕಂ ಈವನು ಶ್ರೋತ್ರಿಯ ಗ್ರಾಮದ

9 ಮಹಾಜನಮುಂ ಸ್ವಸ್ತಿ ಶ್ರೀಮತ್ಪ್ರಶಸ್ತಿ ಸಹಿತಂ ಸಮೆಯಮು
ವಿರ್ದ್ದು ಬಿಟ್ಟಧರ್ಮ್ಮಸ್ತಿತಿ
10 ಕ್ರಮಮೆಂತೆನ್ದಡೆ ಈಶಾನಈಶ್ವರಮುಡಿಯಾರ್ಗ್ಗೆ. ಗುಲದ ಮೂಡ
ನೆಯರದ ಪೂವಿನ ಸೆಟ್ಟಿಯುವರ ಎರಡು ದೆ
11 ವರ ಈಶಾನ ಈಶ್ವರಮಹಾದೇ ಮೂಲ ಸ್ತಾನನೊಡೆ
ಯಾರ್ಗ್ಗೆ. ತಿರುಮುಂದಿಗೆ ಕೊಟ್ಟುದು
12 ಶ್ರೀಯೂರ ಚಾಮುಣ್ಡಯ್ಯನ ಭೂಮಿಯುಲು ಪತ್ತು ಕೊಳಗ ಜೆಬೆ ಗದ್ದೆಯಂ
13 ಗಾಣಕೊನ್ದು ನನ್ದಾದೀವಿಗೆಯಾಗಲ್ ಈಶಾನ ಈಶ್ವರ ಮುಡಿ ಯಾರ್ಗೆ
ಕೊಟ್ಟುದು ಒಡೆಯಾ
14 ರ್ಕ್ಕೆ ಕರ್ಮ್ಮಧಾರಾಪೂರ್ವಕಂ ಈಶಂ ಈಶಾನ ಈಶ್ವರ ಮುಡಿಯಾರ್ಗ್ಗೆ
ಕೊಟ್ಟ ತಿವಳಿ 1 ದಟ್ಟ 3
15 ಬಣ್ಟಿಕೆ 3 ಫಲಂ 6 ಜಯಘಂಟೆ 1 ಫಲ ಕಾಳೆ 3 ಫಲ 15 ಆಗಲೀ
ಪಞ್ಚಮಹಾ
16 ಶಬ್ದಮಂ ತ್ರಿಕಾಳಂ ಬಾಜಿಸ ವುದಕ್ಕೆ ತ್ರಿಕಾಳಂ ದೇವತಾರ್ಚ್ಚನಂ
ಗೆಯ್ವುದಕ್ಕಂ ದೇವ
17 ರ್ಗ್ಗೆ ನನ್ದನವನಂ ಮಾಳ್ಪುದಕ್ಕಂ ಮಹಾದೇವರ ದೇವದೂವಿಸಲ್ಯಾ
ಪತ್ತರಲೊಂದು ಕೊರುರಿ
18 ಊರಲೊಕ್ಕಲಲೊನ್ದು ಪೊರೆಯುಂ ಪತ್ತು ಕೊಳಗ ಭತ್ತಮುಂ ಒನ್ದು
ಕಂತೆಯು ಬಣ್ಣಿ
19 ಗೆ ಮೂಗುಳಮುಂ ಕಪ್ಪಡಕ್ಕೆ ಪಳ್ತಿಯುಂ ಬ್ರಹ್ಮಲಿಂಗಿ ಭಳರ್ಗ್ಗೆ
ಕೊಟ್ಟುದು ಶ್ರೋತ್ರಿ
20 ಯೂರ ಮರಯ್ಯ ಸೆಟ್ಟಿಯ ಪೆಣ್ಡತಿ ಗುಣ್ಡಬ್ಬೆ ಮೂಲಸ್ಥಾನ ದೇವರ್ಗ್ಗೆ
ದೇಗುಲವಂಮಾ
21 ಡಿಸಿ ದೇವರ್ಗ್ಗೆ ದೇವ ಪೂವಿನ ಮುದನೆಸಯ್ಯ ತೆ ರೆಪಟ್ಟಿಪಾಳಿಯು
ಪೊನ್ನರ ಕೊಟ್ಟುಮ
22 ಣ್ಣರ ಕೊಣ್ಣು ಬಿಡಿಸಿದಡೆ ಶ್ರೋತ್ರಿಯೂರಮಾರಯ್ಯ ಸೆಟ್ಟಿಯಂ ಮಗಂ
ದೊರ್ರೆಯ್ಯ ಸೆಟ್ಟಿ

(ಸೂ–: ಈ ಶಾಸನವು ರಾಜೇಂದ್ರಚೋಳನು ತನ್ನ ಗುರುವಾಗಿದ್ದ ಈಶಾನ ಈಶ್ವರ ಒಡೆಯರಿಗೆ ಶಕ ವರುಷ (95)5ನೆಯ ಅಂಗೀರಸ ಸಂ॥ ಕಾರ್ತೀಕ ಮಾಸದ ಪೂರ್ಣಿಮೆ ತಲೆದಿವಸಮಾಗೆ ಬಿದಿಗೆ ಸೋಮವಾರ ರೋಹಿಣಿ ನಕ್ಷತ್ರ ಎಂದರೆ ತಾ॥ 23–10–1032. ಆಗುತ್ತದೆ ಎಂದು ಶಾಸನ ಇಲಾಖೆಯ

ಅಭಿಪ್ರಾಯ. ಈ ಶಾಸನದಲ್ಲಿ ಹಳೆಗನ್ನಡದ ರಳ ಕುಳಗಳನ್ನು ಉಪಯೋಗಿಸಲಾಗಿದೆ—ಸಂ.)

ANNAUL REPORT of the Mysore ARCHAEO LOGICAL Department for the year 1946. P. 55-56

**ಸಂಜನಗೂಡು ತಾಲ್ಲೂಕು ಶಾಸನ 175**

ಸುತ್ತೂರು ಗ್ರಾಮದ ನಾರಾಯಣಸ್ವಾಮಿ ದೇವಸ್ಥಾನದ ಹಿಂಭಾಗ ದಕ್ಷಿಣ ಪಾರ್ಶ್ವದಲ್ಲಿ ಗೋಡೆಯುಮೇಲಿರುವ ಕಲ್ಲಿನಲ್ಲಿ ಪ್ರಮಾಣ 5–3"-4.0

1 ಶ್ರೀಮತ್ತ್ರೈಲೋಕ್ಯಪುಜ್ಯಾಯ ಸರ್ವಕರ್ಮ ಸುಸಾಕ್ಷಿಣೇ ಪ್ರಳದಾಯ ನವೋ ನಿತ್ಯಂ ಕೇಶವಾಯ

2 ಶಿವಾಯ ಚ॥ ತತೋ ದ್ವಾರಾವತೀನಾಥಾಹೊಯ್ಸಳಾದ್ವೀಪಿಲಾಂಚ್ಛನಾಃ। ಜಾತಾಶ್ಶಶಪುರೇ

3 ತೇಶಾಂ ವಿನಯಾದಿತ್ಯ ಭೂಪತಿಃ॥ ಆ ವಿನಯಾದಿತ್ಯಂಗಂ ಪಾವನ ಚರಿತ್ರೆಕೆ

4 ಳೆಯ ಬರಸಿಗಮುಖಿಳೋರ್ವ್ವೀವರನುದೆಯಂಗೆಯ್ದಂ ಶ್ರೀವರ ಪದ ಪದ್ಮ ಭೃಂಗನಾ

5 ಯೆರೆಯಂಗ (ರಿ॥ಉ) ಭಯಕುಲಶುದ್ಧೆಯೆನಿಪಾ ಶುಭಲಕ್ಷಣೇ ಏಚ ಬರಸಿಯೆರಗ

6 ನೃಪಂ ..........ಪ್ರ.... ಗಳ್ಪೂವರ್ಪ್ಪುಟ್ಟಿದರಭಿನುತಭಲ್ಲಾಳವಿಷ್ಣು ವೃದ ಯಾದಿತ್ಯರು॥ ಅನ್ತಾ

7 ಮೂವರೊಳದೆ................ನುಂ ಸೌರ್ಯ್ಯಧನಂಜಯನುವೆನಿಸಿದ ವಿಷ್ಣು ವರ್ದ್ಧ

8 ನದೇವ........ತಾ............ಳ್ವಡೆ॥ ಮುದ್ರಿಸಲಾದಿ ರಾಜ ಚರಿತಂಗಳ ನಾತ ಚರಿತ್ರ ಮಾ

9 ವಗಂ ಮುದ್ರಿಸಲಾಜ್ಞೆ ಭೂತಳದೊಳುದ್ಧತರಪ್ಪರಗಂಡಗರ್ವ್ವವಂ ಮುದ್ರಿಸತೊಳಬಾ

10 ಳಬಳಮುಜ್ವಳ ಕೀರ್ತಿಜಗಂಗಳೆಲ್ಲಮಂ ಮುದ್ರಿಸೆ ಪೆಂಪುಮುದ್ರೆತನಗಾಗಿರೆ ವಿಷ್ಣು ಸಮು

11 ದ್ರದೊಪ್ಪವಂ॥ ಜಳನಿಧಿಯುಂ ಕೆಸರ್ಮ್ಮಸಗೆ ಕೂಡೆ ಕಲಂಕುವ ಬಾಡವಾಗ್ನಿಯು ತಳದೊ

12 ಳಗಿರ್ದ್ದಲಾಗೆಪ್ರೊ...........ವಶೇಷನಕಂಠನಾಳ ಸಂವಳನದೆ ನಿಂನನಂಜನು ಮುಳಿಂದು ಮುಳಿ

13 ಪ್ಪ.......ವೊಡ.......ಮುಳಿದಡೆ ತಾರಗುಂ ವಿಜಯವರ್ದ್ಧನನಾಕಲಿವಿಷ್ಣುವರ್ದ್ಧನ॥ ಚೋಳನ ಜೂ

14 ಬುವಾಳ..........ಳ್ಕು....... ಚೇರನನಟ್ಟಿ ಕಿಂಚ ಮಾಕಾಳಿವರಾಳನಂತುಳಿವ ಗಂಧಗಜಂ ಖಚನ

15 ಳ್ಳಿಯಂ........ಳನಬೆಂನಚಂಮುಟಿಗೆಯಿಂ ನಡೆತಂದೆನೆ ವೀರವಿಷ್ಣು ಭೂಪಾಳಕನೆಂಬ ಸಂಭ್ರಮ

16 ........ರಿ........ಳರಮಂಡಳಂಗಳೊಳು ॥ಅತನ ತನಯನ ಪೇರ್ಮೆಯೆಂತೆಂದಡೆ॥ ಕುಲಜನೆಯಾ

17 ದ ವಾನ್ವಯ ಸಿರೋಮಣಿ ಜೇಳ್ವವರ್ಗೀವಕಾವಸಚ್ಚರಿತೆಯನಿಪ್ಪ ಲಕ್ಷ್ಮೀಯಮುಗಂಕಡು ಚೆಲ್ವನೆಲೋ

18 ಕನೆಲ್ಲಮಂ ಸಲೆನಿಲೆಕಾವ ವಿಷ್ಣುವಿನಪುತ್ರಕನೆಂದೊಡೆ ಬಣ್ಣಿಸಲ್ಕೆ ಭೂವಳಯದೊಳಾ

19 ರ್ಪ್ವತಾ..........ಸಿಂಹನೃಪಾಳಕನಂ ನಿರಂತರಂ ॥ ತರಳವಿಲೋಚನಾಂಚಳ (ಕೆ) ಕೆಂಪಿನಿಸುಂ

20 ಬ...ಕ್ಕ.......ಗಳಂತರಿ ನರಪಾಳಸಂಕು....ಪನ್ದಲೆಕಯ್ಗೆ ತುರಂಗರಾಜಿಮಂ ದುರಕೆ ಗಜಾಳಿಶಾಲೆ

21 ಗೆ ಧನಂ.... ...ವಿಗೃಹಾಂತರಕ್ಕೆ ತ....ಕಡಿತಕ್ಕೆ ಉಂಡಿಗೆಗವೋಲೆಗವಾನರ ಸಿಂಗ ಭೂಪನ॥

22 ಅರಿಭೂಪರ್ಬ್ಬಂದಃ ಮೆಯೋರಿದೊಡವಯದಿಂ ತೋರಸೇಕ್ವರದ್ಪೆ ಶ್ರೀಶ್ವರ ವಕ್ಷಕ್ಷೇತ್ರ ನಿರ್ಧಾರಣ

23 ನಖನಿಕ ॥ ಚ್ಕ........ದೋರ್ದ್ದರ್ಪ್ಪಮಂ....ರಿರ್ಣ್ನಗಿರ್ಣ್ಣಸನಮನೊಗೆದ

24 ಸಂಚಳ...............ಘನರವಮು (ಮುನಾ) ನಾರಸಿಂಹಕ್ಷಿತೀಶಂ ॥ ಸ್ವಸ್ತಿಶ್ರೀ

25 ಮನ್ಮಹಾಮಣ್ಡಳೇಶ್ವರ ತ್ರಿಭುವನಮಲ್ಲ **ತಳಕಾಡು ಗಂಗವಾಡಿ ನೊಣಂಬವಾಡಿ ಬನವಸೆ**

26 **ಹಾನಂಗುಲ್ಲ**..............ಲ್ಗೊಂಡ ಭುಜಬಳವೀರಗಂಗಪ್ರತಾಪ**ಹೊಯ್ಸಳ ನಾರಸಿಂಹದೇವನ** ತತ್ಪಾದ

27 ಪದ್ಮೋಪಜೀವಿ ಶ್ರೀಮನ್ಮಹಾಪ್ರಧಾನಂ ಸರ್ವಾಧಿಕಾರಿ ಸೇನಾಪತಿ ದಂಡನಾಯಕ ಲಕ್ಷ್ಮಯನುಂದಂಡನಾ

28 ಯಕ ಅ...........ಯೆಂತೆಂದಡೆ ॥ ಧುರದೊಳಿ ನಿಂನನಾಮಕಹಳಾರವ

29 ಮುಗ್ರ.......ಕ್ಷೋಭ.........ದ ಮಂದಿ ವಿಜಚಾಪಮನಾದಿ ವಿಜೇಂದ್ರ ನೀಲಮಂ ವೀರಭಿಮುಮ

30 ವಳಂಹ......ಪೇಳ್ಧರಿಯೊಳಿಚಿತ್ರದಿಂಯಸಿವ ನಿಂನ್ನ ಪರಾಕ್ರಮನೆಂತು ನೋ
31 ಳ್ಪೊಡಂ ||...............ನಿನ್ನಭುಜಾಸಿ ವೇಶ್ಯೆ ಸಂಗದೊಳರಾಶಿತಿನಾಯಕರ
ನಾದರದಿಂ
32 ದಮುರ್ದ್ಧ........ಯು ಕೆರೆಲೆಂಬುವನೋವದೆ ಸೀಳ್ದು ನಲ್ಮೆಯಿಂ ಮರೆದು
ಮಹಾ
33 ............................ದಿಂ ಸಮರದೊಳಾಡುವಾಗರದ ಪಂದೆಯಿನಿಂ
34 ತೊ........ಲಗತ್ತ್ರ....ಯದ ತಿಲಾಬನೆ ನೀಂ ತೊಲಗಂನ್ಯನಾರಿಗಶ್ರವಂದೊಳ
35 ................ದು ಬಗ್ಗಿ ಪಂತಮರನ ನಾಮ ಕಾಹಳ ರವನೆ
36 ಗೆದತ್ತಿ.................ರುಂ ಮಹಾಪಶಾತ್ಯ ಪದವಿಯೊಳು ಜೀವಿಸುತ್ತವಿ
37 ರೆ ಶ್ರೀಮ........ನೊಳು ಶ್ರೀ ನಾರಸಿಂಹದೇವರು ರಾಜ್ಯಂಗೆಯ್ಯುತ್ತವಿರೆ ದಂ
38 ಡನಾಯಕ........ನದೀತೀರದ ಸೊತ್ತಿಯೂರ ರಾಜಧಾನಿಯಲು ಸಕವರ್ಷ
39 1091...............ಖಸು 13 ಸೋಮವಾರದಲು ಶ್ರೀನಾಗಕೇಶವದೇವರಂ ಸ
40 ಪ್ರ...... ....ಖಂಡಸ್ಫುಟಿತ ಜೀರ್ಣೋದ್ಧಾರಕಂ ಜೆಗ್ಗಲಿಯಂ ಶ್ರೀ ನಾರಸಿಂ
41 ಹದೇವ ..... ....ಯ ನಾಡ ಸಮಸ್ತ ಪ್ರಭು ಗಾವುಣ್ಡುಗಳ ಕ
42 ಯ್ಯ................ಡು ಮತ್ತಂ ಸೊತ್ತಿಯೂರ ಮೂಲಿಗ ಮಹಾಜನಂಗ
43 ಳ..........ವದಕೆರೆಯ.... ...ಬಿನಮೊದಲಲೆರಡಾಸಲಗೆ ಗದ್ದೆಯು ವೊಂದು
ಜೀಲಿ ಬೆದ್ದಲೆ
44 ಯ ಧಾರಾಪೂರ್ವಕಂ...........ಬಿಟ್ಟರು ಯಿಧರ್ಮ್ಮವಂ ಪ್ರತಿಪಾಳಿ
ಸುವ ಮಹಾ ಪು
45 ಷ್ಪಗ್ಗ.........ಪಾರ........ಯಿರ ಕವಿಲೆಯಂ ಕೋಡುಂಕೊಳಗುಮಂ ಸುವ
ಣ್ಣದೊ
46 ........ಕಟ್ಟಿಸಿ ಚತು............ಗ್ಗ ಧಾರಾಪೂರ್ವಕಂ ಮಾಡಿಕೊಟ್ಟ ಮಹಾ
ಫಲವಕ್ಕುಯಿ
47 ........ .......ಡಿಯಲುಮ........ತಂಕಗಾ ಪುಣ್ಯಕ್ಷೇತ್ರದಲಾ ಬ್ರಾಹ್ಮರು ಮಂ
48 ................ಪ ಮನೆಯುಂಗವದೆಂತೆನೆ ॥ ಸ್ವದತ್ತಾಂ ಪರದತ್ತಾಂ ವಾ ಯೋ
49 ಹರೇತಿ ವಸುನ್ಧರಾಂ । ಷಷ್ಟಿ ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ
ಕ್ರಿಮಿಃ॥ ನ ವಿಷಂ ವಿಷಮಿತ್ಯಾಹುಃ
50 ದೇವಸ್ವಂ ವಿಷಮುಚ್ಯತೇ । ವಿಷಮೇಕಾಕಿನಂ ಹನ್ತಿದೇವಸ್ವಂ ಪುತ್ರ
ಪೌತ್ರಕಂ ॥ ಸಾಮಾನ್ಯೋಯಂ ಧರ್ಮ
51 ಸೇತುರ್ನೃಪಾಣಾಂ ಕಾಲೇ ಕಾಲೇ ಪಾಲನೀಯೋ ಭವದ್ಭಿಃ। ಸರ್ವಾ
ನೇತಾನ್ಭಾವಿನಃ ಪಾರ್ತ್ಥಿವೇನ್ದ್ರಾನ್ಭೂ

52 ಯೋಭೂಯೋ ಯಾಚತೇ ರಾಮಚಂದ್ರಃ ॥.... ಇದಂ ಮಾ....ಂ ನಳಸವ....

( ಈ ಶಾಸನವು ಶಾಲಿ. 1091ಕ್ಕೆ ಸರಿಯಾದ ಕ್ರಿ. ಶ. 1169ರ ಕಾಲದ್ದೆಂದು ಶಾಸನ ಶಾಖೆಯ ಅಭಿಪ್ರಾಯ)

19

ನಂಜನಗೂಡು ತಾಲ್ಲೂಕು ಸುತ್ತೂರು ಸೋಮೇಶ್ವರ ದೇವಸ್ಥಾನದ ಉತ್ತರದ ಕಡೆ ಗೋಡೆ ಸಮೀಪದಲ್ಲಿ ನಟ್ಟಗಲ್ಲು (ಮೇಲ್ಗಡೆ ಹೋಗಿದೆ) ಪ್ರಮಾಣ 5x4

1 ಪಟ್ಟಿ—

1 .....................ನೂರನೆಲೆ

2 ವೀಡಿಸಲು ಪ್ರಥುವಿ ರಾಜ್ಯಂಗೆಯ್ಯುತ್ತಮಿರಲು ತತ್ಪಾದಪದ್ಮೋಪಜೀವಿ ಶ್ರೀಮಕುಮಾ

3 ರಲಕ್ಷ್ಮೀದೇವ ದಂಡನಾಯಕರು ಸಾತಿವೂರ ಕಾಳಗದೊ

4 ಸಕ(ವ)ರಿಷ 1118ನೆಯ ರಾಕ್ಷಸ ಸಂವತ್ಸರದ ಹಿರಿಯ

5 ನಾಡೆಡನಾಡ ಸೊತ್ತಿಯೂರ ಶತ್ರುಗಂಡಕ್ಕೇಸೆ ಯಭರಸಾ

6 ಲೆಯನ ತಂಮ್ಮಂ ಮಂಚೆಯಣಂ ಹಲಬರಂ ಕೊಂದು....

(ಈ ಶಾಸನವು ಕ್ರಿ. ಶ. 1196 ಎಂದು ಹೇಳಲಾಗಿದೆ)

20

ಅದೇ ಸ್ಥಳದಲ್ಲಿ ನೆಟ್ಟಿರುವ ಇನ್ನೊಂದು ವೀರಗಲ್ಲು ಪ್ರಮಾಣ 4x2

1 ಪಟ್ಟಿ—

1 ...............................

2 ಯುತ್ತಿರಲು ಶ್ರೀಮನ್ಮಹಾಪ್ರಧಾನ ಹಿರಿಯ

3 ಗಯಕ ಮಂಚಯ್ಯಂಗಳ ಜಿಸಡಿ ಮಲಿಸಟ್ಟಿ

11 ಪಟ್ಟಿ—

4 ಮಗನೆಕ್ಕಟಿ ಗ ಚಿಗಣ ಕಣೆಯ ಲಾಬವರದೊಳು ಮೂ

5 ದಲಿಸಿ ಹುಕು ಹಲಬರಂ ತಿವಿದು ಸುರಲೋಕ ಪ್ರಾಪ್ತ.

(The date is last and the characters belong to about the 13th Century A. D.)

P, (124)

21

ಅದೇ ಸುತ್ತೂರು ಅಂಕದ ಬಾಗಿಲಲ್ಲಿರುವ ತುಂಡುಗಲ್ಲು

ಪ್ರಮಾಣ 1 x2

1 ಸ್ವದತ್ತಂ ತನ್ನಿತ್ತುದಕ್ಕೆ ಪರದತ್ತಂ ವಾಪ
2 ರರಿತ್ತುದಕ್ಕೆ ಓಹರೇತು ಅಳಿವೊವಸುನ್ಧ
3 ರಿ ಭೂವಿಷಷ್ಠಿ ವರ್ಷ ಸಹಸ್ರಾಣಿ ಅ
4 ರವತ್ತು ಸಾವಿರವರ್ಷ ವಿಷ್ಟಾಂಯಾಂ ಜಾಯ
5 ತೆಕ್ರಿಮಿ ಪೆಲವುಳುವಾಗಿ ಪುಟ್ಟುಗೆ

(Annual Report of the Mysore Archaeological Department for the year 1945 P. 123-125)

ನಂ 166

ನಂಜನಗೂಡು ತಾಲ್ಲೂಕು ಸುತ್ತೂರು ಗ್ರಾಮದಲ್ಲಿ
ಶ್ರೀ ಸೋಮೇಶ್ವರಸ್ವಾಮಿ ದೇವಸ್ಥಾನದ ನವರಂಗ
ಮಂಟಪದಲ್ಲಿ ಉತ್ತರದಕಡೆ ವಾಯುವ್ಯ ಮೂಲೆಯಲ್ಲಿ
ರುವ ಕಂಬದಲ್ಲಿ

ಸ್ವಸ್ತಿ ಶ್ರೀ॥ ಕಾಶ್ಯಪಗೋತ್ರದ ಹರಿ
ಯೂರು ರೊಡೆಯ ಗಂಗಗೌಡ
ಮಾರಾಯರ ಮಗ ಜಗದೇವ ಮಾ.......
ಬಿಟ್ಟಿಮಾರಾಯ ನೆಲಿಸಿದ
ಮೊದಲಾಕಾರ ಕಂಭ

ಶ್ರೀ ಶ್ರೀ ಶ್ರೀ

(ಈ ಶಾಸನದಲ್ಲಿ " ಬಿಟ್ಟಿಮಾರಾಯ " ಎಂದಿರುವುದರಿಂದ ಇದು ಪ್ರಾಯಃ ಬಿಟ್ಟಿದೇವ ಅಥವಾ ವಿಷ್ಣುವರ್ಧನನ ಕಾಲದ್ದೆಂದು ಅಭಿಪ್ರಾಯ ಪಡಲಾಗಿದೆ)

ನಂಬರ್ 167 ಮೊದಲನೆಯ ಕಂಭದಲ್ಲಿ "ಶಾಲಿವಾಹಶಕ 1186 ನೇ
ರಕ್ತಾಕ್ಷಿ ಸಂ॥ ಅಷಾಢ ಶುದ್ಧ ಬಿದಿಗೆಯಲು
ಸೋಮನಾಥ ದೇವರ ಮಂಟಪಕ್ಕೆ............ಭಕ್ತಿ ಎಂದಿದೆ

| | | |
|---|---|---|
| " | 168 | ಡಿಟೊ |
| " | 169 | ಡಿಟೊ |
| " | 170 | ಡಿಟೊ |
| " | 171 | ಇದರಲ್ಲಿ "ಯಿಶ್ವಸಂ ॥ ಭದ್ರಪದಮಾಸ " ಎಂದಿದೆ |
| " | 172 | ಇದರಲ್ಲಿ ಶಾ. ಶಕ 1186" ಎಲದಿದೆ. |
| " | 173 | ಈ ಬಾಬತ್ತು ಏಳು ಕಂಭಗಳಲ್ಲಿಯೂ ಸೋಮನಾಥದೇವರ ಮಂಟಪಕ್ಕೆ ಶಾಲೀವಾಹನ ಶಕ ಇವುಗಳನ್ನು ನಮೂದು ಮಾಡಿ ಪ್ರತಿಯೊಂದು ಕಂಭದಲ್ಲಿಯೂ ಅವರವರ ಹೆಸರು ಬರೆದಿದೆ. |

174 ಈ ಕಂಭದಲ್ಲಿಯೂ ಶಕ ಸಂವತ್ಸರ, ಮತ್ತು ಹೆಸರು ಬರೆದಿದೆ.
(ಈ ಕಂಭಗಳನ್ನು ತುಂಡುಮೂಳ ದೇವಸ್ಥಾನ ಪುನರ್ರಚನೆಗೆ ಉಪಯೋಗಿಸಿ ಕೊಂಡಿರುವುದಾಗಿ ಸುತ್ತೂರು ಶ್ರೀಗಳು ತಿಳಿಸಿದ್ದಾರೆ—ಸಂ

ನಂ. 163

ಸುತ್ತೂರು ಶ್ರೀ ಮಠದ ಬಲಭಾಗದಲ್ಲಿ

ಪ್ರಮಾಣ 4'6"x4'5"

4 ಯ್ಯನವರ ಮಕ್ಕಳು..............
5 ಹಾರಾಯರಿಗೆ ಧರ್ಮ್ಮವಾಗಬೇಕೆಂದು ಸಹಿರಣ್ಯೋದಕದಾ
ನಧಾರಾಪೂರ್ವಕವಾಗಿ ಸ
6 ಮರ್ಪಿಸಿದವಾಗಿ ಆ ಚಂದ್ರಾರ್ಕ್ಕ ಸ್ಥಾಯಿಯಾಗಿ ಆ ಸೋಮೇಶ್ವರದೇವರ
ಮುಡುಪಂಗೆ
7 ಭಂಡಾರಕೆ ಸಲುವುದು ಯೆಂದು ವಶಿಷ್ಟಗೋತ್ರದ ಆಶ್ವಾ
ಯನ ಸೂತ್ರದ ಶಿರಮತು....... ....
8 ರ ನರಸಪ್ಪಯ್ಯನವರ ಮಕ್ಕಳು ರಾಮಪ್ಪಗಳು ಕೊಟ್ಟ ಕ್ರಮ
ಭೂಧಾನ ಧಂರ್ಮ್ಮದ
9 ಶಿಲಾಶಾಸನ ॥ದಾನಪಾಲನಯೋರ್ಮ್ಮಧ್ಯೇ ದಾನಾಚ್ಛ್ರೇ
ಯೋನುಪಾಲನಂ ದಾ
10 ನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ ॥
ಸ್ವದತ್ತಾದ್ದ್ವಿಗುಣಂ
11 ಪುಣ್ಯಂ ಪರದತ್ತಾನುಪಾಲನಂ । ಪರದತ್ತಾಪಹಾರೇಣ
ಸ್ವದತ್ತಂ ನಿಷ್ಫಲಂ ಭವೇತ್ ॥ ಸ್ವದತ್ತಾಂ
12 ಪರದತ್ತಾಂ ವಾ ಯೋ ಹರೇತ ವಸುನ್ಧರಾಂ ॥ ಷಷ್ಟಿವರುಷ ಸ ಹಸ್ರಾಣಿ
13 ವಿಷ್ಠಾಯರಾಂ ಜಾಯತೇ ಕ್ರಿಮಿ ॥ ಈ ಧರ್ಮ್ಮವ ಅಳುಪಿದವ
ವಾರಣಾಸಿಯ ತಡಿಯಲು ಕೋ
14 ಟಿ ಕಪಿಲೆಯುಂ ಕೊಂದ ಪಾಪಕ್ಕೆ ಹೋಹರು....... ...............
15 ........................ಈ ಧರ್ಮ್ಮವ ಅಳುಪಿದವ...................

(ಮೇಲುಭಾಗ ಮೂರು. ಪಂಕ್ತಿಗಳು ಹೋಗಿವೆ.)

(ಈ ಶಾಸನವು 13ನೆಯ ಶತಮಾನದ್ದೆಂದು ಹೇಳಲಾಗಿದೆ.)

ನಂ. 43.

**ನಂಜನಗೂಡಿಗೆ ಉತ್ತರದಲ್ಲಿ ತೀರ್ಥಘಟ್ಟದ ಮಂಟಪದ**

ಮೇಲ್ಛಾವಣಿಯ 2ನೆಯ ಅಂಕಣದ ಕಲ್ಲಿನಲ್ಲಿ

ಸಂಜನಗೂಡು 19ನೆಯ ಸಂಬರು ಶಾಸನದ ತಿದ್ದುಪಟಿ

1 ಶುಭಮಸ್ತು ನಮಸ್ತುಂಗ ಶಿರಶ್ಚುಂಬಿ ಚಂ
2 ದ್ರಚಾ (ಮರಚಾ)ರವೆ ತ್ರೈಲೋಕ್ಯ ನಗರಾರಂ
3 ಭ ಮೂ (ಲ ಸ್ತಂಭಾ)ಯ ಶಂಭವೆ । ಸ್ವಸ್ತಿ ಶ್ರೀಜ
4 ಯಾ (ಭ್ಯುದಯ ಶಾಲಿ) ವಾಹನ ಶಕ ವರುಷ 1436
5 ಸಂದ (ಭಾವನಾಮ) ಸಂವತ್ಸರದ ಶ್ರಾವಣ
6 ಶುಧ........ಸುತ್ರೂತ್ರ ಸಿಂಹಾಸನಾ
7 (ದ ಪಟ್ಟದ ಭಂ)ಡಾರಿ ಬಸವಪ್ಪ
8 ಒಡೆಯ (ರವರು)........ಸಂಗಮೇಶ್ವರದ
9 ಲಿತಂ....................
10 ಯಾ........ತೆಂದರೆ ತಮಕಾರ್ಯ್ಯ
11 ಕೆ............(ಕೊ) ತ್ತಾಗಾಲದ ಸ್ಥಳದಲ್ಲಿ ತಮ
12 ಗೆಲಿಕ............ಗಿ ಯಾಗಿ ನಡದು ಬಾಹ
14 ಸಿಂಡೆನಹಳ್ಳಿಗ್ರಾಮ ಅದಕೆ ಸಲುವ ಸರ್ವ ಸ್ವಾಂಮ್ಯ
15 ಲೂ ಸಂಗಮೇಶ್ವರ ದೇವರಲ್ಲಿ ವಾಸವಾಗಿ ಯಿಹ
16 **ಸಿರಿಗಿರಿ ವಡೆಯರಿಗೆ** ಅರ್ಧಭಾಗ ಕಳದು ಉ
17 ಳಿದ ಆರ್ದ್ಧಭಾಗಿ ಆದಕೆ ಸಲ್ಲುವ ಸರ್ವ್ವ ಸಾಂ
18 ಮ್ಯ ಸಹ ಸಂಗಮೇ (ಶ್ವ)ರ ದೇವರ ಬಡ (ಗ) ಲಾಗಿಯರ್ದ್ಧ
19 ಭಾಗಿನ (          )ದಿಂಪಡುವಲಾಗಿ ಯಿದ ಪುಷ್ಪ
20 ದ ತೋಟ........ಹಳಿಲಿ ನಮ (ಗೆ)ನಡವ ಬಾಹಗ
21 ದೆ ಖ 1 ............**ಸಂಗಮೇಶ್ವರ ದೇವರಿಗೆ ಬಸ**
22 **ವಪ್ಪ**........ಸಮರ್ಪ್ಪಿ(ಸಿ)ದರು ಯಿಾಗ್ರಾ
23 ಮ ಗ........ನೂ ನಜಲುಗೂಡ ನಂ
24 ಜೆರ....ಅಗಸ್ತ್ಯ ನಾಥನೊಳು
25 ಂಮು....ಕೊಂಡು ಸಂಗಮೇಶ್ವರ
26 ದೇವ....ಕಾರ್ಯವನು ತಂಮ ಪು
27 ತ್ರಪ....ಯಾಗಿ ಹುಟ್ಟಿದ ಆ
28 ದಕ್ಕೆ....ಆ ಚಂದ್ರಾರ್ಕ್ಕವಾಗಿ ಮಾ
29 ಡಿ ಕೊಂ....ಸಂಗಮೇಶ್ವರ ದೇವರ ದೇವಲ್ಯ
30 ಕೆ ಸಿರಿಗಿರಿ ಒಡೆಯರು ಅಲ್ಲಿದ ಮಹತ್ತು ಕರ್ತ್ತರು
31 ಯಿಂದಕೆ ತಪಿದವರು ಗಂಗೆ ತಡಿಯಲಿ ಕಪಿ
32 ಲೆನು ಬ್ರಾಹ್ಮಣನ ಕೊಂದಪಾಪಕೆ ಹೋಹರು ॥



ಸುತ್ತೂರು ವೀರಸಿಂಹಾಸನದ ಬಳಿ ಇರುವ ಶ್ರೀ ಸೋಮೇಶ್ವರ ದೇವಾಲಯದ ಪ್ರಾಚೀನ ಕಟ್ಟಡದ ಕಲಾಕೃತಿ

33 ಸ್ವದತ್ತಂ ಪರದತ್ತಂವಾ ಯೋ ಹರೇತ ವಸುಂಧರಾ
34 ಷಷ್ಟಿರ್ವರುಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ.

(ಈ ಶಾಸನ ಕಾಲ ಕ್ರಿ. ಶ. 1514)

Annual Report of the Mysore Archaeological Department for the year 1936. P. 115-116

ನಂ. 292

ಹುಲ್ಲಹಳ್ಳಿ ಹೋಬಳಿ ಹೆಡಿಯಾಲ ಗ್ರಾಮದಲ್ಲಿ ಪಟೇಲ್ ಚಿಕ್ಕಲಿಂಗಪ್ಪನ ಹೊಲದಲ್ಲಿ ನಿಂತಿರುವ ಕಲ್ಲು.

ಪ್ರಮಾಣ—6'x2'3"

1 ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನಶಕ ವರುಷ
2 1436 ಸಂದು ವರ್ತ್ತಮಾನ ಭಾವ ಸಂವತ್ಸರದ ಕಾರ್ತ್ತಿ
3 ಕ ಶು 5 ಲೂ ಸುತ್ತೂರ ಸಿಂಹಾಸನದ ಪರ್ವತ ಒಡೆಯರ
4 ಶಿಷ್ಯರು ಭಂಡಾರಿ ಬಸವಪ್ಪ ಒಡೆಯರು ನಂಜೆಲುಗೂ
5 ಡು ಕಪಿಲಾ ಕಂಬಡಿನೀ ಸಂಗಮದ ತೆಂಕಣ ತಡಿಯಲ್ಲಿ
6 ತಾವು ನೂತನ ಪ್ರತಿಷ್ಟೆಯಾಗಿ ಮಾಡಿದ ಸಂಗಮೇಶ್ವರ
7 ದೇವರ ಶ್ರೀ ಕಾರ್ಯಕ್ಕೆ ಅಲ್ಲಿ ಗ್ರಾಸವಾಗಿ ಯಿಹ ಸಿರಿ
8 ಗಿ ದೇವ ಒಡೆಯರು ದೇವರಿಗೂ ಅವರ ಕೂಡ ಸಹ
9 ವಾಸವಾಗಿ ಯಿಹ ಹಿರಿಯರುಗಳಿಗೂ ಅವರ ನಯಿವೇ
10 ದ್ಯ ।ಪಲ ಪಚಸಿತ ಪರಿಹರಗಳು ನಡೆಪಿದಕೆ ಕೊಟ್ಟ ಗ್ರಾ
11 ಮ ಯೆತ್ತುಗದ ಮುಳೂರ ಹೆಡೆಯಾಲ ಸ್ಥಳದಲ್ಲಿ
12 ಆ ಮುಳೂರ ಪ್ರಭು ವಿರಪಂಣ ಯೊಡೆಯರ ಮಕ್ಕಳು ನಂ
13 ಜಿನಾತ ಬಂದಿಯಪ್ಪ ಚಿಕ್ಕನಂಜಯ್ಯನವರು ನಂಮುಕಯ್ಯ
14 ವಿಕ್ರಯವನು ತೆಗೆದುಕೊಂಡು ಆ ಗ್ರಾಮದ ಚತು ಸೀಮೆ
15 ಗೆ ಲಿಂಗಮುದ್ರೆಯ ಕಲ್ಲನು ನಟ್ಟಿಕೊಟ್ಟು ನಮಗೆ ಸರ್ವಮಾ
16 ನ್ಯವಾಗಿ ಕೊಡಗಿಯಾಗಿ ನಡಸಿಬಹ ಚಿಲ್ಲಹಳ್ಳಿ
17 ಯ ಗ್ರಾಮ ಒಂದನೂ ಅದಕೆ ಸಲುವ ಸರ್ವ್ವಸ್ವಾಮ್ಯ ಸಹ ವಾ
18 ಗಿ ಆ ಸಂಗಮೇಶ್ವರ ದೇವರಿಗೂ ಅಲ್ಲಿ ವಾಸವಾಗಿ ಯಿಹ ಸಿರಿ
19 ಗಿರಿದೇವ ಒಡೆಯರು ದೋರಿಗೂ ಸಮಭಾಗಿಯಾಗಿ ಆಚಿ
20 ಲ ಹಳೆಯ ಗ್ರಾಮ ಒಂದನು ಸಮರ್ಪಿಸಿದೆವುಯೆಂದು ಬ
21 ರಸಿದ ಧರ್ಮಶಾಸನ ಯಿಾಗ್ರಾಮವನೂ ಆಮೂಳೂರಪ್ರಬು
22 ಗಳು ನಂಜಿನಾಥ ಬಂದಿಯಪ್ಪ ಚಿಕ್ಕನಂಜಯ್ಯನವರು

23 ತಂಮಿಂದ ಮತಾರಿಂದಲೂ ವೃಷಹದಿ ಬಾರದ ಹಾಗೆ ತಾವು
24 ಕೊಟ್ಟಂತಹ ದರ್ಮವು ತಂಪು ತಂಮ ವಂಶ ಪಾರಂಪಾರಿಯಾಗಿ
25 ಆ ಚಂದ್ರಾರ್ಕ್ಕ ಸ್ಥಾಯಿಯಾಗಿ ಸರ್ವ್ವ ಮಾಂನ್ಯವಾಗಿ ನ
26 ಡಸಿಬುಹರು ಯಿದಕ್ಕೆ ತಪ್ಪಿದವರು ವಾರಣಾಸಿಯಲ್ಲಿ
27 ಗೋವನೂ ಬ್ರಾಂಹ್ಮಣರನೂ ಕೊಂದ ಪಾಪಕ್ಕೆ ಹೋಹ
28 ರೂ॥ ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾ
29 ಷಷ್ಟಿರ್ವ್ವರುಷ ಸಹಸ್ರಾಣಿ ವಿಷ್ಟಾಯಂ ಜಾಯ
30 ತೇ ಕ್ರಿಮಿಃ ॥

(ಈ ಶಾಸನದ ಕಾಲವು ಕ್ರಿ. ಶ. 1514 ಎಂದು ಹೇಳಲಾಗಿದೆ.)

EPigraphia Carnatica vol.

XIV Supplemenary inscriptions in the Mysore and mandya Districts (P. 153-154

ಎ.ಪಿ. ಗ್ರಾಪಿಯಾ ಕರ್ಣಾಟಕ ಸಂ. XIV ಸಪ್ಲಿಮಿಂಟರಿ ಇನ್ಸ್‌ಕ್ರಿಪ್‌ಷನ್ಸ್ ಮೈಸೂರು ಡಿಸ್ಟ್ರಿಕ್ಟ್ (ಪು. 256-1943)

ಅದೇ ಸ್ಥಳದಲ್ಲಿ 4ನೆಯ ಕಲ್ಲು

1........ನ........
2............ವಸಭಾರದ............
3............ದರಜೆ ಗದೆಯು ಕೊಟ್ಟು.....ಹುಡುಗನು
4............ವೀರಗಾಣಿಕೆಯನು ದೇವರಿಗೆ ನೈವೇದ್ಯ ಕಾಲ
5.............ಂದುದಿಪದ ಫಲ ತಂಮದೆಂದು ದೇವಾಪ್ಪುಥ್ವಿಯ
6 ಮಹಾ ಮಹತ್ತಿನೊಳಗಾದ ಸುತ್ತುರ ಸಿಂಹ್ವಾಸನ ವಳಿ
7 ಕೆಯಗಿ ವರಾಡಿದ ಧರ್ಮ್ಮಕ್ಕೆ ತಪ್ಪಿದ ಲಿಂಗವಿರನು ತಂನಂ
8 ತಾಯಿಗೆ ಅಳುಪಿದ ಹಾಗೆ । ದೇವಲೋಕಮತ್ರ್ಯ....
9 ಕೆ ಹೊರಗು । ಅವನಿಗೆ ತೀರ್ತ್ಥ ಪ್ರಸಾಥ
10 ವಿಲ್ಲ ಆವರಿಂದದವಿರವಲ್ಲ

44

ನಂಜನಗೂಡಿಗೆ ಉತ್ತರ ತೀರ್ಥಘಟ್ಟದ ಮಂಟಪದ 2ನೆಯ ಅಂಕಣದ ಮೇಲ್ಛಾವಣಿಯ ಕಲ್ಲಿನಲ್ಲಿ ನಂಜನಗೂಡು 20ನೆಯ ನಂ. ಶಾ. ತಿದ್ದುಪಡಿ

ಪ್ರಮಾಣ 8'x2'

1 ಶುಭಮಸ್ತು ನಮಸ್ತುಂಗ ಶಿರಶ್ಚು
2 ಂಬಿ ಚಂದ್ರಚಾಮರಚಾರವೆ ತ್ರೈ

3 ಲೋಕೈ ನಗರಾರಂಭ ಮೂ [ಲ ಸ್ತಂಭಾ]ಯ ಶಂ
4 ಭವೆ। ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾ
5 ಹನಶಕ ವರುಷ 1436 ನೆಯ (ಸಂದ ವ) ರ್ತ್ತಮಾ
6 ಭಾವ ಸಂವತ್ಸರದ ಶ್ರಾವ(ಣ ಶು)........1
7 **ಲೂ ಸುತೂರ ಸಿಂಹಾಸನದ ಪ (ಟ್ಟದ)........ಭ**
8 **ಂಡಾರಿ ಬಸವಪ ಒಡೆರೂ ಕಪಿಲಾ** (ನದಿಯ)
9 ತೆಂಕಣ ತಡಿಯಲಿ ತಾ ಉ ನೂ (ತನವಾಗಿ ಪ್ರತಿಷ್ಟೆ) ಮ
10 ಡಿದ ಸಂಗಮೇಶ್ವರ ದೇವರಲಿ ವಾಸವಾಗಿ (ಹಸಿರಿಗಿರಿವ) ಡೆ
11 ರಿಗೆ ತಮಗೂ ತಂಮ ಕಡೆ ಸಹ (ವಾಸವಾಗಿ ಹ) ಹಿರಿ
12 ಯರುಗಳಿಗೂ ನೈವೇದ್ಯ ಮೇಲುವೆ (ಚ್ಚ) ಗಳಿಗೆ
13 ಮೂಡಣ ಕೋಟೆಯ ಸೀಮೆಯಲ್ಲಿ ತನು (ಗೆ)ಲಿಂ
14 ಗ ಮುದ್ರೆ ಶಿಲಾಶಾಸನ ಪೂರ್ವಕ (ವಾಗಿ ಕೊಟ್ಟ) ಯಿಹ
15 ಬೊಪ್ಪನ ಹಳಿಯ ಗ್ರಾಮ ಅವಕೆ........ಯ
16 ಸಹ ವಳಲ ವಾಡಿಯ ಲಿಂಗವ........ದಿಯಾ
17 ಗ ನಡದು ಬಾಹಗವೆ ಖ 1 ಗೊರ........ತೆಂಕ
18 ಲಾಗಿಗದೆ ಖ 2 ಮುಳೂರ ಲಿಂಗ........ಗಿಯಾ
19 ಗ ನಡೆದು ಬಾಹ ಭೂಮಿ 500 ಸಂ........ತಿ ಗೆ ಬ
20 ಡ (ಗ)ಲಾಗಿ ತಾ ಉ ಬಿತ್ತಿ ಬೆಳೆದ ತೆಂ........ಪಡು
21 ವಲು ಸಂಗಮೇಶ್ವರ ದೇವರಿಗೆ ಬಿಡದ........ಡೆತಂ
22 ಗಿನ ತೋಟ ಯೆತ್ತಗದ ಮುಳಿ ಹೆದ........ದಚಿ
23 ಲ ಹಳ್ಳಿಯ ಗ್ರಾಮದಲಿ ಸಂಗಮೇಶ್ವರ........ಯ್ಯ
24 ರ್ದಭಾಗಿ ಕಳದು ಉಳಿದ ಅರ್ದ್ದ........ನು
25 **ಸಿರಿಗಿರಿ ಓಡೆರು ದೇವರಿಗೆ ಭಂಡಾರಿ** (ಬಸವಪ್ಪ)ಒ
26 **ಡೆರು** ಸಮರ್ಪಿಸಿದರೂ ಯಿದಕೆ........ಗಂ
27 ಗೆಯ ತಡಿಯಲಿ ಕಪಿಲೆನೂ ಬ್ರಾ........ದಪಾ
28 ಕ್ಕೆ ಹೋಹರು ಸವತಾಂ ಪರದ........ಶಿವ
29 ಸುಂಧರಾ।ಷಷ್ಟಿರ್ವ್ವರುಷ ಸಹಸ್ರಾ........ಜಾ
30 ಯತೆ ಕ್ರಿಮಿ।ಸ್ವದತ್ತಾದ್ವಿಗುಣಂ........ಸು
31 ಪಾಲನಂ। ಪರದತಾಪ ಹಾರೇಣ........ಲಂ
32 ಭವೇತ್॥

(ಈ ಶಾಸನದ ಕಾಲ ಕ್ರಿ. ಶ. 22–7–1514 ಎಂದು ಹೇಳಲಾಗಿದೆ)
Annual Report of the Mysore Archaeological
Department for the year 1936. P. 118)

ನಂ. 124

ನಂಜನಗೂಡು ತಾಲ್ಲೂಕು

ದೇವನೂರು ಗ್ರಾಮದ ಪುರದಯ್ಯ ದೇವಾಲಯದ

ಸಮೀಪದಲ್ಲಿರುವ ಕಲ್ಲು

ಸ್ವಸ್ತಿ ಶ್ರೀ ವಿಜಯಾ........ಬ್ಧಿ ಶಾಲಿವಾಹ
ನ ಶಕ ವರುಷ ಸಾ 1437ನೆಯ ಯಿಾ
ಸ್ವರ ಸಂವತ್ಸರದ ವಯಿ ಶಾಖ ಸು 1 ಲು
ಶ್ರೀಮನು ಮಹಾಸಾಳುವ........ಲಿಂಗ
ರಾಜರು ಸುತ್ತೂರು ಸಿಂಹಾಸನ ದಲು........

(ಈ ಶಾಸನದ ಕಾಲ ಕ್ರಿ. ಶ. 1515 ಎಂದು ಹೇಳಲಾಗಿದೆ.
ಮೈಸೂರು ಡಿ ॥ ಶಾಸನಗಳ I ಭಾಗ)

ನಂ. 29

ಅದೇ ಸುತ್ತೂರು ಗ್ರಾಮದಲ್ಲಿ ಸೋಮೇಶ್ವರ ದೇವಸ್ಥಾನದಲ್ಲಿ ಮುಖ
ಮಂಟಪದ ಎಡಕ್ಕೆ ನಿಲ್ಲಿಸಿರುವ ಕಲ್ಲು

ಪ್ರಮಾಣ 3x2

1 ಶ್ರೀಸೋಮೇಶ್ವರನೇ ಗತಿ॥ ವಿರೋಧಿ ಸಂವತ್ಸರದ ಮಘ ಬ 2 ಲೂ ಶ್ರೀ
2 ಶ್ರೀ ಮಹಾದೇವದೇವೋತ್ತಮ ಸುತ್ತುರ ಸೋಮೇಶ್ವರ ದೇವರೂ ಶ್ರೀಮನು
3 ಂ ಮಹಾಮಂಡಳೇಸ್ವರ ರಾಮರಾಜತಿರುಮಲರಾಜೈಯ್ಯದೇವ ಮಹಾ ಅ
4 ರಸುಗಳಯ್ಯನವರಕಾರ್ಯಕೆ ಕರ್ತ್ತರಾದ ಭದ್ರಯ್ಯನವರು ಸುತ್ತು ರಪ್ಪ
5 ಟದ ಹಿರಿಯರುಗಳಿಗೆ ಕೊಟ್ಟ ಸುತ್ರಯದ ಪಟ್ಟಯ ಕ್ರಮವಂತೆಂ-
6 ದರೆ ಸುತ್ತುರ ಸೋಮೇಶ್ವರ ದೇವರ ಅಂಗರಂಗ ಭೋಗಕ್ಕೆ ಸಲುವ ಮೂಗೂ
7 ರ ಸೀಮೆಯ ತಾಯೂರ ಸ್ಥಳದ ಹೋಳಿಯ ಸುತ್ತುರ ಗ್ರಮ ವೊಂದ
8 ರಲ್ಲಿ ಸೋಮೇಶ್ವರ ದೇವರಿಗೆ ಪೂರ್ವ್ವ ಮೊದಲಾಗಿ ಸಲುವ ಭೂಮಿಯ
9 ನೂ ನಾಲು ನಿಮಗೆ ಗುತ್ತಿಗೆಗೆ ಕೊಟ್ಟೆವಾಗಿ ಆ ಚತು ಶೀಮೆ ವೊಳಗ
10 ಣ ಗದ್ದೆ ಬೆದಲು ತೋಟ ತುಡಿಕೆ ಅಡು ಮುಗ್ಗ ಮನೆ ವಣ ಸುವ
11 ರ್ಣ್ನಾದಾಯ ಕಾಟಾರಂಭ ನೀರಾರಂಭ ಕಾಣಿಕೆ ಬೇಡಿಗೆ ಯೇನು
12 ಂಟಾದ ಸರ್ವಸ್ವಾಮ್ಯವನು ಅಗುಮಾಡಿ ಅನುಭವಿಕೊಂ
13 ಡು ನೀಉ ತೆರುವ ಸ್ವುಕ್ರಿಯದ ಗುತ್ತಿಗೆ ಪ್ರಾಕು ಪ್ರಮಾ
14 ಣನು ವಿಕ್ರತು ಸಂವತ್ಸರದ ಆಷಾಢ ಶು. 1 ಆರಭ್ಯ
15 ವಾಗಿ ಖರ ಸಂವತ್ಸರದ ಜ್ಯೇಷ್ಠ ಬ 30ರ ವರೆಗೆ ತಿಂಗಳು
16 12 ಹಂಕೆ ಆ ವರ್ಷ 1ಕ್ಕೆ ತೆರುವ ಗುತ್ತಿಗೆ ಪ್ರ

17 ಕು ಪ್ರಮಾಣ ಗಟ್ಟಿಗ 40 ಅಕ್ಷರದಲ್ಲೂ ಗಟ್ಟಿ ನಾಲ್ವ
18 ತ್ತು ವರಹಂನು ಸೋಮೆಶ್ವರ ದೇವರ ಭಂಡಾರಕ್ಕೆ ಮಾಸದ
19 ದಿ ಯಾಗಿ ಸಲಿಸುವಿರಿ ಆಲಿಯದ ದೇವಸ್ಥನ ಮನು ಪೂ
20 ರ್ವ ಮರ್ಯಾದಲಿ ನಡೆಸಿ ಬಹರಿ ದಾನ ಮಾನ್ಯ ಪೂರ್ವ
21 ಮರಿಯ್ಯಾದಿ ಯೆಂದು ಕೊಟ್ಟ ಶ್ರುತ್ರಿಯದ ಕಲ್ಲಸಟ್ಟಿ
22 ಶ್ರೀ ಗೊಪಾಲ—

(ಈ ಶಾಶನದ ಕಾಲ ಕ್ರಿ.ಶ. 2–1–1530 ಎಂದು ಹೇಳಲಾಗಿದೆ)

Annual Report of the Mysore Archaeological Department for the year I946.(P. 57-58)

ಶಾಸನದ ನಂಬರ್ 46

ಅದೇ ಸುತ್ತೂರು ಗ್ರಾಮದ ವೀರಸಿಂಹಾಸನದ ಮಠದ ಶಿವರಾತ್ರಿಸ್ವಾಮಿಗಳ ಗದ್ದಿಗೆಯ ಪೀಠದಲ್ಲಿ

1 ದುಂದುಭಿಸಂವತ್ಸರದ ಮಾಘ ಶು. 10 ಸನಿವಾರದಲ್ಲೂ ಸಜನಸುದ್ಧ ಶಿವಾಚಾರ ಸಂಪಂ
2 ನರಾದಂತ ಸಿವರಾತ್ರಿ ದೇವರ ನಿರೂಪದಿಂದ ಲಿಂಗಣ ಒಡೆರು ಬಸವ ಪ್ರತಿಷ್ಟೆನು ಮಾಡಿದ ಪುಣ್ಯದ ಸೇವೆ

(ಶಾಶನ ಇಲಾಖೆಯ ವರದಿ 1930 ಪು. 194 ಈ ಶಾಸನದ ಕಾಲ ಕ್ರಿ. ಶ. ಸು. ತಾ. 7-1-1503 ಅಥವಾ ತಾ. 2-2-1563 ಎಂದು ಊಹಿಸಲಾಗಿದೆ)

ನಂ. 162

ನಂಜನಗೂಡು ತಾ|| ತಾಯೂರ ಹೋ | ಸುತ್ತೂರು ಗ್ರಾಮದ ಸಿದ್ಧಲಿಂಗ ಸ್ವಾಮಿಗಳ ಮಠದ ಬಾಗಲ ಎಡಭಾಗದಲ್ಲಿರುವದು.

ಪ್ರಮಾಣ 4'3"x1'9"

1 ಶ್ರೀ ಸ್ವಸ್ತಿ ಶ್ರೀ ಜಯಾಭ್ಯುದ
2 ಯ ಕಲಿಯುಗ ಶಾಲಿವಾಹನ
3 ಶಕ ವರುಷ 4690ನೆಯ ವ
4 ರ್ತನಕೆ ಸಲುವ ವಿರೋಧಿ ಸ
5 ಂ ವತ್ಸರದ ಜ್ಯೇಷ್ಟ ಶು. 10
6 ಸೌಮ್ಯ ವಾಶರದಲು ಸುತ್ತೂರ ಸಿ
7 ಂಹಾಶನದ ಮಹತ್ತಿನ ಕೆರೆಗೆ
8 ನಂಜನಗೂಡ 50 ಹೊಂನಗದ ಶಿವಪೂ
9 ಜೆಯ ದೇವರ ಶಿಷ್ಯರು ಉ................

10 ವ ದೇವರ ಭಕ್ತ ಮಾಡಿದ ವಿವರದಕೆ
11 ಸ 33 ಮೌಲ್ಯ ಸ 200ಕ್ಕೆ ಸ 10ಕ್ಕೆ................
12 ಡ್ಡಿಯು ವರುಶ 1ಕ್ಕೆ 69 ವರ
13 ...............ಭಂಡಾರದ

ಈ ಶಾಸನದ ಕಾಲ ಕ್ರಿ.ಶ. 1589 ಎಂದು ಹೇಳಲಾಗಿದೆ.

(ಮೈಸೂರು ಡಿಸ್ಟ್ರಿಕ್ಟ್ ಶಾಸನಗಳು ಭಾಗ I)

ನಂ. 30

ಚಾಮರಾಜನಗರ ತಾಲ್ಲೂಕು ಹೊಂಗನೂರು ಹೋಬಳಿ
ಮೇಲು ಮಾಳದಲ್ಲಿ ದೇವಳ್ಳಿಯ ಹೊಲಕ್ಕೆ
ಪಶ್ಚಿಮ ಬೇಲಿಬಳಿ ಇರುವ ಕಲ್ಲು

ಶುಭಮಸ್ತು ಶ್ರೀ ಸ್ವಸ್ತಿ ವಿಜಯಾಭ್ಯು
ದಯ ಶಾಲಿವಾಹನ ಶಕ ವರುಷ 1515
ಯ ಸಂದ ವರ್ತಮಾನವಾದ ವಿಜಯ
ಸಂವತ್ಸರದ ಭಾದ್ರಪದ ಬ 10 ಸೋ
ಮವಾರದಲ್ಲು ಶ್ರೀ ಮದ್ರಾಜಾಧಿರಾಜ ರಾಜ ಪರಮೇಶ್ವ
ರ ಶ್ರೀ ವೀರಪ್ರತಾಪ ವೆಂಕಟ ಪತ್ತಿ ಮಹಾರಾಯರು ಪ್ರು
ಥ್ವೀರಾಜ್ಯಂ ಗಯಿ ಉತ್ತಿರಲು ಹದಿನಾಡ ಸೀಮೆಯ ಪ್ರಭುದೇವಪ್ಪ
ಗವುಡರ ಮುಖಳು ಯಿಮ್ಮಡಿ ರಾಮರಾಜ ನಾಯಕರ, । ಸಜ್ಜನ ಶುದ್ಧ ಸಿವಾಚಾರಸಂ
ಪಂನರಾದ ದೇವಾಪ್ರುಥ್ವಿ ಮಹಾಮಠತ್ತಿನೊಳಗಾದ ಸುತ್ತೂರ ಸಿಂಹಾಸನಕ್ಕೆ ಕರ್ತ
ರಾದ ಸಿವರಾತ್ರಿಯದೇವರ ಸಿಷ್ಯರು ಚನ್ನಬಸವರಾಜದೇವರಿಗೆ ಕೊಟ್ಟ ಶಿಲಾಶಾ
ಸನದ ಕ್ರಮವೆಂತೆಂದರೆ ನಮ್ಮ ಹದಿನಾಡಸೀಮೆಯೊಳಗಣ ಹೊಂಗನೂರಸ್ತಳ
ದ । ಹಸುರಹಳ್ಳಿ ಗ್ರಾಮ 1ನು ನಾಉ ನಂಮದೇವಪ್ಪಗಉಡನವರು । ನಂಮ ತಾಯಿಚೆಂ
ನಾಜಿಯಂಮ್ಮನವರಿಗೆ ಪುಂಣ್ಯವಾಗಬೇಕೆಂದು ಸಿವಾರ್ಪಿತವಾಗಿ ಕೊಟ್ಟೆವಾಗಿ ಆ
ಹಸುರಹಳ್ಳಿ ಗ್ರಾಮಕ್ಕೆ ಸಲುವ ಗದ್ದೆ ಬೆದ್ದಲು ತೋಟತುಡಿಕೆ ಆಡು ಮಗ್ಗಮನೆ
ವಣ ಕಾಡಾರಂಭ ನೀರಾರಂಭ ನಿಧಿನಿಕ್ಷೇಪ ಜಲಪಾಷಾಣ ಅಕ್ಷಿಣಿ ಆಗಾ
ಮಿಸಿದ್ಧ ಸಾಧ್ಯಂಗಳೆಂಬ ಅಷ್ಟಭೋಗತ್ತೇಜಸ್ವಾಮ್ಯಂಗಳನು ಆಗುಮಾಡಿ ಅನು
ಭವಿಸಿಕೊಂಡು ನಿಂಮ ಸುತ್ತೂರು ಸಿಂಹಾಸನಕ್ಕೆ ಆಚಂದ್ರಾರ್ಕ ಸ್ತಾಯಿಗ
ಳಾಗಿ ಅನುಭವಿಸಿಕೊಂಡು ಬಹೆರಿಯೆಂದು ಕೊಟ್ಟ ಶಿಲಾಶಾ
ಸನ । ಫಲಗ್ರಂಥಾ । ಧಾನಪಾಲನಯೋರ್ಮಧ್ಯೇ ದಾನಾಚ್ರೇಯೋ

ನು ಪಾಲನಂ । ದಾನಾತ್ಸ್ವರ್ಗಮವಾಪ್ನೋತಿ ಪಾಲನಾದ್ವೈಸ್ವರಂ ಪದಂ ॥
ಇಮ್ಮಡಿ ರಾಮರಾಜ ನಾಯಿಕರ ವೊಪ್ಪ ॥ ಶ್ರೀ ಶ್ರೀ ॥
ಶ್ರೀ ಶ್ರೀ ಶ್ರೀ ಶ್ರೀ ಜಂಗಮ ಕೊಡವಡಿಯ
ಗದ್ದೆಯ ಕೊಟ್ಟಿವಾಗಿ ತಂಮ ತಂವೆ ತಯಿಗೆಕೊ
ಟ್ಟದ್ವೈಯಂಗೆ ಶಿವಲೋಕ ಪ್ರಾಪ್ತಿಯಾಗಬೇಕುಯೆಂ
ದು ಶಕಮಾಡಿ ಉ । ಅವನು ಅಳುಪಿದನಾ
ದಾಗ್ಯು ಗೋ ಉ ಕಾಸಿಯಲಿ ಕೊಂದ ಪಾ
ಪಕೆಕೆ ಪೋಪನು

(ಈ ಶಾಸನದ ಕಾಲ ಕ್ರಿ.ಶ. 1593, ಮೈಸೂರು ಡಿ॥ ಶಾಸನಗಳು ಭಾಗ 1)

**ನಂಜನಗೂಡು ತಾಲ್ಲೂಕು ಶಾಸನ 176**

ಸುತ್ತೂರು ಗ್ರಾಮದ ದೇಸಯ್ಯನ ಮಂಟಪದಲ್ಲಿ ಪಶ್ಚಿಮದ 2ನೇ ಕಂಭದಲ್ಲಿ
ಪ್ರಮಾಣ 1'8"x1'9"

1 ಸ್ವಸ್ತಿ ಶ್ರೀ ವಿಜಯಾಭ್ಯುದಯ ಕಲಿಯುಗ
2 ಪ್ರಮಾಣ ಲ 432000ಕ್ಕೆ ಸಂದ ಕಲಿವರು
3 ಷ 4772 ಶಾಲಿವಾಹನ ಶಕ ವರು
4 ಷ 1593 ಸಂದಾ ವಿರೋಧಿ ವಿಕೃತು
5 ಸಂವತ್ಸರದ ಶ್ರಾವಣ ಶು. 10 ಶುಕ್ರ
6 ವಾರ ಶ್ರೀ ಸ್ವಾಮೀಶ್ವರ ಸ್ವಾಮಿಯವರ
7 ನಿರೂಪದಿಂದಲು ಸ್ಥಾನಿಕ ನಿಜಲಿಂಗ
8 ವಡೆಯರ ಮಗ ಗಂಗೊಡೆಗು ಗಂಗೊ
9 ಡೆಯರ ಮಗ ಚಂದಯ್ಯನ ತಮ್ಮ ದೇಪೈ
10 ಯನು ಮಾಡಿಸಿದ ಮಂಟಪದ ಸೇವೆಗೆ ಮ
11 ಉಳ್ಯ ಕಂಗ 10 ಕೆ ಬಡಿಗ 190 ಗ । ವಷವಂ
12 ನ ಸೇವ್ಗೆ ದೇವಸ್ಥಾನಕ್ಕೆ ಕೋಟೆಮ ಉಳ್ಯಕೆ
13 ಶುಭಮಸ್ತು ॥ ಸ್ವದತ್ತಾ ದ್ವಿಗು
14 ಣಂ ಪುಣ್ಯಂ ಪರದತ್ತಾನು ಪಾಲಂ । ಪರದ
15 ತ್ತಾಪ ಹಾರೇಣ ಸ್ವದತ್ತಂ ನಿಷ್ಪಲಂ ಭವೇತ್ ॥

(ಈ ಶಾಸನ ಕಾಲ ಕ್ರಿ.ಶ. 1671 ಮೈಸೂರು ಡಿ॥ ಶಾಸನಗಳ ಭಾಗ 1)

44

ಅದೇ ಸುತ್ತೂರು ಮಠದ ಶಿವರಾತ್ರಿಸ್ವಾಮಿಗಳು ಹಾಜರುಮಾಡಿದ 3ನೆಯ
ಸನ್ನದು. ಕನ್ನಡ ಅಕ್ಷರ

ಶ್ರೀ

1 ಸರ್ವಧಾರಿ ಸಂ | ಆಷಾಢಶು 3ಲ್ಲೂ ಶ್ರೀಮತ್ಸಕಲಗುಣ ಸಂಪನ್ನರಾ 32
2 ದಂತ್ಥಾ ಪ್ರಧಾನ ವೆಂಕಪ್ಪೈಯನವರಿಗೆ | ಅದಾಗಿ | ಶಂಕರನಾರಾಯಣದಲ್ಲಿ
3 ಯಿರುವ ಮಠಕ್ಕೆ ಮೊದಲು ಹೈಗ 16·0 ವರಹ ನಡುದು ಬರುವದು ಸರಿ
4 ಯಷ್ಟೆ | ಯೀಗ ಮತ್ತೂ ಹೆಚ್ಚಾಗಿ ಹೈಗ 8 ವರಹವಂನ್ನು ಅಪ್ಪಣೆಕೊಡ್ಸಿ
5 ಯಧೀತ್ತು ಉಭಯಂ ಹ್ನೆದರಿಗ 24·0 ವರಹ ಇಪ್ಪತ್ತುನಾಲ್ಕು ವರಹ
6 ಕ್ಕೆ ಸರಿಯಾಗಿ ಯಿವರು ಕೇಳಿದ ಬಳಿಯ ತೋಟಗದ್ದೆ ಸಹ ಬಿಡಿಸಿಕೊ
7 ಟ್ಟು ಸುರೂಚಿಯಾಗಿ ನಡಸಿಕೊಂಡು ಬರುವದು | ಯಿಹಣಕ್ಕೊಟ
8 ಪಗದ ಮುಂತಾದನ್ನು ಕ್ಯಾಳದಂತ್ತೆ ಸ್ಥಳಕ್ಕೆ ತಾಕಿತಿಮಾಡಿಸಿ ಯೀನಿ
9 ರೂಪನಂನ್ನು ಶಾನಭಾಗರ ಕಡಿತಕ್ಕೆ ಬರಸಿ ಪುನಃ ಯಿಮಠದವಡೆ
10 ರ ವಶಕ್ಕೆ ಕೊಡಿಸುವದು ॥ (ರುಜುವಿದೆ)

(ಶಾಸನ ಇಲಾಖೆ ವರದಿ 1930 ಪು, 191-192)

ಕಾಲ ಕ್ರಿ.ಶ. 17-6-1768

### ನಂ. 45

**ಪುತ್ತೂರು ಮಠದ ಪಟ್ಟದ ಶಿವರಾತ್ರಿ ಸ್ವಾಮಿಗಳ ಬಳಿ ಇರುವ ತಾಮ್ರಶಾಸನ 1 ಹಲಗೆ.**

**ಸೂರ್ಯ, ಚಂದ್ರ.** **ಬಸವ, ಲಿಂಗ.**

1 **ಶ್ರೀ ಶಾಮಾ.**
2 ಸ್ವಸ್ತಿ ಶ್ರೀ ವಿಜಯಾಭ್ಯುದಯ್ಯ | ಶಾಲಿ
3 ವಾಹನಶಕ ವರ್ರುಷಂಗಳು 1693
4 ನೆ ಖರ ಸಂವತ್ಸ ಥ ಶ್ರಾವಣ ಶು 10
5 ಲ್ಲು | ಧೆವನಗರದ ಪೆಟಿಶೆಟ್ಟಿಪಟಣ
6 ಶ್ಯಾಮಿ ಮುಂತಾದ ಉಭಯ್ಯ ನಾನಾ
7 ದೆಶದ ಮಹನಾಡಿನವರ್ರು | ಕಾಳಂ ಗರಿಡಿ
8 ಮಟಕ್ಕೆ ಬರಸಿಕೊಟ ಧರ್ಮಶಾಶಾನ
9 ದಕ್ರಮವೆಂತೆಂದರ್ರೆ ಅದಾಗಿ | ಯಡದೊ
10 ರ್ರೆ ಕೋಟೆಮಾರ್ಗದಲ್ಲಿ | ಮೂಲೆ ಹೇರ್ರಿಗೆ ಕಾಸು
11 1 ಜವಳಿನಡೆಗೆ ಕಾಸು 2| ಹೊಗೆಸೊಂಪಿನ
12 ನಡೆಗೆ ಕಾಸು 2 ಯಲೆ ನಡೆಗೆ ಯಲೆಕಂಟು 1
13 ತಲೆಹೊರೆಗೆಜಉಕ | ಅರ್ರಿಸಿಣ ಮೆ
14 ಣ್ಸು ಮುಂತಾದಕವಾಡಸರಕಿನ ಹೆ
15 ರ್ರಿಗೆಲ್ಲಾ ಕಾಸು 2 ಡರ ಮೆರೈಯಲ್ಲು | ಕೊ

16 ಟುನಡಸಿಕೊಂಡುಬರಲುಳವರ್ರು ಯುಂ
17 ದುಭರ್ರೆಸಿಕೊಂಟ ಧರ್ಮಶಾಸನ
18 ಯಿದರ್ನ್ನಕ್ಕೆ ಯಾರರುದರುಯಿಂ
19 ಲ್ಲಾ ಯಂದವರ್ರಿಗೆ ಕಾಸಿಯಲ್ಲಿ
ಹಿಂಭಾಗ)
20 ಗೋಹುತ್ಯ ಮಾಡಿದ ಪಾಪ ಮಾತ್ರು
21 ಗಮನಮಾಡಿದಪಾಪ ಶಿಶುಹ
22 ತ್ಯಗೊಹತ್ಯ ಮಾಡಿದ ಪಾಪಕ್ಕೆ
23 ವಳಗಾಗುವರುಯೆಂನುದಾಗಿ
24 ನಾನಾ ದೇಸದವರು ಐವತಾರ್ರು
25 ದೇಸದವರ್ರು ಬರಸಿಕೊಂಟ ದ
26 ರ್ಮ ಶಾಸನವರ್ತನೆಪಂಟ್ಟೆ
27 ಶ್ರೀ ಬಸವೇಶ್ವರಸ್ವಮಿ
28 ಯವರು ||

(ಶಾಸನ ಇಲಾಖೆಯ ವರದಿ 1930 ಪು. 192–93

ಕಾಲ ಕ್ರಿ.ಶ. 19–8–1771

43

ಅದೇ ಸಂತ್ತೂರು ಮಠದ ಶಿವರಾತ್ರಿಸ್ವಾಮಿಗಳ ಬಳಿ ಇರುವ 2ನೆಯ ಸನ್ನದು.

ಕನ್ನಡ ಅಕ್ಷರ.

ಕೃಷ್ಣರಾಜವಡೆಯರವರು.

1 ಪ್ರಜೋತ್ಪತ್ತಿ ಸಂವತ್ಸರದ ಫಾಲ್ಗುಣ ಬಹುಲ
2 ಶ್ರೀಮತ್ತು || || ತಾಯೂರು
3 ಹರದನಹಳ್ಳಿ ಗುಂಡ್ಲು ತೆರಕಣಾಂಬಿ ಹೆಗ್ಗ
4 ಡದೇವನಕೋಟಿಪ್ಪೆರಿಯಪ್ಪಟ್ಣ ಕಟ್ಟಿಮಳ
5 ಲವಾಡಿಬೆಟ್ಟದಪ್ಪುರ ವ್ಯೆಯ್ಸೂರು ಅಷ್ಟಗ್ರಾ
6 ಮಮುಳವಳೀಬೆಂಗ್ಗಳೂರು ಯಿಮುಂತ್ತಾದ ಅ
7 ರಮನೆ ಶಿಮೆಗಡಿಗಳ ಅಮಿಲದಾರ ಕಿಲ್ಲೆದಾ
8 ರರಿಗೆಸಹಾಬರ್ಸ್ಸಿ ಕಳುಯಿಸ್ತನಿರೂಪ
9 ಅದಾಗಿ ತಾಯೂರು ತಾಲ್ಕು ಸುತ್ತೂರು ಮಠ
10 ದವಪೆರಪಟದದೆವರು ತಂಮ್ಮ ಮಠದ ವಿ
11 ಚಾರಣೆಬಗ್ಗೆ ನಿಂಮ ನಿಂಮ ತಾಲ್ಕುಗಳಿಗೆ ಬಂದಿ

ರುವವರಿಂದ್ದಾ ಆಯಾ ತಾಲ್ಲೊಕ್ಕಿನಲ್ಲಿಯಿರುವ ಮಠ
ದ ವಡೆರಗಳು ಸದರಿ ಸುತ್ತೂರು ಮಠದ ವಡೆರ
ಮೂಲ ಮತ್ತನಂನ್ನು ಅಪ್ಪಹರ್ರಿಸಿಕೊಂಡಿರ್ರುವಂತ್ಥಾ
ದ್ದಂನ್ನು ವಿಚಾರಣೆಮಾಡಿ ತಂಮ್ಮವಡನೆ ತಾಲು
ವಸೂಲ್ಲುಮಾಡಿಕೊಳುವಲ್ಲು ಆಯಾ ಸ್ಥಳದಲ್ಲಿ ಯಿ
ರುವ ತಂಮ ಮಠಗಳ ಆಚಾರವಿಚಾರ ವುಂ
ತ್ತಾಗಿಮಾಡಿ ಕೊಳುವಲ್ಲು ಅಡ್ಡಿ ಸಡಿಮಾಡದಂತೆ
ಪ್ರಾಕ್ಕು ಕಚೇರಿತಾಕಿತಿಯು ಬರದ ಬಂದ್ದಮೆರ್ರಿ
ಗೆ ಯಿಗಲ್ಲು ಅದೆ ಪ್ರಕಾರಕ್ಕೆ ನಡೆದುಕೊಳುವಂತೆ
ಅಪ್ಪಣೆಕೊಡ್ಸಿಯಿಥಿಕಾದ ಕಾರಣಾ ನಿಂಮ್ಮನಿಂಮ್ಮ
ತಾಲ್ಲುಕುಗಳಲ್ಲಿಯಿರುವ ಸದರಿ ಸುತ್ತೂರು ಮಠದ
ಪಟ್ಟದ ದ್ಯಾವರ್ರು ವಡೆರ ಯಿಲಾಖೆಮಠ
ಗಳ ಆಚಾರ ವಿಚಾರ ವಿಚಾರಣೆಮಾಡುವ
ಲ್ಲು ಯುವರ್ರು ವಡವೆ ತೆಗದುಕೊಂಡಿದ್ದವರ ವಿ
ಚಾರಣೆಮಾಡಿ ಬರಮಾಡಿಕೊಳುವಲ್ಲು ನೀಉ
ಅಡಿಸಡಿಗಳ ಮಾಡದಂತೆ ಸಾಬಕ್ಕೂ ದಸ್ತೂರ್ರು
ಪ್ರಕಾರಕ್ಕೆ ಶರರಾಸುನಡ್ಸಿಕೊಂಡು ಬರ್ರುವದು
ಯಿ ಬಗ್ಯೆ ಆಯಾಸ್ಥಳದ ಮಟ್ಟದ ವಡೆರಗಳು
ಯಿ ವಿಷಯವಾಗಿ ತಂಟೆಬಂಟೆಗಳಮಾಡಿ
ದಲ್ಲಿ ನೀಉ ವಾಜಬಿಯಿದ್ದ ಮೇರೆಗೆ ಚಂನ್ನಾಗಿ
ದರ್ಯಾಃಪ್ತುಮಾಡಿ ಸಾಬಕ್ಕು ಮಾಮೂಲ್ಲು ಪ್ರಕಾ
ರಕ್ಕೆ ನಡೆದುಕೊಳುವ ಹಾಗೆ ನಿಂಮ್ಮನಿಂಮ್ಮ ತಾಲ್ಲುಕು
ದಲ್ಲಿ ಯಿರುವಂತ್ಥಾವಡೆರಿಗೆ ಜೋರತಾಕಿಯಿತು ಮಾ
ಡುವದು ಯಿದು ಹೊತ್ತ್ರ್ ಯಿವರು ಸುತ್ತೂರು
ಮಟ್ಟಕ್ಕೆ ಶಿಸುಯಿಂದಾ ಭಿಕ್ಷಾಟನಾವರಾವಿಕೊಂ
ಡು ತಂಮ್ಮ ತಂಮ್ಮ ಶಿಷ್ಯಜನರಕಡೆಯಿಂದ್ದಾ
ದವ್ಸದಾಂನ್ಯವೆನಾದರ್ರು ತಂದುಕೊಳುವಲ್ಲು
ಸಾಯರ ಯಿಲಾಖೆಯವರು ಸುಂಕ್ಕ ಬರಬೇ
ಕೆಂದು ಅಡ್ಡಿ ಮಾಡದಂತೆ ತಾಕಿಯಿತು ಮಾಡಿ ಯಿ
ವಿಚಾರವಾಗಿ ಸದರಿ ಅಪ್ಪಣೆಕೊಡ್ಸಿಯಿರುವ ಪ್ರ
ಕಾರಕ್ಕೆ ಸರಬಾಸು ನಡೆಸಿಕೊಂಡು ಬರ್ರುವದ್ದು ಯಿ

43 ನಿರ್ರುಪ್ಪದ ನಕಲಂನ್ನು ಸರಕಾರದ ದಪ್ತರಕ್ಕೆ ಬರ್ಸಿ
44 ಅಸಲ್ಲು ನಿರುಪ್ಪವನ್ನು ಸದರಿ ಸುತ್ತೂರು ಮಟ್ಟಿ
45 ದ ಪಟದ ದ್ಯಾವರ್ರು ವಡೆರವಶಕ್ಕೆ ವಾಪ್ಸು ಕೊಡು
46 ವದು ತಾರಿಖ್ಕುಗುರ್ರೆ ಮಾಹೆ ಮಾರ್ಚಿ ಸನ್ 1812
47 ನೆ ಯಿಸವಿ ಖತ್ತ ಅಶ್ವಥನಾರ್ಯ್ಯಯ್ಯ ಮುನಶಿ
48 ಹಜೂರ ಶ್ರೀಕೃಷ್ಣ

(ಶಾಸನ ಇಲಾಖೆ ವರದಿ 1930, ಪು. 188–189)

ಕಾಲ ಕ್ರಿ. ಶ. 1-3-1812

42

ನಂಜನಗೂಡು ತಾಲ್ಲೋಕು ಬಿಳಿಗೆರೆ ಹೋಬಳಿ ಸುತ್ತೂರು ಮಠದ ಪಟ್ಟದ
ಶಿವರಾತ್ರಿಸ್ವಾಮಿಗಳ ಬಳಿ ಇರುವ ಸನ್ನದು

ಕನ್ನಡ ಅಕ್ಷರ.

ಕೃಷ್ಣ ರಾಜವಡೆಯರವರು

1 ಚಿತ್ರಭಾನು ಸಂವತ್ಸರದ ಕಾರ್ತ್ತೀಕಶು 12 ಮಂಗಳವಾರದಲ್ಲು ಶ್ರೀಮತು
2 ॥ ॥ತ್ತಾಯೂರು ಅವಿಾಲ ಶೇಷಗಿರಿ ರಾಯರಿಗೆ ಬರಶಿ ಕಳುಯ್ಸಿ
3 ದನಿರೂಪಾ ಅದಾಗಿ ಯಿತಾಲೂಕು ಪೈಕಿ ಸುತ್ತೂರು ಮಠದ ಬಸವ ಲಿಂಗವಡೆರಿಗೆ
4 ಕಂಟೆರಾಯಿ ಮುವತ್ತು ಹಣದ ಭೂಮಿಯಂನು ಸರ್ವಮಾಂನ್ಯವಾಗಿ ನಡಸುವ ಬಗ್ಗೆ
5 ಅಪ್ಪಣೆಕೊಟ್ಟು ಯಿಧಿತ್ತು ಸಾಗುವಳಿ ಭೂಮಿಯಲಿ ಬಿದ್ದಲು ಭೂಮಿ ಯಂನ್ನು
6 ಸಕಕಾರದವಾರದ ಭೂಮಿಯಲಿ ಅಗಲಿಂಬವಲು ಮಾಡಿಯಿರುವ ಕಂದಾಯದ
7 ಭೂಮಿಯಲಿ ಅಗಲಿ ಯಿದರಲಿ ಯಿವರು ಕೇಳದ ಬಳಿಯ ಕಂಟೆರಾಯ ಮುವತ್ತು ಹ
8 ಣದ ಭೂಮಿಯಂನು ಗೊತ್ತುಮಾಡಿಕೊಟ್ಟು ಚಿತ್ರಭಾನು ಸಂವತ್ಸರದ ಅರಭ್ಯ ವರುಷಂ
9 ಪ್ರತಿಯಲುತ್ತಾ ಜಾಸಂನದು ಪೂಜಾರುಮಾಡದೆ ನಿರುಪಾಧಿಕದಲಿ ಸರ್ವ ಮಾಂನ್ಯವಾಗಿ
10 ನಡಶಿಕೊಂಡು ಬರುವದು ಯಿಭೂಮಿಗೆ ಲಿಂಗಮುದ್ರೆಶಿಲಾ ಪ್ರತಿಷ್ಟೆ ಮಾಡಿಶಿಕೊಡು

11 ವದು ಯಿಸಂನದ ನಕಲುತ್ತಾಲೂಕದ ಶಿರಸ್ತಾರದಪ್ತರಕೆಬರಶಿ ಆಸಲು ಸಂನದು
12 ಸದರಿ ಬಸವವಂಗವಡೆರ್‍ಸ್ರು ವಶಕ್ಕೆ ಕೊಡುವದು ಬತ್ತಾರಿಕು 26 ನೆ ಮಾಹೆ ನವಂ
13 ಬರಶ್‌ಂ 1822 ನೆ ಯಿಸವಿ ಖ್ತ ಸುಬ್ಬೈಯಾ ಮುನಷಿಹಜೂರುಪೂರ
14 ನೂರ್‍ಸ್ರು ಕಂಟಿರಾಯು ಮೂರು ವರಹದ ಭೂ
15 ಮಿಾಯಿನಾಮಾಗಿ ನಡೆಸಿಕೊಂಡುಬರ್‍ಸ್ರು
16 ವದು ಶ್ರೀಕೃಷ್ಣ
17 ಪೈಯಿ ವಸ್ತಿಕೆ ಚಿತ್ರಭಾನು ಸಂ॥ ರದ
18 ಉಭಯಾತ್ಮಕ ಪುಷ್ಯ
19 ಬಃಮುಂಗಳವಾರ

(ಶಾಸನ ಇಲಾಖೆಯ ವರದಿ 1930 ಪು. 186)

ಕಾಲ ಕ್ರಿ. ಶ. 26-11-1822

ಶ್ರೀ

ನಂಜನಗೂಡು ತಾಲ್ಲೋಕು ಸುತ್ತೂ
ರು ಗ್ರಾಮದಲ್ಲಿ ಪುರಾತನವಾದ ಹ
ನ್ನೊಂದನೆಯ ಶತಮಾನದಲ್ಲಿ ರಾ
ಜೇಂದ್ರ ಚೋಳರಿಂದ ನಿರ್ಮಿತ ವಾ
ದ ಶ್ರೀ ಸೋಮೇಶ್ವರ ಸ್ವಾಮಿಯವ
ರ ಆಲಯವು ಶಿಥಿಲವಾಗಿದ್ದುದರಿಂ
ದ ಸುತ್ತೂರು ಶ್ರೀ ವೀರ ಸಿಂಹಾಸನ
ಮಠದ ಪಟ್ಟದ ಶ್ರೀ ಶಿವರಾತ್ರಿ ಸ್ವಾ
ಮಿಗಳು ಜೀರ್ಣೋದ್ಧಾರವನ್ನು ಮಾ
ಡಿ ಇದರ ಪ್ರವೇಶ ಮಹೋತ್ಸವ ವ
ನ್ನು ಭಾವನಾಮ ಸಂವತ್ಸರದ ಮಾ
ಘ ಬಹುಳ 2 ಬುಧವಾರ ತಾ॥ 20-2-1935
ರಲ್ಲು ನೆರವೇರಿಸಿರುತ್ತಾರೆ. ಶ್ರೀ ಶ್ರೀ ಶ್ರೀ.

(ಮುದ್ರಣದಲ್ಲಿ ಕೈತಪ್ಪಿದ ಕೆಲವು ಮಹನೀಯರ ಅಭಿಪ್ರಾಯಗಳು)

ಈ ಹೊತ್ತು ಶ್ರೀ ಶ್ರೀ ಜಗದ್ಗುರು ಶಿವರಾತ್ರೀಶ್ವರ ಮಹಾಸ್ವಾಮಿಗಳ ದರ್ಶನದಿಂದ ಪುನೀತನಾದೆ. ಸ್ವಾಮಿಗಳವರು ನಿತ್ಯ ಬರೆಯುತ್ತಿದ್ದ ಮಂತ್ರಗಳನ್ನು ನೋಡಿ ಆನಂದ ಪಟ್ಟೆನು.

13-7-61

ಡಾ. ವಿ. ಕಿ. ಪಾವಟೆ
ವೈಸ್ ಛಾನ್ಸಲರ್ ಕರ್ನಾಟಕ ವಿಶ್ವವಿದ್ಯಾನಿಲಯ

ಪರಮ ಪೂಜ್ಯರಾದ ಮಹಾಸ್ವಾಮಿಗಳವರ ದರ್ಶನ ಲಾಭವು ನನಗೆ ಈ ದಿನ ಮಠದಲ್ಲಿ ಲಭಿಸಿ ಸ್ವಾಮಿಗಳವರ ಆಶೀರ್ವಾದದಿಂದ ಆನಂದಭರಿತನಾದೆನು. ಶ್ರೀಗಳವರು ಸಮಾಜದ ಸರ್ವತೋಮುಖವಾದ ಕಲ್ಯಾಣಕ್ಕಾಗಿ ಅದರಲ್ಲೂ ಶಿಕ್ಷಣ ಪ್ರಸಾರಕ್ಕಾಗಿ ಸಂಸ್ಥಾನದ ನಾನಾಕಡೆಗಳಲ್ಲಿ ಉಚಿತ ವಿದ್ಯಾರ್ಥಿ ನಿಲಯಗಳನ್ನು ಏರ್ಪಡಿಸಿರುವುದು ತುಂಬಾ ಪ್ರಶಂಶನೀಯವಾಗಿದೆ. ಒಟ್ಟಿನಲ್ಲಿ ಶ್ರೀಗಳವರು ನಾಡು ನುಡಿ ಸೇವೆಗಾಗಿ ಗುರುತರವಾದ ಜವಾಬ್ದಾರಿ ಹೊತ್ತಿರುವುದು ಸಮಾಜದವರ ಪುಣ್ಯ. ಶ್ರೀಗಳವರ ಆಶ್ರಯ ಆಶೀರ್ವಾದ ಬಲದಿಂದ ಲೋಕ ಕಲ್ಯಾಣ ಸತತ ಸಾಧಿಸಲೆಂದು ಅನನ್ಯ ಭಕ್ತಿಪೂರ್ವಕವಾದ ಪ್ರಾರ್ಥನೆ.

ಹೆಚ್. ಸಿದ್ದಯ್ಯ
ರೆವಿನ್ಯೂ ಸಚಿವ

ತಾ. 5-10-1958

I consider it a rare opportunity to have been able to visit this ancient religious institution to-day. This mutt is one of the greatest centres of piety and learning in this part of the countıy. The popularity and prosperity of the mutt is undoubted by race to the untiring energy and devotion which is the spirit of the president Swamiji Sri Shivaratri swamiji gurugalu.

Sd) K· Narayana Iyengar
Director of Archealogy

(camp) Suttur 11-1-52

The members of the Religious endowment commission had the opportunity to visit the mutt on invitation of His Holiness head of the mutt and to learn the details of the farthing and comprehensive educational and religious programme of the mutt.

It is our hope and prayer that this Example will be followed by other communities and religious denomination

15-9-60 Sd) C. P. Ramaswamy Iyer

I had the previlage of meeting Swamiji to-day and learnt about the good work that he had done and is doing. He is a great in spiration for the young generation. I am sure the institution started by the mutt will prosper.

(camp) Sd. Dr. Lal
Mysore Asst. Educational Adviser
9-3-60 to the Govt. of India
Ministry of Education
New Delhi

ಸುತ್ತೂರು ಶ್ರೀ ವೀರಸಿಂಹಾಸನ ಮಠಕ್ಕೆ ಭೇಟಿಯಿತ್ತು ಪ್ರಣವರೂಪಿ ಶ್ರೀ ಶ್ರೀ ಶಿವರಾತ್ರಿಸ್ವಾಮಿಗಳ ದರ್ಶನ ಭಾಗ್ಯ ಮತ್ತು ಆಶೀರ್ವಾದಗಳನ್ನು ಪಡೆಯುವ ಸುಯೋಗವು ನನಗೆ ಈ ದಿನ ಲಭಿಸಿತು. ಧರ್ಮಾಭಿಮಾನಿಗಳೂ, ವಿದ್ಯಾಭಿಮಾನಿಗಳೂ, ತಪಸ್ವಿಗಳು, ಜ್ಞಾನಿಗಳೂ, ಆದ ಶ್ರೀಗಳವರ ನೇತೃತ್ವದಲ್ಲಿ ನಡೆಯುತ್ತಿರುವ ಈ ಸಂಸ್ಥೆಯ ಸತ್ಕಾರ್ಯಗಳು ಜನತೆಗೆ ಮಾರ್ಗದರ್ಶಕಗಳಾಗಿರುವುವು.

ಪ್ರಶಾಂತ ವಾತಾವರಣದಲ್ಲಿರುವ ಈ ಮಠದಲ್ಲಿ ಸೇವಾಮನೋಭಾವದಿಂದ ನಡೆಸಲ್ಪಡುತ್ತಿರುವ ಕಾರ್ಯಕ್ರಮಗಳು ಶ್ಲಾಘನೀಯವಾದುವೇ ಸರಿ. ಮುಖ್ಯವಾಗಿ ನಮ್ಮ ಪ್ರಾಚೀನ ಸಂಸ್ಕೃತಿಯಲ್ಲಡಗಿರುವ ಉದಾತ್ತಭಾವನೆಗಳು ಈ ತೆರನಾದ ಸಂಸ್ಥೆಗಳ ವಾತಾವರಣದಲ್ಲಿ ಪ್ರಜೋದಗೊಂಡು ಲೋಕಕ್ಕೆ ಬೆಳಕನ್ನು ಹರಡಲೆಂದು ಬಯಸುತ್ತೇನೆ.

ಎಲ್. ಮಹಾದೇವಯ್ಯ,
Major Sirdar, Secretary-in-waiting
2-4-1956 to H.H. the Maharaja of Mysore

ಈ ದಿನ ಈ ಪುಣ್ಯಕ್ಷೇತ್ರಕ್ಕೆ ಬಂದು ಶ್ರೀ ಸುತ್ತೂರು ವೀರಸಿಂಹಾಸನ ಮಠಾಧೀಶ್ವರ ಶ್ರೀ ಶ್ರೀ ಜಗದ್ಗುರು ಶಿವರಾತ್ರಿ ಮಹಾಸ್ವಾಮಿಗಳ ದರ್ಶನಾಶೀರ್ವಾದಗಳನ್ನು ಪಡೆದು ಧನ್ಯನಾದೆ. ಶ್ರೀ ಪೂಜ್ಯಪಾದಂಗಳವರು ಮೈಸೂರು ಜಿಲ್ಲೆಯ ಎಲ್ಲೆಡೆ

ಗಳಲ್ಲೂ ವಿದ್ಯಾಪ್ರಸಾರ ಕಾರ್ಯದಲ್ಲಿ ತೊಡಗಿ ಸಾವಿರಾರು ವಿದ್ಯಾರ್ಥಿಗಳಿಗೆ ಅನ್ನವಸನಗಳನ್ನಿಟ್ಟು ಪ್ರಸಾದನಿಲಯಗಳನ್ನು ಸ್ಥಾಪಿಸಿ ಜನತೆಯ ಭಕ್ತಿ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ. ಶ್ರೀ ಶ್ರೀಯವರು ಲೋಕಕಲ್ಯಾಣಕ್ಕಾಗಿ ಶಿವಷಡಕ್ಷರ ಮಹಾಮಂತ್ರದ ಬರವಣಿಗೆಯ ಮಹಾತಪಸ್ಸನ್ನು ಪೂರ್ತಿಗೊಳಿಸಿ ಯಶಸ್ವಿಯಾಗಿದ್ದಾರೆ. ಇಂಥಾ ಮಹಾಮಹಿಮರನ್ನು ಪಡೆದಿರುವ ನಾವೇ ಧನ್ಯರು.

ಸುತ್ತೂರು
6-2-1957

ಡಿ. ಆರ್. ಚನ್ನರುದ್ರಯ್ಯ
ಡೆಪ್ಯುಟೀ ಕಮೀಷನರ್, ಮೈಸೂರು

ಪೂಜ್ಯ ಶ್ರೀ ಶ್ರೀ ಶಿವರಾತ್ರಿ ಮಹಾಸ್ವಾಮಿಗಳವರು ಒಬ್ಬ ಪವಾಡ ಪುರುಷರು ನಿಷ್ಠತಪೋಧನರು. ಮಹಾತ್ಯಾಗಿಗಳು. ಅವರ ಆಶೀರ್ವಾದ ಪಡೆದು ಚರಮೂರ್ತಿಗಳಾದ ಶ್ರೀ ಶ್ರೀ ಸುತ್ತೂರು ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳು ಅನೇಕ ವಿದ್ಯಾಸಂಸ್ಥೆಗಳನ್ನು ಸುವ್ಯವಸ್ಥಿತವಾಗಿ ನಡೆಸುತ್ತಿರುವುದು ಕನ್ನಡ ನಾಡಿನ ಭಾಗ್ಯ.

ಪೂಜ್ಯ ಹಿರಿಯ ಮಹಾಸ್ವಾಮಿಗಳು ಷಡಕ್ಷರಿ ಮಂತ್ರದ ಮಹಿಮೆಯನ್ನು ಬಲ್ಲವರು ಈಗಾಗಲೇ ಈ ಮಂತ್ರವನ್ನು ಸುಮಾರು ಎರಡುಕೋಟಿ ಬರೆದು ಕನ್ನಡ ನಾಡಿನ ಎರಡುಕೋಟಿ ಜನರ ಅಭ್ಯುದಯಕ್ಕೆ ನಾಂದಿಯನ್ನು ಹಾಡಿ ಹರಸಿರುವುದು ನಮ್ಮ ಸುದೈವ. ಈ ಷಡಕ್ಷರಿ ಮಂತ್ರವು ನಾಡಿನಲ್ಲಿ ಹರಡಿರುವ ಅಜ್ಞಾನ, ರೋಗ ಬಡತನಗಳೆಂಬ ತಾಪತ್ರಯಗಳನ್ನು ಹೋಗಲಾಡಿಸುವುದರಲ್ಲಿ ಯಾವ ಸಂದೇಹವೂ ಇಲ್ಲ.

ಮೊಕ್ಕಾಂ-ಮೈಸೂರು
10-1-1962

ಕೆ. ಎಸ್. ಧರಣೇಂದ್ರಯ್ಯ
ಡೈರೆಕ್ಟರು, ಸಾಹಿತ್ಯ ಸಂಸ್ಕೃತಿ
ಅಭಿವೃದ್ಧಿ ಇಲಾಖೆ ಬೆಂಗಳೂರು

I an very happy to know that the Senior swamiji of Suttur Mutt has completed the writing of Shadakshri Mantra one crore and eightyeight lakh times. This is a stupendous achievement. I am confident that he will achieve the target of 2 crores.

I have been watching the educational activities of the Junior Swamiji of Suttur Mutt during the last ten years. What he has achieved is highly significant. The Swamiji has recently entered the field of Teacher Training and his work is very much appreciated by

## ನಮ್ಮ ಪ್ರಕಟಣೆಗಳು

| | | |
|---|---|---|
| 1) | ಆದರ್ಶವಿವಾಹ (ನಾಟಕ) | 1—00 |
| 2) | ಶರಣಪ್ರಕಾಶ | 1—25 |
| 3) | ಸಂಕ್ಷಿಪ್ತ ಲಿಂಗಪೂಜಾವಿಧಿ | 0—50 |
| 4) | ಶಿವಮಂತ್ರ ಮಹಿಮೆ | 1—00 |
| 5) | **Education What It Should Be** | 1—00 |

## ಬರಲಿರುವ ಕೃತಿಗಳು

1) ಶ್ರೀ ಶಿವರಾತ್ರಿ ಶಿವಾಚಾರ್ಯ
2) ಘನಲಿಂಗಿಯ ವಚನಗಳು
3) ಅಮುಗಿದೇವನ ಸಾಂಗತ್ಯ

[ವಿ.ಸೂ.—ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿಯ ಕೃತಿಗಳು ನಮ್ಮಲ್ಲಿ ಬೆಲೆಗೆ ದೊರೆಯುತ್ತವೆ.]


## ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ

ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾವಿದ್ಯಾಪೀಠ
ರಾಮಾನುಜಾ ರಸ್ತೆ, ಮೈಸೂರು